# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ).

**ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.**
**ಎಂ.ಎಲ್.ಹಳ್ಳಿ, ಸಾಗರ ತಾಲೂಕು,**
**ಶಿವಮೊಗ್ಗ ಜಿಲ್ಲೆ. ಫೋನ್: 08183–296516**
**9449921950, 9449774451**

**ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ**
**ಐ.ಬಿ. ಹತ್ತಿರ, ಹೊಸನಗರ–577418**
**ಶಿವಮೊಗ್ಗ ಜಿಲ್ಲೆ ಫೋನ್: 08185–221915**
**9449921950**

**(CBSE & State Syllabus)**



**ಮಾನ್ಯ ವಿದ್ಯಾಕಾಂಕ್ಷಿಗಳೇ.**

**"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸಖಂಡಗಳು, ಉಕ್ಕಿನಂತಹ ನರಗಳು, ಯಾವುದಕ್ಕೂ ಜಗ್ಗದ ಪ್ರಚಂಡ ಇಚ್ಛಾಶಕ್ತಿಯಿರುವ ಸಿಂಹ ಸದೃಶ ವ್ಯಕ್ತಿಗಳು. ಇಂತಹ ವ್ಯಕ್ತಿಗಳ ನಿರ್ಮಾಣ, ಸಮಗ್ರ ಶಿಕ್ಷಣದಿಂದ ಮಾತ್ರ ಸಾಧ್ಯ"** ಎಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಶಿಕ್ಷಣದ ಧ್ಯೇಯವನ್ನಿಟ್ಟುಕೊಂಡು ಧೀಮಂತ ಸುಸಂಸ್ಕೃತ, ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣವನ್ನು ನೀಡುತ್ತಿವೆ, ಮೇಲ್ಕಂಡ ಶ್ರೀ ರಾಮಕೃಷ್ಣ ವಿದ್ಯಾಸಂಸ್ಥೆಗಳು.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ವಸತಿ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕ್ರಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ಸಂಸ್ಥೆಗಳು ಮಕ್ಕಳನ್ನು ಅಕ್ಕರೆಯಿಂದ, ಮಮತೆಯಿಂದ ಪೋಷಿಸಿ ಅವರ ಅಂತರಂಗದಲ್ಲಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನು ರೂಪಿಸುತ್ತಿವೆ. ದೇಶಾದ್ಯಂತ ಖ್ಯಾತಿ ಹೊಂದಿರುವ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:–** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :–** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:–** ಎಲ್.ಕೆ.ಜಿ. ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಮತ್ತು ಸಿಬಿಎಸ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:–**

* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವಂತೆ ಮಾಡುತ್ತಿರುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದು.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿ ವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ ಪಡೆಯುತ್ತಿರುವುದು.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ ವಹಿಸಿರುವುದು.

5) **ವಸತಿ ಶಾಲೆಗೆ ಪ್ರವೇಶ:–**

* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ.
* CBSE & State Syllabus
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿದೆ.

6) **ಪ್ರವೇಶ ಕ್ರಮ:–**

* ಪ್ರವೇಶ ಪರೀಕ್ಷೆ, ಸಂದರ್ಶನ ಆಧಾರದ ಮೇಲೆ.
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಅನ್ನು ರೂ. 200 ಡಿ.ಡಿ. ಮೂಲಕ **ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್** (ರಿ) ಹೆಸರಿಗೆ ಕಳುಹಿಸಿ ಪಡೆಯಬಹುದು.
* ಪ್ರವೇಶ ಪರೀಕ್ಷೆ : ಹೊಸನಗರದಲ್ಲಿ ದಿ. 29–04–2018 ರಂದು ಬೆಳಿಗ್ಗೆ 10ಕ್ಕೆ.
  : ಎಂ.ಎಲ್. ಹಳ್ಳಿ ಸಾಗರದಲ್ಲಿ ದಿ. 02–05–2008 ರಂದು ಬೆಳಗ್ಗೆ10ಕ್ಕೆ

ಹೆಚ್ಚಿನ ಮಾಹಿತಿಗೆ ಶಾಲೆಯನ್ನು ಸಂಪರ್ಕಿಸಿ:
http://ramakrishnagurukulaashramasag.in/

**ವ್ಯವಸ್ಥಾಪಕರು**

**ನಮ್ಮ CBSE ಶಾಲೆಗಳು : 1. Sri Ramakrishna Vivekananda Residential International SchoolM.L.Halli, Sagar**
**2. Sri Ramakrishna Residential School, Hosanagara.**





# ವಿವೇಕಪ್ರಭ

ಜನವರಿ-2018 ಸಂಪುಟ 19 ಸಂಚಿಕೆ 01



ಒಮ್ಮೆ ಅವನ ಪವಿತ್ರ ನಾಮದ ಶಕ್ತಿಯಲ್ಲಿ ನಂಬಿಕೆ ಹುಟ್ಟಿ ಅದನ್ನು ಪದೇ ಪದೇ ಉಚ್ಚರಿಸುವುದಕ್ಕೆ ಮನಸ್ಸಾದ ಮೇಲೆ ಭಕ್ತಿ, ವಿವೇಕ, ಸಾಧನೆಗಳಾವುವೂ ಆವಶ್ಯಕವಿಲ್ಲ. ಸಂಶಯ ಮಾಯವಾಗುವುದು. ಅವನ ನಾಮದ ಬಲದಿಂದ ದೇವರನ್ನೇ ಹೊಂದುವನು.

— ಶ್ರೀರಾಮಕೃಷ್ಣರು



ಮನಸ್ಸು ಏಕಾಗ್ರವಾಗದಿದ್ದರೂ ಪವಿತ್ರ ನಾಮಜಪವನ್ನು ಮಾತ್ರ ಬಿಡ ಬೇಡ. ನಿನ್ನ ಕರ್ತವ್ಯವನ್ನು ನೀನು ಮಾಡು. ನಾಮಜಪ ಮಾಡುವಾಗ ಮನಸ್ಸು ಗಾಳಿಯಿಲ್ಲದ ಪ್ರದೇಶದಲ್ಲಿಟ್ಟ ದೀಪದಂತೆ ಅಲುಗಾಡದೆ ಸ್ಥಿರ ವಾಗಿರುವುದು. ದೀಪ ಅಲುಗಾಡುವಂತೆ ಮಾಡುವುದು ಗಾಳಿ. ಅದೇ ರೀತಿ ನಮ್ಮ ಬಯಕೆ, ವಾಸನೆಗಳು ಮನಸ್ಸನ್ನು ಚಂಚಲಗೊಳಿಸುವುವು.

— ಶ್ರೀಮಾತೆ ಶಾರದಾದೇವಿ



ನಾವು ಸ್ವತಃ ಪರಿಶುದ್ಧರಾಗಿರುವುದು, ಇತರರಿಗೆ ಒಳ್ಳೆಯದನ್ನು ಮಾಡು ವುದು, ಇದು ಎಲ್ಲ ಪೂಜೆಯ ಸಾರ. ಯಾರು ದೀನರಲ್ಲಿ, ದುರ್ಬಲರಲ್ಲಿ, ರೋಗಿಗಳಲ್ಲಿ ಶಿವನನ್ನು ನೋಡುವರೋ ಅವರೇ ನಿಜವಾಗಿ ಶಿವನನ್ನು ಪೂಜಿಸುವವರು.

— ಸ್ವಾಮಿ ವಿವೇಕಾನಂದ



## 'ವಿವೇಕಪ್ರಭ' ಪತ್ರಿಕೆಯ ಪೋಷಕರು



| | | | |
|---|---|---|---|
| ಹಟ್ಟಿ ಲಕ್ಕಮ್ಮ ಜಲಡಿ ಗಿರಿಯಮ್ಮ ದೇವಸ್ಥಾನ | ಬೆಂಗಳೂರು | ಶ್ರೀ ತಿಮ್ಮಯ್ಯ | ಬೆಂಗಳೂರು |
| ಶ್ರೀ ನಾಗನಗೌಡ್ ಬಿ. | ಸಂಡೂರು | ಶ್ರೀಮತಿ ಕುಸುಮ ಪೂಂಜ | ಮಂಗಳೂರು |
| ಶ್ರೀ ಜಯರಾಮ್ ಕೆ.ಎಸ್. | ಮಂಡ್ಯ | ಶ್ರೀ ಶ್ರೀಕಾಂತ ಪಿ.ಎಸ್. | ಬೆಂಗಳೂರು |
| ಶ್ರೀ ಗೌತಮ್‌ಚಂದ್ ಎಸ್.ಎಫ್. | ಬೆಂಗಳೂರು | ಶ್ರೀ ವೀರಭದ್ರಪ್ಪ ಪಿ. ಹರಕುನಿ | ಬೈಲಹೊಂಗಲ |
| ಶ್ರೀ ಸತ್ಯಮೂರ್ತಿ ಎಂ.ಆರ್. | ಬೆಂಗಳೂರು | ಶ್ರೀ ಶಂಕರ್ ನಾರಾಯಣ್ ಎಂ.ಎಸ್. | ಮೈಸೂರು |
| ಶ್ರೀಮತಿ ಮಂಜುಳಾ ಎಸ್. | ಬೆಂಗಳೂರು | | |


**ವ್ಯವಸ್ಥಾಪಕ ಸಂಪಾದಕರು**

*ಸ್ವಾಮಿ ಆತ್ಮಜ್ಞಾನಂದ*

**ಸಂಪಾದಕರು**

*ಸ್ವಾಮಿ ಜ್ಞಾನಯೋಗಾನಂದ*

**ನೆರವು:**

*ಆರ್. ಎಸ್. ಪೂರ್ಣಾನಂದ*

*ಡಾ. ಕೆ. ಎಲ್. ಪ್ರಸನ್ನಾಕ್ಷೀ*

*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**

*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**

*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

**ಮುಖಪುಟ:**

'ನಾದೋಪಾಸನೆ'


**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರ ಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತು ಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


E-mail: mysuru.vivekaprabha@rkmm.org

Website: www.vivekaprabha.net

ಫೋನ್ : 9481533505



**ಚಂದಾ ವಿವರ**

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳು ಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

# ಪ್ರಾರ್ಥನೆ

ರಾಗ – ಕಲ್ಯಾಣಿ ತಾಳ – ಅಟತಾಳ

**ಕೇಳನೋ, ಹರಿ ತಾಳನೋ ।**

**ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ ॥**

**ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು**
**ಕೊಂಬು ಕೊಳಲು ಧ್ವನಿ ಸ್ವರಗಳಿದ್ದು**
**ತುಂಬುರು ನಾರದರ ಗಾನ ಕೇಳುವ ಹರಿ**
**ನಂಬಲಾರ ಈ ಡಂಭಕರ ಕೂಗಾಟ ॥ ೧ ॥**

**ನಾನಾ ಬಗೆಯ ರಾಗ ಭಾವ ತಿಳಿದು ಸ್ವರ**
**ಜ್ಞಾನ ಮನೋಧರ್ಮ ಜಾತಿಯಿದ್ದು**
**ದಾನವಾರಿಯ ದಿವ್ಯನಾಮರಹಿತವಾದ**
**ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ॥ ೨ ॥**

**ಅಡಿಗಡಿಗಾನಂದ ಬಾಷ್ಪಪುಳಕದಿಂದ**
**ನಡೆ ನುಡಿಗೆ ಶ್ರೀಹರಿಯೆನ್ನುತ**
**ದೃಢಭಕ್ತರನು ಕೂಡಿ ಹರಿ ಕೀರ್ತನೆ ಪಾಡಿ**
**ಕಡೆಗೆ ಪುರಂದರವಿಠಲನೆಂದರೆ ಕೇಳ್ವ ॥ ೩ ॥**

**–ಪುರಂದರದಾಸರು**

ರಾಗ – ಕಲ್ಯಾಣವಸಂತ ತಾಳ – ರೂಪಕ

**ನಾದಲೋಲುಡೈ ಬ್ರಹ್ಮಾನಂದ ಮಂದನೇ ॥ ಮನಸಾ ॥**

**ಸ್ವಾದು ಫಲಪ್ರದ ಸಪ್ತಸ್ವರ ರಾಗ ನಿಚಯಸಹಿತ ॥ ನಾ ॥**

**ಹರಿಹರಾತ್ಮಜ ಭೂಸುರಪತಿ ಶರಜನ್ಮ ಗಣೇಶಾದಿ**
**ವರಮೌನುಲುಪಾಸಿಂಚರೇ**
**ಧರ ತ್ಯಾಗರಾಜು ದೆಲಿಯು ॥ ನಾ॥**

ಓ ಮನಸ್ಸೇ, ನಾದದಲ್ಲಿ ತಲ್ಲೀನನಾಗಿ ಬ್ರಹ್ಮಾನಂದ ವನ್ನು ಹೊಂದು. ಸಪ್ತಸ್ವರಗಳಿಂದ ಕೂಡಿದ, ಸ್ವಾದಿಷ್ಟ ವಾದ ಸತ್ಫಲಗಳನ್ನು ನೀಡುವ, ಹಲವು ರಾಗಗಳಿಂದ ಕೂಡಿರುವ ನಾದವೇ ಅದು.

ಹರಿ–ಹರ–ಬ್ರಹ್ಮರು, ಇಂದ್ರ , ಗಣೇಶ, ಸುಬ್ರಹ್ಮಣ್ಯ ಮೊದಲಾದ ದೇವತೆಗಳು, ಶ್ರೇಷ್ಠ ಮುನಿಗಳು ಈ ರೀತಿಯ ಉಪಾಸನೆಯನ್ನು ಮಾಡಿದರು. ತ್ಯಾಗರಾಜ ನಿಗೆ ಇದು ತಿಳಿದಿದೆ.

**–ತ್ಯಾಗರಾಜರು**

# ಸೂಕ್ತಿಪ್ರಭ

ಯಾರೇ ಆಗಲಿ ಹಾಡುವುದರಲ್ಲೋ, ಬಾಜಿಸುವುದ ರಲ್ಲೋ , ನರ್ತಿಸುವುದರಲ್ಲೋ ಅಥವಾ ಬೇರಾವ ಕಲೆಯಲ್ಲೋ ಪ್ರಾವೀಣ್ಯ ವನ್ನು ಪಡೆದರೆ, ಆತ ಪ್ರಯತ್ನಪಟ್ಟರೆ ಬಹುಬೇಗ ಭಗವಂತನ ಸಾಕ್ಷಾತ್ಕಾರ ಪಡೆಯಬಲ್ಲ. ಯಾವ ರೀತಿ ನೀವು ಬಹಳ ಅಭ್ಯಾಸ ಮಾಡಿ ಹಾಡಲು, ಬಾಜಿಸಲು, ನರ್ತಿಸಲು ಕಲಿಯುತ್ತೀರೋ, ಹಾಗೇ ಭಗವಂತನಲ್ಲಿ ಮನಸ್ಸು ನಿಲ್ಲಸಲೂ ಬಹಳವಾಗಿ ಅಭ್ಯಾಸ ಮಾಡಬೇಕು.

**–ಶ್ರೀರಾಮಕೃಷ್ಣ**

ಸಂಗೀತ ಅತ್ಯುತ್ತಮವಾದ ಕಲೆ. ಅದನ್ನು ಯಾರು ಅರ್ಥ ಮಾಡಿಕೊಳ್ಳುವರೋ ಅವರಿಗೆ ಅದೇ ಅತ್ಯುತ್ತಮವಾದ ಪೂಜೆ.

**–ಸ್ವಾಮಿ ವಿವೇಕಾನಂದ**

ಸಂಗೀತವು ವಿಶ್ವಕ್ಕೆ ಆತ್ಮವನ್ನು ನೀಡುವುದು, ಮನಸ್ಸಿಗೆ ರೆಕ್ಕೆ ನೀಡುವುದು, ಕಲ್ಪನೆಯನ್ನು ಹಾರಾಡಲು ಬಿಡುವುದು, ಹಾಗೂ ಜೀವನಕ್ಕೆ ಪ್ರತಿಯೊಂದನ್ನೂ ನೀಡುವುದು.

**–ಪ್ಲೇಟೋ**

ಸಂಗೀತವು ನಿಸ್ಸಂದೇಹವಾಗಿಯೂ ಅನಂತದ ಸಮೀಪದ ವರೆಗೆ ಹಾಗೂ ವಸ್ತುಗಳ ಆಂತರ್ಯದ ವರೆಗೂ ಹೋಗುವುದು. ಏಕೆಂದರೆ, ಅದು ಸಂಪೂರ್ಣವಾಗಿ ದೈವೀ ವಾಹಕವಾದ 'ಶಬ್ದ' ವನ್ನೇ ಅವಲಂಬಿಸಿದೆ.

**–ಶ್ರೀ ಅರವಿಂದರು**

ಸಂಗೀತಗಾರನಿಗೆ ಭಗವಂತನಲ್ಲಿ ಒಂದಾಗಲು ಅತ್ಯುತ್ತಮ ಮಾರ್ಗವೇ ಸಂಗೀತ.

**–ಹಜ್ರತ್ ಇನಯತ್ ಖಾನ್**

*(ಸೂಫೀ ಸಾಧಕ ಹಾಗೂ ಸಂಗೀತಗಾರ)*

ಭಾರತೀಯ ಸಂಗೀತವು ಶ್ರೋತೃವನ್ನು ದೈನಂದಿನ ಬದು ಕಿನ ಸುಖದುಃಖಗಳಾಚೆಗೆ, ಏಕಾಂತ ಹಾಗೂ ತ್ಯಾಗ–ವೈರಾಗ್ಯ ಗಳಿರುವ ಜಗತ್ತಿನ ಮೂಲದ ನೆಲೆಗೆ ಕರೆದೊಯ್ಯುವುದು.

**–ರವೀಂದ್ರನಾಥ ಠಾಗೋರ್**

# ಹೊಸ ವರ್ಷದ ಹಾರ್ದಿಕ ಅಭಿನಂದನೆಗಳು – 2018

ಆತ್ಮೀಯ ಬಂಧುಗಳೇ,

ಹೊಸ ವರ್ಷದ ಶುಭಾಶಯಗಳು. ಮತ್ತೊಮ್ಮೆ ನಾವು ಹೊಸ ವರ್ಷದ ಸ್ವಾಗತವನ್ನು ಸಂಭ್ರಮದಿಂದ ಮಾಡೋಣ. ಈ ವರ್ಷವು ನಮಗೆ, ನಮ್ಮ ದೇಶಕ್ಕೆ ಹಾಗೂ ನಮ್ಮ ಎಲ್ಲ ಜನರಿಗೆ ತರಬಹುದಾದ ಸುಖಸಮೃದ್ಧಿಗಳ ಆಶಾದಾಯಕ ಹೊಂಗಿರಣವನ್ನು ಕಾಣುತ್ತ, ನಮ್ಮ ಕರ್ತವ್ಯಗಳನ್ನು ಉತ್ಸಾಹದಿಂದ ಪಾಲಿಸುತ್ತ, ಜೀವನದ ಪಯಣದಲ್ಲಿ ಮತ್ತೊಂದು ಮೈಲಿಗಲ್ಲನ್ನು ಯಶಸ್ವಿಯಾಗಿ ದಾಟೋಣ ಎಂಬ ಸಂಕಲ್ಪದೊಂದಿಗೆ ಒಮ್ಮನಸ್ಸಿನಿಂದ ೨೦೧೮ನ್ನು ಬರಮಾಡಿಕೊಳ್ಳೋಣ. ನಮ್ಮ ವೈಯಕ್ತಿಕ ಪ್ರಗತಿ ಹಾಗೂ ಆನಂದವು ಎಷ್ಟು ಲೋಭನೀಯವೋ ಅಷ್ಟೇ ವಾಂಛನೀಯ ದೇಶ ಹಾಗೂ ಸಮಾಜದ ಪ್ರಗತಿ — 'ಸರ್ವೇ ಭವಂತು ಸುಖಿನಃ, ಸರ್ವೇ ಸಂತು ನಿರಾಮಯಾಃ, ಸರ್ವೇ ಭದ್ರಾಣಿ ಪಶ್ಯಂತು, ಮಾ ಕಶ್ಚಿದ್ ದುಃಖಭಾಗ್ ಭವೇತ್' - ಇದು ನಮ್ಮ ಪ್ರಾರ್ಥನೆಯಾಗಲಿ. ಎಲ್ಲರ ಸುಖದಲ್ಲಿ ನಮ್ಮ ಸುಖವನ್ನು ಕಾಣುವ ಉದಾರ-ನಿಃಸ್ವಾರ್ಥ ಮನೋಭಾವ ನಮ್ಮದಾಗಲಿ ಎಂದು ಹಾರೈಸುತ್ತ ನಿಮಗೆಲ್ಲರಿಗೂ ಭಗವಂತನ ಕೃಪೆ-ಆಶೀರ್ವಾದಗಳು ಲಭಿಸಲಿ ಎಂದು ಪ್ರಾರ್ಥಿಸುತ್ತೇವೆ. ಈ ಶುಭಹಾರೈಕೆಗಳೊಂದಿಗೆ 'ನಾದೋಪಾಸನೆ' ಎಂಬ ಈ ವರ್ಷದ ವಿಶೇಷ ಸಂಚಿಕೆಯನ್ನು ನಿಮ್ಮ ಕೈಯಲ್ಲಿಡುತ್ತಿದ್ದೇವೆ. ಸಂಗೀತದ ಆಧ್ಯಾತ್ಮಿಕ ತಳಹದಿಯನ್ನು ಕಂಡುಕೊಳ್ಳುತ್ತ , ಉತ್ತರ-ದಕ್ಷಿಣ, ಶ್ರೀಮಂತ-ಬಡವ, ಪುರುಷ-ಸ್ತ್ರೀ ಎಂಬ ಎಲ್ಲ ಭಿನ್ನತೆಗಳನ್ನೂ ಮರೆಯಿಸುವ ಈ ಕಲೆಯ ಅದ್ಭುತ ಸಾಮರ್ಥ್ಯವನ್ನು ತಿಳಿಯುವ ಪ್ರಯತ್ನವನ್ನು ಮಾಡೋಣ. ಗಾನ ಮಾಧುರ್ಯದ ಸವಿ ಈ ಸಂಚಿಕೆಯ ಪುಟಪುಟಗಳಿಂದ ಚಿಮ್ಮಿ ಬಂದು ನಿಮಗೆ ಸಂತಸ ನೀಡಲಿ, ಬಾಳನ್ನು ಮಧುರವಾಗಿಸಲಿ.

'ವಿವೇಕಪ್ರಭ' ಪತ್ರಿಕೆಯ ಮೂಲಕ ರಾಮಕೃಷ್ಣ-ವಿವೇಕಾನಂದರ ಸಮನ್ವಯ ವಾಣಿಯನ್ನು ಬಿತ್ತರಿಸುವಲ್ಲಿ ನಮ್ಮೊಂದಿಗೆ ಕೈಜೋಡಿಸಿರುವ ಎಲ್ಲ ಆಶ್ರಮಗಳಿಗೆ, ಸಂಸ್ಥೆಗಳಿಗೆ, ಸ್ವಯಂಸೇವಕರಿಗೆ, ಬಂಧುಮಿತ್ರರಿಗೆ, ಸಿಬ್ಬಂದಿ ವರ್ಗದವರಿಗೆ, ಜಾಹೀರಾತುದಾರರಿಗೆ, ಅಚ್ಚುಕಟ್ಟಾಗಿ ಮುದ್ರಿಸುತ್ತಿರುವ ಮುದ್ರಕರಿಗೆ, ಸರಕಾರಿ ಇಲಾಖೆಗಳಿಗೆ, ಅಂಚೆಕಛೇರಿಯವರಿಗೆ ಪ್ರೀತಿಯ ಧನ್ಯವಾದಗಳು. ತಮ್ಮೆಲ್ಲರ ಸಹಕಾರವು ನಮ್ಮ ಈ ನೆಚ್ಚಿನ ಪತ್ರಿಕೆಯನ್ನು ಮನೆಮನೆಗೆ, ಮನಮನಕ್ಕೆ ಮುಟ್ಟಿಸಲಿ ಎಂದು ಆಶಿಸುತ್ತೇವೆ. ನಿಮ್ಮ ಬೆಂಬಲ ಹಾಗೂ ಪ್ರೋತ್ಸಾಹವು ನಮಗೆ ಹೊಸ ಹೊಸ ಮೈಲಿಗಲ್ಲುಗಳನ್ನು ದಾಟುವಂತೆ ಮಾಡಲಿ.

ಜೈ ರಾಮಕೃಷ್ಣ!

ಭಗವತ್ಸೇವೆಯಲ್ಲಿ ತಮ್ಮ

ಸ್ವಾಮಿ ಆತ್ಮಜ್ಞಾನಂದ

ವ್ಯವಸ್ಥಾಪಕ ಸಂಪಾದಕರು



ವಿವೇಕಪ್ರಭ

ಆಗಸ್ಟ್ 2017

ಪುಟ 32

# Socio Spiritual Educational Films

# ವಿಶ್ವಧರ್ಮ – ಸ್ವಾಮಿ ವಿವೇಕಾನಂದರ ಸಾಕ್ಷ್ಯಚಿತ್ರ




**ಚಿತ್ರಕಥೆ ಹಾಗೂ ನಿರೂಪಣಾ ಸಾಹಿತ್ಯ:**
**ಸಂಪಿಗೆ ತೋಂಟದಾರ್ಯ**
**ಹೆಚ್. ಟಿ. ನಾಗೇಂದ್ರ**

ಸಂಗೀತ : ಮನೋರಂಜನ್ ಪ್ರಭಾಕರ್
ನಿರ್ದೇಶನ : ಹೆಚ್. ಟಿ. ನಾಗೇಂದ್ರ
ಪ್ರಕಾಶಕರು : SSEF, ಬೆಂಗಳೂರು
ಬೆಲೆ : ಉಚಿತ ವಿತರಣೆ

**ಬೆಂ**ಗಳೂರಿನ ಸಾಮಾಜಿಕ-ಆಧ್ಯಾತ್ಮಿಕ ಶೈಕ್ಷಣಿಕ ಚಲನಚಿತ್ರ (SSEF) ಸಂಸ್ಥೆಯು ಸ್ವಾಮಿ ವಿವೇಕಾನಂದರ ವಿಚಾರಧಾರೆಗಳನ್ನು ಆಧರಿಸಿದ 'ವಿಶ್ವಧರ್ಮ' ಎಂಬಸಾಕ್ಷ್ಯಚಿತ್ರವನ್ನು ಹೊರತಂದಿದೆ. ಎರಡು ಡಿವಿಡಿ. ಗಳಲ್ಲಿ 'ಸಾಕ್ಷಾತ್ಕಾರ' ಹಾಗೂ 'ಸಂಪ್ರದಾಯ' ಎಂಬ ಎರಡು ಭಾಗಗಳಲ್ಲಿ ನಿರ್ಮಿಸಲಾದ ಈ ಸಾಕ್ಷ್ಯಚಿತ್ರದಲ್ಲಿ ಹಲವು ಮಾಧ್ಯಮಗಳನ್ನು ಅಳವಡಿಸಿಕೊಂಡು ಸ್ವಾಮೀಜಿ ಸಂದೇಶಗಳನ್ನು ಸಮರ್ಪಕವಾಗಿ ಜನರಿಗೆ ತಲುಪಿಸುವ ಕಾರ್ಯವನ್ನು ಸಮರ್ಥವಾಗಿ ಮಾಡಲಾಗಿದೆ. ವಿವಿಧ ಬಗೆಯ ಸನ್ನಿವೇಶಗಳನ್ನು ನೈಜ ಚಿತ್ರೀಕರಣಗಳೊಂದಿಗೆ ಪ್ರಸ್ತುತಪಡಿಸಲಾಗಿದ್ದು, ನಡುನಡುವೆ ಅನಿಮೇಷನ್, ರೇಖಾಚಿತ್ರ, ಸ್ಥಿರಚಿತ್ರಗಳು, ಗ್ರಾಫಿಕ್ಸ್‌ಗಳನ್ನೂ ಅಗತ್ಯವಿದ್ದಂತೆ ಅಳವಡಿಸಲಾಗಿದೆ. ಹಿನ್ನೆಲೆ ಸಂಗೀತ, ಸೂಕ್ತಹಾಡುಗಳು ಪರಿಣಾಮಕಾರಿಯಾದ ಭಾವವನ್ನು ಹೊರಹೊಮ್ಮಿಸುತ್ತವೆ. ಒಟ್ಟಿನಲ್ಲಿ ಇದೊಂದು ವಿನೂತನ ಶೈಲಿಯ, ಗುಣಮಟ್ಟದ ಸಾಕ್ಷ್ಯಚಿತ್ರವಾಗಿದೆ.

ಮೊದಲ ಭಾಗವಾದ 'ಸಾಕ್ಷಾತ್ಕಾರ' ಡಿವಿಡಿ.ಯಲ್ಲಿ ಸ್ವಾಮಿ ವಿವೇಕಾನಂದರ ಜೀವನ–ಉಪದೇಶಗಳ ಹಿನ್ನೆಲೆ, ಅವರ ಪರಿವ್ರಾಜಕ ಜೀವನ ಅವರ ಆಧ್ಯಾತ್ಮಿಕ ಅನುಭೂತಿಗಳಿಗೆ ಹಿನ್ನೆಲೆಯಾಗಿದ್ದ ಭಾರತೀಯ ಸನಾತನ ಸಂಸ್ಕೃತಿ ಹಾಗೂ ಆಧ್ಯಾತ್ಮಿಕತೆ, ವೇದ ಉಪನಿಷತ್ತುಗಳಲ್ಲಿ ಮೂಡಿಬಂದ ಸತ್ಯದ ಸಾಕ್ಷಾತ್ಕಾರ ಇವುಗಳ ವಿವರಣೆಯಿದೆ. ಮುಂದೆ, ಇತಿಹಾಸದುದ್ದಕ್ಕೂ ಮುಂದುವರಿದ ಧಾರ್ಮಿಕ ವಾಹಿನಿ ಹೇಗೆ ಸ್ವಾಮಿ ವಿವೇಕಾನಂದರ ಪರಿವ್ರಾಜಕ ಜೀವನದುದ್ದಕ್ಕೂ ಮಾರ್ಗದರ್ಶಿಸಿತ್ತು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ.

ಎರಡನೇ ಭಾಗವಾದ 'ಸಂಪ್ರದಾಯ' ಡಿವಿಡಿ.ಯಲ್ಲಿ ಹಿಂದಿನ ಭಾಗದಲ್ಲಿ ಚಿತ್ರಿಸಲಾದ ವಿಷಯಗಳ ಮುಂದುವರಿಕೆಯಿದೆ. ಗಹನವಾದ ದರ್ಶನ, ತತ್ತ್ವ ಹಾಗೂ ಆಧ್ಯಾತ್ಮಿಕ ವಿಚಾರಗಳು ಸ್ಮೃತಿ, ಪುರಾಣ, ವಿವಿಧ ಆಚರಣೆ–ಸಂಪ್ರದಾಯಗಳ ಮೂಲಕ ಹೇಗೆ ಜನಸಾಮಾನ್ಯರ ಜೀವನದಲ್ಲಿ ಹಾಸುಹೊಕ್ಕಾಗಿ ಬಂದಿದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಡಿವಿಡಿ.ಯ ಕೊನೆಯಲ್ಲಿ ಸ್ವಾಮಿ ವಿವೇಕಾನಂದರ ಪ್ರವಚನ, ಉಪದೇಶಗಳ ಮೂಲಕ ಈ ಸಾರ್ವತ್ರಿಕ ಧರ್ಮವು ಹೇಗೆ ಆಧುನಿಕ ಜಗತ್ತಿಗೆ ಅನ್ವಯವಾಗುವಂತೆ ಶಕ್ತಿಶಾಲಿಯಾಗಿ ಪ್ರಕಟಗೊಂಡಿದೆ ಎಂಬುದನ್ನು ವಿವಿಧ ಉದ್ಧರಣೆ, ಚಿತ್ರಗಳೊಂದಿಗೆ ನೀಡಲಾಗಿದೆ.

ಹೀಗೆ ಈ ಎರಡು ಡಿವಿಡಿ.ಗಳ ಮೂಲಕ ಸ್ವಾಮಿ ವಿವೇಕಾನಂದರ ಜೀವನ, ಸಂದೇಶ; ಯೋಗ, ಸಾಧನೆ, ಧರ್ಮ, ಶಾಸ್ತ್ರ, ಸಂಸ್ಕೃತಿಯೇ ಮೊದಲಾದ ನಮ್ಮ ಆಧ್ಯಾತಿಕ ಪರಂಪರೆಯ ಪ್ರಧಾನ ಅಂಶಗಳನ್ನು ಪರಿಚಯಿಸಲಾಗಿದೆ. ಚಲನಚಿತ್ರ, ರೇಖಾಚಿತ್ರ, ಸಂಗೀತವೇ ಮೊದಲಾದ ಹಲವು ಮಾಧ್ಯಮಗಳನ್ನು ಇಲ್ಲಿ ಸಮರ್ಪಕವಾಗಿ ಬಳಸಿಕೊಳ್ಳಲಾಗಿದೆ. ಸುಮಾರು ೨ ಗಂಟೆ ಅವಧಿಯ ಈ ಡಿವಿಡಿ.ಗಳಲ್ಲಿ ಸಮಗ್ರ ಭಾರತದ ಪರಂಪರೆ ಹಾಗೂ ಸ್ವಾಮೀಜಿ ಜೀವನ, ಧ್ಯೇಯ, ಆದರ್ಶಗಳನ್ನು ಒಳಗೊಳ್ಳಲು ಇದರ ನಿರ್ಮಾಪಕರು ವಿಶೇಷ ಶ್ರಮವಹಿಸಿ ದುಡಿದಿದ್ದಾರೆ. ಈ ಸಾಕ್ಷ್ಯಚಿತ್ರದ ನಿರ್ಮಾಣದ ಹಿಂದೆ ವಾಣಿಜ್ಯ ಉದ್ದೇಶಗಳಿಲ್ಲದೆ, ಕೇವಲ ಸ್ವಾಮಿ ವಿವೇಕಾನಂದರ ಧ್ಯೇಯಾದರ್ಶಗಳ ಪ್ರಚಾರವಷ್ಟೇ ಇರುವುದು ಅತ್ಯಂತ ಶ್ಲಾಘನೀಯ ಕಾರ್ಯವಾಗಿದೆ. ಅದಕ್ಕನುಗುಣವಾಗಿ, ಈ ಸಾಕ್ಷ್ಯಚಿತ್ರಕ್ಕೆ ಯಾವುದೇ ಬೆಲೆ ನಿಗದಿ ಮಾಡದೆ, 'ಉಚಿತ ವಿತರಣೆ'ಯಾಗಿ ನೀಡಲಾಗುವುದು. **ಆಸಕ್ತರು ಸಂಪರ್ಕಿಸಬೇಕಾದ ವಿಳಾಸ:** ಶ್ರೀ ಹೆಚ್. ಟಿ. ನಾಗೇಂದ್ರ, ಫೋನ್ ನಂಬರ್: 93412 19116, 95353 83588 ; ಇ–ಮೇಲ್: nagendra.ht@gmail.com



Amruta Nilaya, 216/1, 1st Floor, 5th Cross
5th Main, Chamarajapet, Bangalore - 560018
Phone : 080-26670147, Cell : 09341219116

## ಮತ್ತೊಂದು ಪ್ರಯತ್ನದತ್ತ ನಮ್ಮ ಪಯಣ



| ಭಾಗ–೩ | ಭಾಗ–೪ | ಭಾಗ–೫ | ಭಾಗ–೬ |
|---|---|---|---|
| ಕರ್ಮಯೋಗ | ಜ್ಞಾನಯೋಗ | ರಾಜಯೋಗ | ಭಕ್ತಿಯೋಗ |



ಸಂಪಾದಕೀಯ

# ಭಾರತೀಯ ಸಂಗೀತ ಮತ್ತು ಆಧ್ಯಾತ್ಮಿಕತೆ

ಸಂಗೀತ ಜಗತ್ತಿನಲ್ಲಿ 'ಭಾರತೀಯ ಸಂಗೀತ' ಪ್ರತ್ಯೇಕವಾಗಿ ಎದ್ದು ನಿಲ್ಲುವುದು ಅದರ ಧಾರ್ಮಿಕ, ಆಧ್ಯಾತ್ಮಿಕ ಆಯಾಮ ದಿಂದಾಗಿ. ಐದು ಸಹಸ್ರ ವರ್ಷಗಳಿಗೂ ಹಿಂದೆ ಇಲ್ಲಿ ಇದ್ದಿರ ಬಹುದಾದ ಸಂಗೀತ ಎಷ್ಟು ದೈವಿಕವಾಗಿತ್ತೋ, ತೀರ ಇತ್ತೀಚಿನ ನಮ್ಮ ಸಂಗೀತವೂ ಅಷ್ಟೇ ದೈವಿಕವಾಗಿದೆ; ನಮ್ಮ ಸಂಗೀತದ ತಿರುಳು ಮಾರ್ಪಾಡು ಹೊಂದುವ ಬದಲು, ತನ್ನ ಮೂಲಸ್ವರೂಪ ದೊಂದಿಗೆ ಮತ್ತಷ್ಟು ಬಲಗೊಂಡಿದೆ ಎನ್ನಬೇಕು. ಇದರ ಹಿನ್ನೆಲೆ, ಬೆಳವಣಿಗೆ, ವಿಸ್ತರಣೆ ಹಾಗೂ ಬಹುಮುಖವಾದ ಆಯಾಮ ಗಳನ್ನು ಸೂಕ್ಷ್ಮವಾಗಿ ಗಮನಿಸುತ್ತ ಹೋದರೆ, ನಮ್ಮ ಸಂಸ್ಕೃತಿ ಯಲ್ಲಿ ಸಂಗೀತ ಪಡೆದುಕೊಂಡಿರುವ ವೈವಿಧ್ಯಮಯವಾದ ನೆಲೆ ಗಟ್ಟುಗಳು ಕಂಡುಕೊಳ್ಳುವ ಏಕಸೂತ್ರತೆ ಬೆರಗು ಮೂಡಿಸುತ್ತವೆ; ಭವ್ಯತೆಯ ನೆಲೆಗೆ ನಮ್ಮನ್ನು ಏರಿಸುತ್ತವೆ.

### ನಿಸರ್ಗ ಮತ್ತು ಸಂಗೀತ

ಕಣ್ಣಿಗೆ ಕಾಣುವ ಪ್ರಪಂಚದಲ್ಲಿ ಶಬ್ದದ ವಿವಿಧ ಬಗೆಯ ಕ್ರಿಯೆ – ಸಂಚಾರಗಳು ತಾನೇ ತಾನಾಗಿ ನಡೆಯುತ್ತಿವೆ; ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲೂ ನಾದ ಅಡಗಿದೆ. ನಾವು ಸುತ್ತಣ ಪ್ರಪಂಚವನ್ನು ಗಮನಿಸಿದಾಗ ಕಿವಿಗೆ ಬೀಳುವ ನಾನಾ ಬಗೆಯ ಸದ್ದುಗಳಲ್ಲೂ, ಪ್ರಾಣಿ-ಪಕ್ಷಿ ಜಂತುಗಳ ಕೂಗುಗಳಲ್ಲೂ, ಗುಡುಗು -ಸಿಡಿಲು-ಮಳೆ-ಅಬ್ಬರಗಳ ರಭಸದಲ್ಲೂ, ಅದೇ ರೀತಿ ನದಿಯ ನಿರಂತರ ಹರಿಯುವಿಕೆ, ಜಲಪಾತದ ಭೋರ್ಗರೆತಗಳಲ್ಲೂ ಕೊನೆಗೆ ಸಾಗರದ ನಿರಂತರ ಮೊರೆತದಲ್ಲೂ ವಿಭಿನ್ನ ಶ್ರುತಿಗಳ, ವಿಭಿನ್ನ ಲಯಗಳ ಸಮತೋಲನವಿದೆ. ಸಹಜವಾಗಿ ಮಾನವನ ಮನಸ್ಸು ನಿಸರ್ಗದ ಸಂಗೀತಕ್ಕೆ ಪ್ರತಿಧ್ವನಿ ನೀಡುತ್ತದೆ. ಹಕ್ಕಿಗಳ, ಪ್ರಾಣಿಗಳ, ನಿಸರ್ಗದ ಧ್ವನಿಗಳಲ್ಲಿ ಅಡಗಿರುವ ನಾದಸೌಖ್ಯವನ್ನು ತನ್ನೊಳಗೂ ಕಂಡುಕೊಳ್ಳುತ್ತ ಮಾನವನು ಶ್ರುತಿಯಲ್ಲದ ಧ್ವನಿ ಗಳಿಂದ 'ನಾದ'ವನ್ನು ಪ್ರತ್ಯೇಕಿಸುತ್ತಾನೆ. ಹೀಗೆ ಮೂಡಿ ಬರುವ 'ಸ್ವರ'ಗಳಿಂದ ಗಾನ ಹರಿದುಬರುತ್ತದೆ; ಮಾನವ 'ಗಾಯಕ' ನಾಗುತ್ತಾನೆ. ಇತಿಹಾಸದ ಪ್ರಾಚೀನ ಪುಟಗಳಲ್ಲಿ ಮರೆಯಾಗಿ ಹೋದ ಹಲವು ಹೆಜ್ಜೆಗಳಲ್ಲಿ ಅಜ್ಞಾತ ಗಾಯಕರ, ಸಂಗೀತ ಸಂಶೋಧಕರ ಅಚ್ಚರಿಯ ಮೈಲಿಗಲ್ಲುಗಳು ಕೂಡ ಅಡಗಿವೆ. ಅವರು ಉಳಿಸಿಹೋದ ಅಮೂಲ್ಯ ನಿಧಿಯೇನಿದ್ದರೂ ನಮ್ಮ ಸಂಸ್ಕೃತಿಯಲ್ಲಿ ಉಳಿದುಕೊಂಡು ಬಂದ ಸಂಗೀತ ಪರಂಪರೆ, ಸಂಗೀತ ಸಂಸ್ಕೃತಿ ಹಾಗೂ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದ ಶ್ರುತಿ-ಲಯಬದ್ಧವಾದ ಕಲಾತ್ಮಕ ಸಂಪ್ರದಾಯಗಳು.

### ಸಂಗೀತ ಮತ್ತು ಮಾನವ

ಆದಿಮ ಜನಾಂಗಗಳಲ್ಲೂ ಹಾಡು, ಕುಣಿತ, ವಾದ್ಯಗಳು ಕಲಾರೂಪವನ್ನು ತಳೆದಿದ್ದವು ಎಂದು ಇತಿಹಾಸ ದಾಖಲಿಸುತ್ತದೆ. ಕ್ರಮೇಣ ಗ್ರಾಮೀಣ ಜೀವನ, ನಗರ ಸಂಸ್ಕೃತಿಗಳಲ್ಲಿ ಹಾಡು, ಗೀತ, ವಾದ್ಯಗಳು ಇನ್ನಷ್ಟು ಪರಿಷ್ಕರಣೆ ಹೊಂದಿದವು. ಜನ ಸಾಮಾನ್ಯರ ಜಾನಪದ ಹಾಡುಗಳಿಂದ ಹಿಡಿದು ಅತ್ಯಂತ ಪ್ರಬುದ್ಧವೂ ಸಂಕೀರ್ಣವೂ ಆದ ಶಾಸ್ತ್ರೀಯ ಸಂಗೀತದವರೆಗೂ ಹಲವು ಮಜಲುಗಳಲ್ಲಿ, ಜೀವನದ ವಿವಿಧ ವಲಯಗಳಲ್ಲಿ ಅನೇಕ ಪ್ರಯೋಗಗಳು ನಡೆದವು; ಅದಕ್ಕನುಗುಣವಾಗಿ ಹಲವು ಪರಿ ವರ್ತನೆಗಳೂ ಉಂಟಾದವು. ಮಾನವ ತನ್ನ ಜೀವನದ ಹತ್ತಾರು ಚಟುವಟಿಕೆಗಳ ನಡುವೆ, ಗಾಯನ-ವಾದನ ಮಾಡುವವರ ಹಾಗೂ ಅದನ್ನು ಆಲಿಸಿ ಮೆಚ್ಚಿ ತಲೆದೂಗುವ ಕೇಳುಗರ ಕಲಾ ಪ್ರಪಂಚಕ್ಕೆ ಮಹತ್ವದ ಸ್ಥಾನವನ್ನು ನೀಡಿದ. ಈ ಕಾರಣದಿಂಲೇ ಪ್ರಪಂಚದ ಎಲ್ಲ ಸಾಂಸ್ಕೃತಿಗಳಲ್ಲೂ ಅತ್ಯಂತ ಹಳೆಯ ಕಾಲದಿಂಲೇ ಸಂಗೀತಕ್ಕೆ ಅತ್ಯಂತ ಹೆಚ್ಚಿನ ಮಹತ್ವ ನೀಡಿದ್ದನ್ನು ಕಾಣಬಹುದು.

ಮೇಲಿನ ಬೆಳವಣಿಗೆಗಳು ಒಂದು ಹಂತದಲ್ಲಿ ನಡೆದವು. ಇನ್ನೊಂದು ಹಂತದ ಬೆಳವಣಿಗೆಯಾದದ್ದು ವಿಶೇಷವಾಗಿ ಭಾರತ ದಲ್ಲಿ. ಸಂಗೀತವನ್ನು ಆರಾಧನೆಯ, ಆಧ್ಯಾತ್ಮಿಕ ಸಾಧನೆಯ ಅಂಗವಾಗಿ ಬಳಸಿಕೊಂಡು, ಅದು ಕೇವಲ ಸಾಮೂಹಿಕ ಕಲೆ ಯಷ್ಟೇ ಆಗಿ ಉಳಿಯದೆ ವ್ಯಕ್ತಿಯೊಬ್ಬನ ಅಂತರಂಗಕ್ಕೆ ಸಂಬಂಧ ಪಟ್ಟ ಅದ್ಭುತ ಕಲೋಪಾಸನೆಯಾಗಿ ಮಾರ್ಪಟ್ಟಿತ್ತು. ಕಲೆಯು ಪ್ರಪಂಚದಲ್ಲಿ ಹುಟ್ಟಿದ್ದೇನೋ ನಿಜ; ಆದರೆ ಅದು ಪ್ರಪಂಚದಲ್ಲೇ

ಲಯವಾಗಲಿಲ್ಲ. ಪ್ರಪಂಚವನ್ನು ಮೀರಿ ನಿಂತು, ಅವ್ಯಕ್ತ ತತ್ತ್ವದಲ್ಲಿ ಲಯವಾಗಲು ಹೊರಟಿತು. ಕಲೆಯು ಕಲೆಯಾಗಿಯೇ ಉಳಿಯದೆ 'ಉಪಾಸನೆ'ಯಾಯಿತು.

## ಸಂಗೀತ ಮತ್ತು ಆಧ್ಯಾತ್ಮಿಕತೆ

ಭಾರತದಲ್ಲಿ ಜೀವನದ ಪ್ರತಿಯೊಂದು ಅಂಗವೂ ಧಾರ್ಮಿಕ, ಆಧ್ಯಾತ್ಮಿಕ ಕ್ರಿಯೆಯಾಗಿದೆ. ನಿಂತರೆ, ಕುಳಿತರೆ, ನಡೆದರೆ, ಕೆಲಸ ಮಾಡಿದರೆ – ಅವೆಲ್ಲವೂ ಭಗವಂತನ ಆರಾಧನೆ. ಹಾಡು, ನೃತ್ಯ, ನಾಟಕ, ಸಾಹಿತ್ಯ – ಎಲ್ಲವೂ ಕೊನೆಗೆ ಬಂದು ನಿಲ್ಲುವ ತಾಣ ಅದೇ – **'ರಸೋ ವೈ ಸಃ.'** ತಾತ್ತ್ವಿಕವಾಗಿ ಎಲ್ಲ ಪ್ರಾಪಂಚಿಕ ಕ್ರಿಯೆಗಳ ಮೂಲ ನಿತ್ಯ ನಿರಂತರ ಚೈತನ್ಯವೇ ಆಗಿರುವ ಪರಮಾತ್ಮ; ಅಂತೆಯೇ ಎಲ್ಲ ಅಭಿವ್ಯಕ್ತಿಗಳ ಮೂಲವೂ ಅವನೇ. ಕೊನೆಗೆ ಎಲ್ಲವೂ ಬಂದು ಸೇರುವ ನೆಲೆಯೂ ಅದೇ ಆಗಿದೆ. ಹೀಗಿರುವಾಗ, ಆದಿ–ಅಂತ್ಯಗಳ ನಡುವೆ ನರ್ತಿಸಿ ಹೋಗುವ ಕ್ರಿಯಾತ್ಮಕ ಘಟನೆಗಳು ಭಗವಂತನಲ್ಲದೆ ಮತ್ತೇನು? ಇದು ಕೇವಲ ತತ್ತ್ವವಷ್ಟೇ ಆಗಿ ಉಳಿಯದೆ, ಇಲ್ಲಿನ ಪ್ರತಿಯೊಂದು ಆಗುಹೋಗುಗಳನ್ನು ನಿಯಂತ್ರಿಸುವ ಪ್ರೇರಕ ಶಕ್ತಿಯಾಗಿ ರೂಪುಗೊಂಡಿತು. ಇದರ ಹಿಂದಿನ ತತ್ತ್ವವನ್ನರಿತ ಮಹಾತ್ಮರು 'ಋಷಿ'ಗಳಾದರು, 'ದಾರ್ಶನಿಕ'ರೆನಿಸಿಕೊಂಡರು; ಕಲಾಪ್ರಪಂಚದಲ್ಲಿ ಕೂಡ ಸಂತರೆನಿಸಿಕೊಂಡರು. ಎಲ್ಲ ವಿದ್ಯೆಗಳ, ಶಾಸ್ತ್ರಗಳ, ಕಲಾಪ್ರಕಾರಗಳ ಮೂಲಪುರುಷರೂ ಒಬ್ಬರಲ್ಲ ಒಬ್ಬರು ಮುನಿಯೇ ಆಗಿದ್ದಾರೆ; ಅವರ ಪ್ರಭಾವ ಎಷ್ಟು ಗಾಢವೆಂದರೆ, ಹಲವಾರು ಶತಮಾನಗಳವರೆಗೂ ಅವರನ್ನೂ ಪೂಜಿಸುವ ಪರಂಪರೆ ನಮ್ಮಲ್ಲಿ ಬೆಳೆದು ಬಂದಿದೆ. ಸಂಗೀತ, ನೃತ್ಯ, ನಾಟಕಾದಿಗಳಿಗೆ ಸಂಬಂಧಿಸಿದಂತೆ ಭರತಮುನಿಯೇ ಅದನ್ನು ಶಾಸ್ತ್ರದ ನೆಲೆಗೇರಿಸಿದ ಹಾಗೂ ಕಲೆಯನ್ನು 'ಶಾಸ್ತ್ರೀಯ'ಗೊಳಿಸಿದ ಮೂಲಪುರುಷ. ಅಲ್ಲಿಯವರೆಗೂ ಬೆಳೆದುಬಂದ ಕಲಾಪರಂಪರೆ ಅಜ್ಞಾತವಾಗಿ ಉಳಿದಿದೆ.

## ಓಂಕಾರ ಮತ್ತು ಸಂಗೀತ

ಆದರೆ ನಮ್ಮ ಎಲ್ಲ ಶಾಸ್ತ್ರಗಳ ಮೂಲವನ್ನೂ ವೇದಗಳಲ್ಲೇ ಕಂಡುಕೊಳ್ಳುತ್ತೇವೆ. ಸಂಗೀತದ ಮೂಲವನ್ನು ಅರಸುತ್ತ ಹೋದರೆ, ತಾತ್ತ್ವಿಕವಾಗಿಯೂ ಚಾರಿತ್ರಿಕವಾಗಿಯೂ ದಾರ್ಶನಿಕವಾಗಿಯೂ ಅದು ವೇದಗಳಿಂದಲೇ ಆವಿರ್ಭವಿಸಿದೆಯೆನ್ನಬೇಕು. ಓಂಕಾರದಿಂದಲೇ ಸಮಸ್ತವೂ ವ್ಯಕ್ತಗೊಂಡಿತು; ವ್ಯಕ್ತಜಗತ್ತು, ವೇದ, ಸಕಲಚರಾಚರಗಳು, ಮಾನವನ ಅಂತಃಕರಣಗಳು, ಎಲ್ಲ ವಿದ್ಯೆಗಳು–ಇವೆಲ್ಲವೂ ಓಂಕಾರದಿಂದಲೇ ಮೂಡಿಬಂದವು. ಸಂಗೀತದ ಮೂಲವೂ ಓಂಕಾರವೇ – ಏಕೆಂದರೆ ಓಂಕಾರವು ಅಕ್ಷರವೂ ಹೌದು; ನಾದವೂ ಹೌದು. ಇನ್ನೂ ಮೂಲಕ್ಕೆ ಹೋದಾಗ ಅದು ವ್ಯಕ್ತಜಗತ್ತಿನ ಮೂಲಕ ಪ್ರಕಟವಾದ ಅಪರಬ್ರಹ್ಮವೂ ಹೌದು; ಅವ್ಯಕ್ತ–ಅವ್ಯಾಕೃತ ಪರಬ್ರಹ್ಮವೂ ಹೌದು. ಹೀಗೆ ಪ್ರಪಂಚ ಮತ್ತು ಪರಮಾತ್ಮ ನಡುವಿನ 'ಸೇತುವೆ'ಯಂತಿರುವ ಓಂಕಾರವು ಸಂಗೀತಕ್ಕೂ ಆಧ್ಯಾತ್ಮಕ್ಕೂ ಇರುವ ಅತ್ಯದ್ಭುತವಾದ ಕೊಂಡಿಯಾಗಿದೆ!

ಬಹಳ ಪ್ರಾಚೀನ ಕಾಲದಿಂದಲೇ ನಮ್ಮಲ್ಲಿ ಸಂಗೀತವನ್ನು ಒಂದು ಧಾರ್ಮಿಕ ಕಲೆಯಾಗಿಯೂ, ಆಧ್ಯಾತ್ಮಿಕ ಅಥವಾ ಅನುಭವದ ಮಾಧ್ಯಮವಾಗಿಯೂ ಗುರುತಿಸಿಕೊಂಡದ್ದನ್ನು ನಾವು ಕಾಣುತ್ತೇವೆ. ಇದಕ್ಕೆ ಅತ್ಯುತ್ತಮ ಉದಾಹರಣೆಯೇ ಸಾಮವೇದ. ಋಷಿಗಳು ಕಂಡ ಅಸಾಧಾರಣ ಸತ್ಯಗಳನ್ನು ಯಜ್ಞ ಮಾಡುವವರು 'ಹಾಡು'ತ್ತಾರೆ; ಸಾಮಗಾನವನ್ನು 'ಗಾಯನ' ಮಾಡುತ್ತಾರೆ. ಅಲ್ಲಿ ಹಲವು ಸ್ವರಗಳ ಬಳಕೆಯಾಯಿತು; ಇಂಥ ಗಾನ ಕಲಾರೂಪ ತಾಳಿತು. ಇಂಥ ಗಾನಕ್ಕೆ ದೇವತೆಗಳೂ ಒಲಿಯುತ್ತಾರೆ ಎಂದು ಪ್ರಶಂಸಿಸಲಾಗಿದೆ. ಕ್ರಮೇಣ ಸಾಮವೇದದ ಸ್ವರಗಳೇ ಶಾಸ್ತ್ರಿಯ ಸಂಗೀತವನ್ನು ರೂಪಿಸಿತು ಎನ್ನುತ್ತಾರೆ. ಇಲ್ಲಿ ಋಷಿಗಳ ಆಧ್ಯಾತ್ಮಿಕ ಪ್ರಪಂಚವು ಹೇಗೆ ಕಲಾವಿದನ ಸಂಗೀತ ಪ್ರಪಂಚವಾಗಿ ಹರಿದು ಬಂತು ಎಂಬುದರ ಸ್ಪಷ್ಟ ಚಿತ್ರಣವಿದೆ.

## ದೇವದೇವತೆಗಳು ಮತ್ತು ಸಂಗೀತ

ಇನ್ನೊಂದು ಪ್ರಧಾನ ಉದಾಹರಣೆ ಶ್ರೀಕೃಷ್ಣನ ಕೊಳಲಿನ ಗಾನ. ಶ್ರೀಕೃಷ್ಣ ಒಬ್ಬ ಅವತಾರಪುರುಷ, ಐತಿಹಾಸಿಕ ವ್ಯಕ್ತಿ ಹಾಗೂ ಸಾಕ್ಷಾತ್ ದೇವರೆಂದೇ ಭಾರತದ ಎಲ್ಲೆಡೆ ಪೂಜಿಸಲ್ಪಟ್ಟವನು. ಅವನ ಕಾಲವನ್ನು ಸುಮಾರು ಐದುಸಾವಿರ ವರ್ಷಗಳಷ್ಟು ಹಿಂದೆ ಎಂದು ಹಲವು ಮಂದಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಭಾರತೀಯರ ಪಾಲಿಗೆ ಅವನು ಅನಾದಿಪುರುಷ; ಅನಂತನೂ ನಿತ್ಯನೂ ನಿರ್ವಿಶೇಷನೂ ಆದ ಪರಬ್ರಹ್ಮ; ತಾನೇ ಸೃಷ್ಟಿಸಿದ ಜಗತ್ತಿನಲ್ಲಿ 'ನಿತ್ಯಲೀಲೆ' ನಡೆಸುತ್ತಿರುವವನು; ಯೋಗಿಗಳ, ಭಕ್ತರ ಹೃದಯದಲ್ಲಿ ನಿತ್ಯವೂ ಕೊಳಲನ್ನು ನುಡಿಸುತ್ತಿರುವವನು. ಕೃಷ್ಣನೊಬ್ಬ ಅಸಾಧರಣ ವ್ಯಕ್ತಿತ್ವ ಹೊಂದಿದ್ದ, ಎಲ್ಲ ಅರ್ಥದಲ್ಲೂ ಪರಿಪೂರ್ಣತೆಯಿಂದ ಕೂಡಿದ್ದ; ತನ್ನ ಕೊಳಲಿನ ನಾದದಿಂದ ಗೋವುಗಳನ್ನು, ಪಶುಪಕ್ಷಿಗಳನ್ನು ಮರುಳು ಮಾಡಿದ ಅದ್ಭುತ ವ್ಯಕ್ತಿ; ಬೃಂದಾವನದ ಗೋಪಿಕೆಯರನ್ನು ದಿವ್ಯಭಾವಕ್ಕೇರಿಸಿ ಮೈಮರೆಸಿದವನು. **'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣಿ'** ಎಂಬ ಮಾತನ್ನು ಅಕ್ಷರಶಃ ತೋರಿಸಿಕೊಟ್ಟವನು. ಪ್ರಾಪಂಚಿಕತೆಯ ಸ್ಪರ್ಶವಿಲ್ಲದ ಗೋಪೀಭಾವದ ದಿವ್ಯ ಪ್ರೇಮಕ್ಕೂ ಶ್ರೀಕೃಷ್ಣನ ಕೊಳಲು ಹಾಗೂ 'ರಾಸಲೀಲೆ'ಯ ನರ್ತನಕ್ಕೂ ಅವಿನಾಭಾವ ಸಂಬಂಧವಿದೆ. ಹೀಗೆ ಸಂಗೀತ ಪ್ರಪಂಚದಲ್ಲಿ ಆಧ್ಯಾತ್ಮಿಕತೆ ಮೂಡಿ ಬಂದ ಹೆಜ್ಜೆಗುರುತುಗಳಲ್ಲಿ ಶ್ರೀಕೃಷ್ಣನ 'ಶ್ರೀಪಾದ'ದ ಗುರುತೇ ಅಚ್ಚಳಿಯದೆ ನಿಂತಿದೆ.

ಇದೇ ರೀತಿ ಸಕಲ ವಿದ್ಯಗಳ ಅಧಿದೇವತೆಯಾದ ಸರಸ್ವತಿ ವೀಣಾಧರಿ; ಸಮಸ್ತ ನಾದಪ್ರಪಂಚಕ್ಕೆ ಅವಳೇ ಆಧಾರ. ಸಂಗೀತ ಉಪಾಸಕನ ಪ್ರತಿಯೊಂದು ಆಲಾಪನೆಯೂ ಶಾರದೆಯ ಆರಾಧನೆ. ತನಗೆ ಒಲಿದು ಬಂದ ವಿದ್ಯೆಯೆಲ್ಲವೂ ಆಕೆಯ ವರವೆಂದೇ ಪ್ರತಿಯೊಬ್ಬ ಕಲಾವಿದನೂ ಭಾವಿಸುತ್ತಾನೆ. ಇನ್ನು ಪುರಾಣಗಳಲ್ಲಿ

ಬರುವ ಪರಶಿವನು ಸದಾ ಡಮರು ಬಾರಿಸುವವನು; ರುದ್ರ ತಾಂಡವವಾಡುತ್ತ ಜಗತ್ತನ್ನೇ ಲಯಗೊಳಿಸುವ ನಟರಾಜ. ನಾರದ ಮುನಿ, ತುಂಬುರು, ರಾಮಾಯಣದ ಅಪ್ರತಿಮ ಭಕ್ತ ಆಂಜ ನೇಯ ಇವರೆಲ್ಲ ಮಹಾನ್ ಸಂಗೀತಗಾರರು; ಸದಾ ತಮ್ಮ ಇಷ್ಟ ದೇವತೆಯನ್ನು ತಮ್ಮ ಗಾನದ ಮೂಲಕ ಆರಾಧಿಸುತ್ತಿರುವವರು. ದೇವತೆ, ಗಂಧರ್ವ, ಕಿನ್ನರರೆಲ್ಲ ದೈವೀ ಸಂಗೀತವನ್ನು ಉಪಾಸನೆ ಮಾಡುತ್ತಿರುವವರು. ಅಷ್ಟೇಕೆ, ರಾವಣನಂಥ ರಾಕ್ಷಸನೂ ಸಂಗೀತ ದಲ್ಲಿ ನಿಷ್ಣಾತನೆಂದು ನಮ್ಮಲ್ಲಿ ಕಾವ್ಯ, ಪುರಾಣಗಳು ಸಾರುತ್ತವೆ!

## ಸಂತ ಪರಂಪರೆ ಹಾಗೂ ಸಂಗೀತ

ಸಂಗೀತವು ಕೇವಲ ಶ್ರೀಮಂತರ, ಶಾಸ್ತ್ರಜ್ಞರ ಅಥವಾ ಉನ್ನತ ದರ್ಜೆಯವರ ವಿಲಾಸದ ಕಲೆಯಷ್ಟೇ ಆಗಿ ಉಳಿಯದೆ, ಅದು ಜನಸಾಮಾನ್ಯರ ಭಕ್ತಿ, ಉಪಾಸನೆ, ಆರಾಧನೆಯ ಒಂದು ಮಾಧ್ಯಮವಾಗಿ ಬೆಳೆಯುವಂತೆ ಮಾಡಿದ ಕೀರ್ತಿ ಭಾರತದಾ ದ್ಯಂತ ಹರಡಿದ ಸಾಧು, ಸಂತರದು. ಯಾವುದೇ ಮತ, ಜಾತಿ, ವರ್ಗಭೇದವಿಲ್ಲದೆ ಭಕ್ತಿ, ಅಧ್ಯಾತ್ಮಗಳನ್ನು ಜನರಲ್ಲಿ ಪ್ರಚಾರ ಮಾಡಿದ ಸಂತರೆಲ್ಲರೂ ಒಂದಲ್ಲ ಒಂದು ರೀತಿ ಸಂಗೀತ ಮಾಧ್ಯಮವನ್ನು ಸಮರ್ಥವಾಗಿ ಬಳಸಿಕೊಂಡವರು. ತಮಿಳು ನಾಡಿನ ಆಳ್ವಾರ್, ನಾಯನಾರ್ ಸಂತರು, ಕರ್ನಾಟಕದ ಶಿವ ಶರಣರು ಹಾಗೂ ದಾಸ ಪಂಥದವರು, ಮಹಾರಾಷ್ಟ್ರ ಹಾಗೂ ಉತ್ತರ ಭಾರತದ ಸಂತರು ಆಯಾ ಪ್ರದೇಶಗಳಲ್ಲಿ, ಆಯಾ ಭಾಷೆಗಳಲ್ಲಿ ಹಾಡುಗಳನ್ನು ರಚಿಸಿ, ಸ್ವರಸಂಯೋಜನೆ ಮಾಡಿ, ಜನರ ಮುಂದೆ ಹಾಡಿದರು. ಸಂಗೀತದ ಹಲವು ಪ್ರಕಾರಗಳ, ಪ್ರಯೋಗಗಳ ಬಳಕೆಯೂ ಇಲ್ಲೆಲ್ಲ ವಿಪುಲವಾಗಿ ನಡೆಯಿತು. ಇದರೊಂದಿಗೆ ಬಂಗಾಳದಲ್ಲಿ ಚೈತನ್ಯ ಮಹಾಪ್ರಭುವಿನ ಮೂಲಕ ವ್ಯಾಪಕಗೊಂಡ ವೈಷ್ಣವ ಭಕ್ತಿಮಾರ್ಗ, ಶಾಕ್ತ ಪಂಥದವರ ಕಾಳೀ ಕೀರ್ತನೆ ಅಲ್ಲಿನ ಧ್ರುಪದ್ ಸಂಗೀತ, ಬಾವುಲ್ ಸಂಗೀತಗಳೊಂದಿಗೆ ಹೊಸಹೊಸ ರಚನೆಗಳಾಗಿ ಮೂಡಿಬಂದವು. ಉತ್ತರಭಾರತದಲ್ಲಿ ರಾಜಕೀಯ ಏರುಪೇರುಗಳ ನಡುವೆ ಹೊಸ ಪ್ರಭಾವಗಳಿಂದ ಪರಿಷ್ಕರಣೆಗೊಂಡ ಹಿಂದೂಸ್ತಾನಿ ಸಂಗೀತ ತನ್ನ ಆಧ್ಯಾತ್ಮಿಕ ಮೂಲಬೇರುಗಳನ್ನು ಬಿಟ್ಟುಕೊಡಲಿಲ್ಲ.

ದಕ್ಷಿಣದಲ್ಲಿ ಪುರಂದರದಾಸರು, ಅನ್ನಮಾಚಾರ್ಯ, ತ್ಯಾಗ ರಾಜ, ಶ್ಯಾಮಾಶಾಸ್ತ್ರಿ, ಮುತ್ತುಸ್ವಾಮಿ ದೀಕ್ಷಿತರೇ ಮೊದಲಾದ ಸಂತರಿಂದಲೇ ಕರ್ನಾಟಕ ಸಂಗೀತ ಹೊಸ ಹೊಸ ಪ್ರಯೋಗ ಗಳಿಗೆ ಒಳಗಾಯಿತು; ಆಧ್ಯಾತ್ಮಿಕತೆಯ ಘನೀಭೂತ ಅಂಶಗಳಿಂದ ಅವರ ಸಂಗೀತ ಪರಿಪಕ್ವಗೊಂಡಿತು. ಕೇವಲ ಶಾಸ್ತ್ರೀಯ ಸಂಗೀತ ವಷ್ಟೇ ಅಲ್ಲ; ನೃತ್ಯ, ಯಕ್ಷಗಾನ, ಕಥಕ್ಕಳಿ, ಕೂಚುಪುಡಿ, ಜಾನಪದ ಸಂಗೀತ — ಎಲ್ಲೆಡೆ ಸಂಗೀತದ ಬಳಕೆಯಾದುದು ಆಧ್ಯಾತ್ಮಿಕ ವಾಗಿಯೇ; ನವರಸಗಳ ಅಭಿವ್ಯಕ್ತಿಯೆಲ್ಲವೂ ಅಂತಿಮವಾಗಿ ಲಯವಾಗುವುದು ಭಕ್ತಿರಸದಲ್ಲಿ ಎಂಬ ನೈತಿಕ ಬದ್ಧತೆ ಇಲ್ಲಿನ ದಾಯಿತು.

## ರಾಮಕೃಷ್ಣ-ವಿವೇಕಾನಂದ ಪರಂಪರೆ

ಶ್ರೀರಾಮಕೃಷ್ಣರ ಆಗಮನದಿಂದ ಭಾರತದ ನವೋದಯದ ಕಾಲದಲ್ಲಿ ಒಂದು ಹೊಸ ಗಾಳಿ ಬೀಸಲಾರಂಭಿಸಿತು. ಆಧುನಿಕ ಯುಗದಲ್ಲೂ ಸನಾತನ ಮೌಲ್ಯಗಳ, ಶಾಶ್ವತ ತತ್ತ್ವಗಳ ಅನು ಷ್ಠಾನ ಸಾಧ್ಯವೆಂಬುದನ್ನು ಜಗತ್ತಿಗೆ ತೋರಿಸಿಕೊಟ್ಟ ಅವತಾರ ಪುರುಷರು ಶ್ರೀರಾಮಕೃಷ್ಣರು. ಸಂಗೀತ, ಕೀರ್ತನೆಗಳ ಮೂಲಕ ಅವರು ಭಕ್ತಿ-ಭಾವಗಳ ಒಂದು ದೈವೀ ಪರಿಸರವನ್ನೇ ಸೃಷ್ಟಿಸಿ ಬಿಡುತ್ತಿದ್ದರು. ತಮ್ಮ ಗಾಢ ಆಧ್ಯಾತ್ಮಿಕ ಅನುಭವದ ಹಿನ್ನೆಲೆಯಲ್ಲಿ ಜ್ಞಾನ, ಭಕ್ತಿ, ವೈರಾಗ್ಯ, ತ್ಯಾಗಗಳನ್ನು ಕುರಿತು ಹಾಡುತ್ತ ಅವರು ಹೊಸ ಪೀಳಿಗೆಯ ಯುವಕರನ್ನು ಆಧ್ಯಾತ್ಮದತ್ತ ಆಕರ್ಷಿಸು ತ್ತಿದ್ದರು. ಸಂಗೀತದಲ್ಲಿ ಅಸಾಮಾನ್ಯ ಪ್ರತಿಭೆಯಾಗಿದ್ದ ಸ್ವಾಮಿ ವಿವೇಕಾನಂದರು ಕೂಡ ಶ್ರೀರಾಮಕೃಷ್ಣರ ದಿವ್ಯ ಗಾನ ಮಾಧು ರ್ಯಕ್ಕೆ ಮರುಳಾಗಿದ್ದರು. ಸಂಗೀತಕ್ಕಿರುವ ಈ ಆಧ್ಯಾತ್ಮಿಕ ಆಯಾಮ ಶ್ರೀರಾಮಕೃಷ್ಣ ಮಹಾಸಂಘದಲ್ಲಿ ಇದೇ ರೀತಿ ಮುಂದುವರಿದುಕೊಂಡು ಬಂದಿದೆ; ಇಂದಿಗೂ ಹಲವು ಶಾಖಾ ಕೇಂದ್ರಗಳಲ್ಲಿ ಭಜನೆ, ಸಂಕೀರ್ತನೆ, ಸಂಗೀತಗಳ ಮೂಲಕ ಅದು ಭಗವಂತನ ಆರಾಧನೆಗೆ ಒಂದು ಪ್ರಮುಖ ಮಾಧ್ಯಮವಾಗಿದೆ.

ಪ್ರಪಂಚದ ವೈವಿಧ್ಯಮಯ ಸಂಗೀತ ಪದ್ಧತಿಗಳಲ್ಲಿ 'ಭಾರ ತೀಯ ಸಂಗೀತ'ದ ವೈಶಿಷ್ಟ್ಯವೇನು? ಇದು ಸಮತಲ ರೇಖಾತ್ಮಕ (horizontal) ವಾದ ಶ್ರುತಿಬದ್ಧ ಸಂಗೀತವೆಂದೆ? ಸಂಗೀತದ ಶಾಸ್ತ್ರೀಯ ತೌಲನಿಕ ದೃಷ್ಟಿಯಿಂದ ಇದು ನಿಜವಿರಬಹುದು. ಆದರೆ ನಮ್ಮ ಸಂಗೀತದ ಶ್ರೇಷ್ಠತೆಯಿರುವುದು ಇಲ್ಲಿನ ಆಧ್ಯಾತ್ಮಿಕ ಆಯಾಮದಿಂದ. ಭಕ್ತಿಯನ್ನು ಪ್ರಚೋದಿಸುವ, ಪ್ರಾಪಂಚಿಕ ಮನಸ್ಸನ್ನು ದೈವೀ ನೆಲೆಗೇರಿಸುವ, ಭಗವಂತನ ಪ್ರಾರ್ಥನೆಗೆ ಭಾವಪೂರ್ಣವಾದ ಜೀವಚೈತನ್ಯ ನೀಡುವ ಸಂಗೀತ ಇಲ್ಲಿನದು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ದ್ವಾರಕೆಯಿಂದ ಮಣಿ ಪುರದವರೆಗೆ ವ್ಯಾಪಿಸಿದೆ ಭಕ್ತಿಸಂಗೀತ; ಅಂತೆಯೇ ವೇದಕಾಲ ದಿಂದ ಆರಂಭಗೊಂಡು ಇಂದಿನವರೆಗೂ ಐತಿಹಾಸಿಕವಾಗಿ ಹರ ಡಿದೆ ಈ ಸಂಗೀತ. ಇನ್ನು ವೈವಿಧ್ಯದಲ್ಲಿ ಅನಂತ ಬಗೆಯ ಪ್ರಕಾರ ಗಳಿಂದಲೂ, ಸೂಕ್ಷ್ಮತೆಯಲ್ಲಿ ಅವ್ಯಕ್ತದವರೆಗೂ ವ್ಯಾಪಿಸಿದೆ ಅದರ ವ್ಯಾಪ್ತಿ. ಎಲ್ಲಕ್ಕಿಂತ ಮಿಗಿಲಾಗಿ, ಕಿವಿಗೆ ಬಿದ್ದೊಡನೆ ಇಂಪಾಗಿ ಕೇಳಿಸುವ, ಹೃದಯಕ್ಕೆ ತಂಪೆರೆಯುವ, ಜೀವನನ್ನು ಶಿವನನ್ನಾಗಿ ಸುವ ಸಂಗೀತ ಭಾರತದಲ್ಲಿ ಬಿಟ್ಟರೆ ಇನ್ನೆಲ್ಲಿ ಲಭಿಸೀತು?

ಆಧುನಿಕ ಯುಗದಲ್ಲಿ ಸಂಗೀತ ಪಾಶ್ಚಾತ್ಯ ಪ್ರಭಾವಗಳಿಗೆ ಒಳ ಗಾಗಿ, ತನ್ನಲ್ಲಿ ಅಂತರ್ಗತವಾಗಿರುವ ಆಧ್ಯಾತ್ಮಿಕತೆಯನ್ನು ಕಳೆದು ಕೊಂಡಿದೆ ಎಂದು ಕೆಲವರು ಭಾವಿಸುತ್ತಾರೆ. ಆದರೆ ಇಲ್ಲಿನ ಸಂಸ್ಕೃತಿ ತನ್ನ ತಾಯಿಬೇರಾದ ಆಧ್ಯಾತ್ಮಿಕತೆಯನ್ನು ಉಳಿಸಿಕೊಂಡಿರುವ ವರೆಗೂ ಭಾರತೀಯ ಸಂಗೀತವು ತನ್ನ ದಿವ್ಯ, ಭವ್ಯ ಪರಂಪರೆ ಯನ್ನು ಎಲ್ಲ ವೈವಿಧ್ಯಮಯ ಪ್ರಕಾರಗಳಲ್ಲಿ ವ್ಯಕ್ತಗೊಳಿಸಿಯೇ ತೀರುವುದು; ನಮ್ಮ ಸುದೀರ್ಘ ಇತಿಹಾಸ ಇದನ್ನೇ ಸಾರುತ್ತದೆ. ❋

# ಭಾವಸಂಗಮ

## ಭಕ್ತ ಸಮಾಗಮ '18



# ರಾಮಕೃಷ್ಣ ಮಠ

ಮಂಗಳಾದೇವಿ, ಮಂಗಳೂರು
mangaloremath@gmail.com

**26,27,28 ಜನವರಿ 2018**

ಪರಿಕಲ್ಪನೆ

## ಸಮನ್ವಯ ಮತ್ತು ಸ್ವೀಕಾರ

ಭಾವಸಂಗಮ 2018 'ಸಮನ್ವಯ-ಸ್ವೀಕಾರ'ಗಳನ್ನು ಪ್ರಧಾನ ಪರಿಕಲ್ಪನೆಯಾಗಿ ಹೊಂದಿದೆ. ದಿವ್ಯತ್ರಯರ ಸಂದೇಶದ ಬೆಳಕಿನಲ್ಲಿ ಹಾಗೂ ಭಾರತೀಯ ಪರಂಪರೆಯ ಹಿನ್ನೆಲೆಯಲ್ಲಿ ಹಲವು ಗೋಷ್ಠಿಗಳಲ್ಲಿ ಈ ತಾತ್ವಿಕತೆಯ ಹಲವು ಆಯಾಮಗಳ ಪರಿಶೀಲನೆ ನಡೆಯಲಿದೆ. ಜೊತೆಗೆ ಸಂವಾದ, ಪ್ರಶ್ನೋತ್ತರ, ಭಕ್ತಿಗೀತೆಗಳು, ಹರಿಕಥೆ, ನಿರ್ದೇಶಿತ ಧ್ಯಾನ, ಸಾಂಸ್ಕೃತಿಕ ಕಾರ್ಯಕ್ರಮಗಳು ಈ ಸಮ್ಮೇಳನದ ಭಾಗವಾಗಿರುತ್ತವೆ. ಮಂಗಳೂರಿನ ರಾಮಕೃಷ್ಣ ಮಠದಲ್ಲಿ ಜರುಗುವ ಈ ಭಕ್ತಸಮಾಗಮದಲ್ಲಿ ಭಾಗವಹಿಸುವ, ಕಾರ್ಯಕ್ರಮಗಳನ್ನು ಆನಂದಿಸಿ ಆಸ್ವಾದಿಸುವ ಸದವಕಾಶ ನಿಮ್ಮದಾಗಲಿ.

– ಸ್ವಾಮಿ ಜಿತಕಾಮಾನಂದ

### 26 ಜನವರಿ 2018

**ಗೋಷ್ಠಿ 1**
ಶ್ರೀರಾಮಕೃಷ್ಣರಲ್ಲಿ ಭಾವಸಮನ್ವಯ
ದೇವ-ಮಾನುಷ ಸಮನ್ವಯ
ಸಾಧಕ-ಗುರು ಸಮನ್ವಯ
ಗಾರ್ಹಸ್ಥ್ಯ-ಸಂನ್ಯಾಸ ಸಮನ್ವಯ

**ಗೋಷ್ಠಿ 2**
ಶ್ರೀರಾಮಕೃಷ್ಣರ ತತ್ತ್ವಸಮನ್ವಯ
ಭಕ್ತಿ-ಜ್ಞಾನ ಸಮನ್ವಯ
ಶಾಸ್ತ್ರ-ಅನುಭವಗಳ ಸಮನ್ವಯ
ಏಕ-ಅನೇಕ ಸಮನ್ವಯ

### 27 ಜನವರಿ 2018

**ಗೋಷ್ಠಿ 3**
ಶ್ರೀಮಾತೆ ಶಾರದಾದೇವಿಯವರಲ್ಲಿ ಸರ್ವಸ್ವೀಕಾರದ ಸ್ವರೂಪ
ಶ್ರೀಮಾತೆಯವರಲ್ಲಿ ಮಾನವತೆ-ದೈವಿಕತೆಗಳ ಸಮ್ಮಿಲನ
ಶ್ರೀಮಾತೆಯವರ ಸಂದೇಶ: ವ್ಯಾಪಕತೆಯ ನೆಲೆಗಟ್ಟು
ಶ್ರೀಮಾತೆಯವರಲ್ಲಿ ಸಂಪ್ರದಾಯ-ಆಧುನಿಕತೆಗಳ ಸಂಗಮ

**ಗೋಷ್ಠಿ 4**
ವಿವೇಕಾನಂದರಲ್ಲಿ ಸಮನ್ವಯದ ನೆಲೆಗಳು 1
ವಿಶ್ವಧರ್ಮದ ಸ್ವರೂಪ
ವ್ಯಷ್ಟಿ-ಸಮಷ್ಟಿಗಳ ಸಮನ್ವಯ
ಯೋಗಗಳ ಸಮನ್ವಯ

**ಗೋಷ್ಠಿ 5**
ವಿವೇಕಾನಂದರಲ್ಲಿ ಸಮನ್ವಯದ ನೆಲೆಗಳು 2
ವಿಜ್ಞಾನ ಮತ್ತು ಅಧ್ಯಾತ್ಮ
ಪೌರ್ವಾತ್ಯ ಮತ್ತು ಪಾಶ್ಚಾತ್ಯ
ಪ್ರಾಚೀನ ಮತ್ತು ಆಧುನಿಕ

### 28 ಜನವರಿ 2018

**ಗೋಷ್ಠಿ 6**
ಭಾರತೀಯ ಪರಂಪರೆಯಲ್ಲಿ ಸಮನ್ವಯದೃಷ್ಟಿ
ಉಪನಿಷತ್ತುಗಳಲ್ಲಿ ಸಮನ್ವಯದೃಷ್ಟಿ
ಭಗವದ್ಗೀತೆಯಲ್ಲಿ ಸಮನ್ವಯದೃಷ್ಟಿ
ರಾಮಾಯಣ-ಮಹಾಭಾರತಗಳಲ್ಲಿ ಸಮನ್ವಯದೃಷ್ಟಿ

## ಭಾವಸಂಗಮದಲ್ಲಿ ಇವರೆಲ್ಲರೂ ಭಾಗವಹಿಸುತ್ತಾರೆ. ನೀವು?

ಪರಮಪೂಜ್ಯ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿ, ಉಡುಪಿ
ಪರಮಪೂಜ್ಯ ಸ್ವಾಮಿ ನಿತ್ಯಸ್ಥಾನಂದಜಿ
ಸ್ವಾಮಿ ಆತ್ಮಜ್ಞಾನಂದಜಿ
ಸ್ವಾಮಿ ತ್ಯಾಗೀಶ್ವರಾನಂದಜಿ
ಸ್ವಾಮಿ ಮಂಗಲನಾಥಾನಂದಜಿ
ಸ್ವಾಮಿ ಸತ್ತ್ವಸ್ಥಾನಂದಜಿ
ಸ್ವಾಮಿ ನಿರ್ಭಯಾನಂದ ಸರಸ್ವತಿ
ಸ್ವಾಮಿ ವೀರೇಶಾನಂದ ಸರಸ್ವತಿ
ಸ್ವಾಮಿ ಧರ್ಮವ್ರತಾನಂದಜಿ
ಸ್ವಾಮಿ ಪ್ರಕಾಶಾನಂದಜಿ
ಸ್ವಾಮಿ ಶಾಂತಿವ್ರತಾನಂದಜಿ
ಮಾತಾಜಿ ವಿವೇಕಮಯಿ
ಮಾತಾಜಿ ಯೋಗಾನಂದಮಯಿ
ಮಾತಾಜಿ ತ್ಯಾಗಮಯಿ
ಶ್ರೀ ವಿದ್ಯಾಭೂಷಣ
ಡಾ. ಜಿ. ಎಸ್. ಜಯದೇವ
ಡಾ. ಹೆಚ್. ಎನ್. ಮುರಳೀಧರ
ಶ್ರೀ ಅನಂತರಾಮು
ಡಾ. ಗುರುಪಾದ ಮರಿಗುದ್ದಿ
ಡಾ. ಆರ್ ಬಾಲಸುಬ್ರಮಣ್ಯಂ
ಡಾ. ಪ್ರಸನ್ನಾಕ್ಷಿ
ಶ್ರೀ ಲಕ್ಷ್ಮೀಶ ತೋಳ್ಪಾಡಿ
ಶ್ರೀ ಶ್ರೀರಾಂ ಭಟ್
ಶ್ರೀ ದತ್ತಾತ್ರೇಯ ವೇಲಂಕರ್
ಡಾ. ತೇಜಸ್ವಿನಿ ಬಿ.ವೈ
ಶ್ರೀಕೃಷ್ಣ ಉಪಾಧ್ಯಾಯ







**ಸಂಪರ್ಕ**
**94492 88200**
**0824 2414412**

ಪ್ರತಿನಿಧಿಗಳಾಗಬಯಸುವವರು ದೂರವಾಣಿ ಮೂಲಕ ಹೆಸರುಗಳನ್ನು ನೋಂದಾಯಿಸಿಕೊಳ್ಳಬಹುದು ಹಾಗೂ ಕಾರ್ಯಕ್ರಮದ ದಿನದಂದು ಶುಲ್ಕವನ್ನು ಸಂದಾಯ ಮಾಡಬಹುದು.(ಮೊದಲೇ ಡಿ.ಡಿ./ಚೆಕ್ ಕಳಿಸಬೇಕಾಗಿಲ್ಲ)
ಕಾರ್ಯಕ್ರಮದ ಮೂರು ದಿನಗಳ ಕಾಲ ಸರಳ ಊಟ-ವಸತಿ ಸೌಕರ್ಯವನ್ನು ಒದಗಿಸಲಾಗುವುದು. ಹಾಗೂ ವಸತಿನಿಲಯದಿಂದ ಹೋಗಿಬರಲು ವಾಹನದ ವ್ಯವಸ್ಥೆಯನ್ನು ಕಲ್ಪಿಸಲಾಗುವುದು.

### ಪ್ರವೇಶ ಶುಲ್ಕ

ವಸತಿ ಸಹಿತ : ₹. 1000/–
ವಸತಿ ರಹಿತ : ₹. 500/–



# ಸಂಗೀತ ಮತ್ತು ಉಪಾಸನೆ

**ಸ್ವಾಮಿ ನಿತ್ಯಸ್ಥಾನಂದ**

ಭಾರತೀಯ ಸಂಸ್ಕೃತಿಯಲ್ಲಿ ಆಧ್ಯಾತ್ಮಿಕತೆ ಹಾಗೂ ಸಂಗೀತಾದಿ ಕಲೆಗಳ ನಡುವಿನ ಸಂಬಂಧ ಕುರಿತು ತಾತ್ತ್ವಿಕವಾಗಿ ಚಿಂತಿಸುವ ಪೂಜ್ಯ ಸ್ವಾಮೀಜಿಯವರು 'ವಿವೇಕಪ್ರಭ'ದ ಮೊದಲನೆಯ ಸಂಪಾದಕರು; ಹಾಗೂ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರಾಗಿದ್ದರು. ಪ್ರಸಿದ್ಧ ಪ್ರವಚನಕಾರರೂ, ಬರಹಗಾರರೂ, ಉತ್ತಮ ಚಿಂತಕರೂ ಆಗಿರುವ ಅವರು ಅನೇಕ ಗ್ರಂಥಗಳನ್ನು ರಚಿಸಿದ್ದು, ಪ್ರಸ್ತುತ ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**ಮಾ**ನವನಲ್ಲಿ ಮೂರು ಬಗೆಯ ಅನ್ವೇಷಣೆಗಳನ್ನು ಗುರುತಿಸಬಹುದು. ಸತ್ಯಾನ್ವೇಷಣೆ, ಜ್ಞಾನಾನ್ವೇಷಣೆ ಮತ್ತು ಸುಖಾನ್ವೇಷಣೆ. ಯಾವುದು ಸತ್ಯ ಎಂಬುದು ಸನಾತನ ಪ್ರಶ್ನೆ. ಒಂದು ವಸ್ತುವಿನ ಸತ್ಯತೆಯನ್ನು, ಅದರ ಸತ್ಯಾಂಶ ಯಾವುದು ಎಂಬುದನ್ನು ತಿಳಿಯಬಯಸುತ್ತೇವೆ. ಒಂದು ಘಟನೆಯ ಹಿಂದಿರುವ ಸತ್ಯಾಂಶ ಯಾವುದು — ಇದನ್ನು ತಿಳಿಯುವುದು ಅತ್ಯಂತ ಕಷ್ಟ ಅಥವಾ ಕೆಲವೊಮ್ಮೆ ಅಸಾಧ್ಯವೇ ಆದರೂ—ಅದನ್ನು ತಿಳಿಯಲು ಬಯಸುತ್ತೇವೆ. ಇದೇ ಒಂದು ವ್ಯಕ್ತಿಗೂ ಅನ್ವಯಿಸುತ್ತದೆ. ಆತ್ಯಂತಿಕವಾಗಿ ಇಡೀ ಜಗತ್ತಿನ ಹಿಂದಿರುವ ಸತ್ಯ ಯಾವುದು ಎಂಬುದನ್ನು ತಿಳಿಯುವ ಬಯಕೆಯೂ ಇದೆ. ಹೀಗೆ ಸತ್ಯಾನ್ವೇಷಣೆಯ ವಿವಿಧ ಮುಖಗಳು ವಿಜ್ಞಾನ, ತತ್ತ್ವಶಾಸ್ತ್ರ, ಮನಶ್ಶಾಸ್ತ್ರ ಮುಂತಾದ ವಿವಿಧ ಜ್ಞಾನ ಕ್ಷೇತ್ರಗಳಿಗೆ ಕಾರಣವಾದವು.

ಎರಡನೆಯದು ಜ್ಞಾನಾನ್ವೇಷಣೆ. ಅತ್ಯಂತ ದಡ್ಡ ವ್ಯಕ್ತಿಯೂ ಜ್ಞಾನವನ್ನು ಬಯಸುತ್ತಾನೆ. ಜ್ಞಾನವಿಲ್ಲದೆ ಬದುಕು ಸಾಧ್ಯವಿಲ್ಲ. ಇಂದ್ರಿಯ ಮನಸ್ಸುಗಳಿರುವುದೇ ಜ್ಞಾನವನ್ನು ಪಡೆಯುವುದಕ್ಕೆ. ಇವುಗಳೊಂದಿಗೆ ಮನುಷ್ಯನು ವಿಚಾರಶಕ್ತಿಯನ್ನು ಬೆಳೆಸಿಕೊಂಡು ಅವನು ತನ್ನ ಜ್ಞಾನಕ್ಷೇತ್ರವನ್ನು ವಿಸ್ತಾರಗೊಳಿಸುತ್ತಾ ಹೋಗುತ್ತಾನೆ. ಜ್ಞಾನವನ್ನು ಪಡೆಯುವ ವಿಧಾನ, ಅದರ ಸ್ವರೂಪ, ಅದರ ಯಥಾರ್ಥತೆಯ ನಿರ್ಣಯ ಇವೇ ಮುಂತಾದ ವಿಷಯಗಳು ಜ್ಞಾನಾನ್ವೇಷಣೆಯ ವಿವಿಧ ಮುಖಗಳು. ಮಾನವ ವಿಕಾಸದ ಪ್ರಾರಂಭದ ಹಂತದಲ್ಲಿ ಅವನಿಗೆ ತನ್ನ ಇರುವಿಕೆಯೇ ಪ್ರಧಾನವಾಗಿತ್ತು. ವಿಕಾಸವಾದಂತೆಲ್ಲ ಅವನ ಜ್ಞಾನಕ್ಷೇತ್ರವು ವಿಸ್ತಾರವಾಗುತ್ತ ಬಂದು ಈಗ ಜ್ಞಾನಸ್ಫೋಟವಾಗಿದೆ (explosion of knowledge).

ಮೂರನೆಯ ಸುಖಾನ್ವೇಷಣೆಯು ಅತ್ಯಂತ ಸುಪರಿಚಿತ ವಿಷಯ. ಇದು ಅಸಂಸ್ಕೃತ ಇಂದ್ರಿಯಸುಖದಿಂದ ಹಿಡಿದು ಅತ್ಯುನ್ನತ ಆತ್ಮಸುಖದ ವರೆಗೆ ವಿವಿಧ ರೂಪವನ್ನು ಪಡೆಯುತ್ತದೆ. ಸಾಮಾನ್ಯ ವಿಷಯಸುಖವು ಸುಸಂಸ್ಕೃತಗೊಂಡಾಗ ಸೌಂದರ್ಯೋಪಾಸನೆಯಾಗಿ ವ್ಯಕ್ತವಾಗುತ್ತದೆ. ಈ ಸೌಂದರ್ಯೋಪಾಸನೆಯೇ ಸಂಗೀತ, ಸಾಹಿತ್ಯ, ಚಿತ್ರಕಲೆ ಮುಂತಾದ ವಿವಿಧ ಕಲಾರೂಪಗಳಿಗೆ ನಾಂದಿಯಾಗುತ್ತದೆ. ಧ್ವನಿಗಳ ಸಾಮರಸ್ಯವೇ (harmony of sound) ಸಂಗೀತ; ವಿಚಾರಗಳ ಸಾಮರಸ್ಯವೇ ಸಾಹಿತ್ಯ; ವರ್ಣಗಳ, ರೇಖೆಗಳ ಸಾಮರಸ್ಯವೇ ಚಿತ್ರ — ಎಂದು ಮುಂತಾಗಿ ವರ್ಣಿಸಬಹುದು. ಹೀಗೆಯೇ ನಮ್ಮ ಅಂತರಂಗದಲ್ಲಿಯೂ ಸಾಮರಸ್ಯವಿದ್ದರೆ — ಗೊಂದಲ ಸಂಘರ್ಷಗಳು ಇಲ್ಲದಿದ್ದರೆ — ಜೀವನವು ಸುಖದಾಯಕ ಕಲೆಯಾಗುತ್ತದೆ. ನಮ್ಮೆಲ್ಲರಲ್ಲೂ ಸೌಂದರ್ಯವನ್ನು ಸವಿಯುವ ಸಾಮರ್ಥ್ಯವಿದೆ. ಒಂದು ಹೂವನ್ನು ನೋಡಿ, ನಿಸರ್ಗ ವೈವಿಧ್ಯವನ್ನು ಗುರುತಿಸಿ ಅಥವಾ

ಸಂಗೀತವನ್ನು ಕೇಳಿ ಸವಿಯುವ ಸಾಮರ್ಥ್ಯ ಬಹುಶಃ ಮಾನವ ನಿಗೆ ಮಾತ್ರ ಇರುವುದು. ಇದರಿಂದಾಗಿಯೇ, '**ಸಾಹಿತ್ಯ ಸಂಗೀತ ಕಲಾವಿಹೀನಃ ಸಾಕ್ಷಾತ್ ಪಶುಃ ಪುಚ್ಛವಿಷಾಣಹೀನಃ**'— ''ಸಂಗೀತ ಸಾಹಿತ್ಯಕಲೆಗಳಿಲ್ಲದವನು ಬಾಲಕೊಂಬುಗಳಿಲ್ಲದ ಪ್ರಾಣಿಯೇ'' ಎಂದು ಭರ್ತೃಹರಿ ಹೇಳುತ್ತಾನೆ. *(ನೀತಿಶತಕ, ೧೨)*

ಈ ಮೂರು ಅನ್ವೇಷಣೆಗಳು ಅನುಕ್ರಮವಾಗಿ ಪರಮಾತ್ಮನ ಸ್ವರೂಪವಾದ ಸತ್, ಚಿತ್ ಮತ್ತು ಆನಂದಗಳನ್ನು ನಿರ್ದೇಶಿಸು ತ್ತವೆ. ಆತ್ಮತತ್ತ್ವದ **ಸತ್** ಅಂಶವು ಸತ್ಯಾನ್ವೇಷಣೆಯ ತುಡಿತವಾಗಿ ವ್ಯಕ್ತವಾಗುತ್ತದೆ; **ಚಿತ್** ಅಂಶವು ಜ್ಞಾನಾನ್ವೇಷಣೆಯ ತುಡಿತವಾಗಿ ಅಭಿವ್ಯಕ್ತವಾಗುತ್ತದೆ; ಹಾಗೆಯೇ **ಆನಂದಾಂಶ**ವು ಸುಖಾನ್ವೇಷ ಣೆಯ ತುಡಿತವಾಗಿ ಕಾಣಿಸಿಕೊಳ್ಳುತ್ತದೆ. ಕೊನೆಯದಾದ ಸುಖಾ ನ್ವೇಷಣೆಗೆ ಸಂಬಂಧಿಸಿದಂತೆ ಸಂಗೀತೋಪಾಸನೆಯನ್ನು ನಾವಿಲ್ಲಿ ಪರಿಗಣಿಸಬೇಕಾಗಿದೆ.

ಭಾರತೀಯ ಸಂಗೀತದಲ್ಲಿ ರಾಗ, ಶ್ರುತಿ, ಲಯ ಇವು ಮೂರೂ ಅತ್ಯಂತ ಮುಖ್ಯ. ಈ ಮೂರರ ಮೂಲಕ ಸಾಮಾನ್ಯ ಶಬ್ದವು ಸಂಗೀತವಾಗಿ ಪರಿವರ್ತಿತವಾಗುತ್ತದೆ. 'ಬಾರೊ' ಎಂಬುದು ಒಂದು ಸಾಮಾನ್ಯ ಶಬ್ದ. ಅದನ್ನು ರಾಗಬದ್ಧವಾಗಿ ಉಚ್ಚರಿಸಿದರೆ ಅದು ಸಂಗೀತವಾಗುತ್ತದೆ. ರಾಗವು ಸಪ್ತಸ್ವರಗಳ ಮೂಲಕ ವ್ಯಕ್ತವಾಗುತ್ತದೆ. ಸಪ್ತಸ್ವರಗಳೇ ಸಂಗೀತವಲ್ಲ, ಅವು ರಾಗವನ್ನು ವ್ಯಕ್ತಪಡಿಸುವ ಮಾಧ್ಯಮ ಅಷ್ಟೇ. ಹಾಡುವವನಾಗಲಿ ಕೇಳುವವನಾಗಲಿ ಸ್ವರಗಳನ್ನು ಮೀರಿಹೋದಾಗ ನಿಜವಾದ ಸಂಗೀತಾನುಭವವಾಗುತ್ತದೆ. ಆಗ ತಲ್ಲೀನತೆ ಉಂಟಾಗುತ್ತದೆ. ಆಗ ಉಂಟಾಗುವ ಆನಂದವನ್ನೇ 'ಬ್ರಹ್ಮಾನಂದ ಸಹೋದರ' ಎಂದು ಕರೆದಿರುವುದು. ಹೇಗೆ ಅಕ್ಷರ, ಪದ, ವಾಕ್ಯಗಳು ವಿಚಾರ ಗಳನ್ನು ವ್ಯಕ್ತಪಡಿಸುವ ಮಾಧ್ಯಮವೋ, ಅವೇ ವಿಚಾರಗಳಲ್ಲವೋ, ಹಾಗೆಯೇ ಸಪ್ತಸ್ವರಗಳೇ ಸಂಗೀತವಲ್ಲ.

ಒಬ್ಬನು ಸಂಗೀತಾಭ್ಯಾಸ ಮಾಡುತ್ತಿರುತ್ತಾನೆ. ಪ್ರಾರಂಭದಲ್ಲಿ ಅವನ ಗಮನ ಅನೇಕ ವಿಷಯಗಳ ಕಡೆ ಇರಬೇಕಾಗುತ್ತದೆ. ಅವನು ಹಾರ್ಮೋನಿಯಂ ನುಡಿಸುತ್ತಿದ್ದರೆ ಅದರ ಪ್ರತಿಯೊಂದು ಮನೆಯ ಕಡೆಗೂ ಅವನು ಕಣ್ಣಿರಿಸಬೇಕಾಗುತ್ತದೆ. ಹಾಡಿನ ಬರಹವನ್ನೂ (text) ಅವನು ನೋಡುತ್ತಿರಬೇಕಾಗುತ್ತದೆ. ಆ ಕಡೆ ತಾಳದ ಕಡೆ ವಿಶೇಷ ನಿಗಾ ವಹಿಸಬೇಕಾಗುತ್ತದೆ. ಮುಂದೆ ಅವನು ಸಂಗೀತದಲ್ಲಿ ಪ್ರಾವೀಣ್ಯತೆಯನ್ನು ಪಡೆದ ಮೇಲೆ ಇವಾವುದರ ಕಡೆಗೂ ಗಮನ ಹರಿಸಬೇಕಾಗಿಲ್ಲ. ಕೈಬೆರಳುಗಳು ಹಾರ್ಮೋ ನಿಯಂ ನುಡಿಸುತ್ತಿರುತ್ತವೆ, ಹಾಡು ಕಂಠಸ್ಥವಾಗಿರುತ್ತದೆ ಮತ್ತು ತಾಳ ಅಥವಾ ಲಯ ಅತ್ಯಂತ ಸ್ವಾಭಾವಿಕವಾಗಿರುತ್ತದೆ. ಈಗ ಅವನ ಸಂಪೂರ್ಣ ಗಮನ ರಾಗದ ಕಡೆಗೇ ಇರುತ್ತದೆ. (ಶ್ರೋತೃ ಗಳನ್ನು ಅವನು ಮರೆಯಬೇಕು). ಆಗ ಅವನ ಮನಸ್ಸು ರಾಗದಲ್ಲೇ ತಲ್ಲೀನವಾಗಿರುತ್ತದೆ. ರಾಗವೂ ತಾನೇತಾನಾಗಿ ಹೊರ ಹೊಮ್ಮುತ್ತಿರು ತ್ತದೆ, ಅಲ್ಲಿ ಸ್ವಪ್ರಯತ್ನವೂ ಇರುವುದಿಲ್ಲ, ತನ್ನನ್ನೂ ಮರೆಯು ತ್ತಾನೆ. ಈಗ ಸಂಗೀತ ಸ್ವಾಭಾವಿಕವಾಗಿ ಹರಿಯುತ್ತಿರುತ್ತದೆ. ಇದು ಒಂದು ರೀತಿಯ ಶಿಖರಾನುಭವ (Peak Experience).

ಈ ಅನುಭವವನ್ನು ಆಧ್ಯಾತ್ಮಿಕ ಜೀವನದಲ್ಲಿ ಉಂಟಾಗುವ ಸಮಾಧಿ ಅನುಭವಕ್ಕೆ ಹೋಲಿಸಲಾಗಿದೆ. ಸಮಾಧಿಯ ಸ್ಥಿತಿಯನ್ನು ಪತಂಜಲಿಯ ಯೋಗಸೂತ್ರವು ಹೀಗೆ ವಿವರಿಸುತ್ತದೆ: '**ತದೇ ವಾರ್ಥಮಾತ್ರನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ**' — ''ಆ ಧ್ಯಾನದ ಸ್ಥಿತಿಯಲ್ಲಿರುವಾಗ ಧ್ಯೇಯವಸ್ತು ಮಾತ್ರ ಬೆಳಗು ತ್ತಿದ್ದು , ಮನಸ್ಸು ತನ್ನ ಸ್ವರೂಪವನ್ನು ಕಳೆದುಕೊಂಡಂತಿದ್ದರೆ ಆ ಅವಸ್ಥೆಯನ್ನು **ಸಮಾಧಿ** ಎಂದು ಕರೆಯುವುದು''. ಪತಂಜಲಿ ಇದನ್ನು ಒಂದು ಉದಾಹರಣೆಯ ಮೂಲಕ ವಿವರಿಸುತ್ತಾರೆ. ಶುದ್ಧ ಸ್ಫಟಿಕವು ಆ ಹೂವಿನ ಬಣ್ಣವನ್ನೇ ತಾಳುತ್ತದೆ, ಅಲ್ಲಿ ಹೂವಿನ ಬಣ್ಣವೇ ಕಾಣುತ್ತದೆ, ಸ್ಫಟಿಕವೇ ಇಲ್ಲದಂತೆ ಕಾಣುತ್ತದೆ. ಹಾಗೆ ಯೇ ಸಮಾಧಿಯಲ್ಲಿ ಧ್ಯೇಯವಸ್ತುವು ಮನಸ್ಸನ್ನು ಸಂಪೂರ್ಣ ಆವರಿಸಿಕೊಂಡುಬಿಡುತ್ತದೆ, ಧ್ಯೇಯವಸ್ತು ಮಾತ್ರ ಬೆಳಗುತ್ತಿರು ತ್ತದೆ. ಇದೇ ರೀತಿ ಸಂಗೀತದಲ್ಲಿ ರಾಗವು ಗಾಯಕನ ಮನಸ್ಸನ್ನು ಸಂಪೂರ್ಣ ಆವರಿಸಿಕೊಂಡುಬಿಡುತ್ತದೆ. ವೇದಾಂತದಲ್ಲಿ ಉಪಾ ಸನೆಯನ್ನು ಈ ರೀತಿ ನಿರ್ವಚಿಸಲಾಗಿದೆ: **ಉಪಾಸನಂ ನಾಮ ಸಮಾನಪ್ರತ್ಯಯ ಪ್ರವಾಹಕರಣಮ್** — ''ಉಪಾಸನೆಯೆಂದರೆ ಸಮಾನವಾದ ಪ್ರತ್ಯಯವು ನಿರಂತರವಾಗಿ ಹರಿಯುವಂತೆ ಮಾಡುವುದು.'' ಅಂದರೆ, ನಾವು ಯಾವ ವಸ್ತುವಿನ ಮೇಲೆ ಧ್ಯಾನ ಮಾಡುತ್ತಿರುತ್ತೇವೆಯೋ ಆ ವಸ್ತುವಿನ ಜ್ಞಾನ (ಪ್ರತ್ಯಯ) ನಿರಂತರವಾಗಿ ಮನಸ್ಸಿನಲ್ಲಿರಬೇಕು; ಆ ವಸ್ತುವೇ ಮನಸ್ಸನ್ನು ಸಂಪೂರ್ಣ ಆಕ್ರಮಿಸಿಕೊಂಡುಬಿಡಬೇಕು. ಇಂತಹ ಸ್ಥಿತಿಯು ಸಂಗೀತದ ಮೂಲಕವೂ ಉಂಟಾದರೆ, ಯಾವುದೋ ಒಂದು ರಾಗವು ಮನಸ್ಸನ್ನು ಸಂಪೂರ್ಣ ಆವರಿಸಿಕೊಂಡುಬಿಟ್ಟರೆ ಅದು ಒಂದು ರೀತಿಯ ಉಪಾಸನೆಯಾಗಿ ಬಿಡುತ್ತದೆ. ಇದನ್ನೇ ಸಂಗೀತೋಪಾಸನೆ ಎಂದು ಕರೆಯುವುದು. ಆದರೆ ಇದೊಂದು ಆಧ್ಯಾತ್ಮಿಕ ಉಪಾಸನೆಯೂ ಆಗಬೇಕಾದರೆ ಗಾಯಕನು ಭಗವ ದ್ಭಕ್ತನಾಗಿರಬೇಕು. ಆಗ ಸಂಗೀತವೂ ಭಕ್ತಿಭಾವದಿಂದ ಕೂಡಿದ್ದು, ಗಾಯಕನು ಭಗವದ್ಭಾವದಲ್ಲಿ ತಲ್ಲೀನನಾಗಿರುತ್ತಾನೆ. ಆಗ ಸಂಗೀತೋಪಾಸನೆಯು ಭಗವದುಪಾಸನೆಯಾಗಿ ಪರಿಣಮಿಸು ತ್ತದೆ. ರಾಗದಲ್ಲಿ ನೆಲೆನಿಂತ ಮನಸ್ಸು ಭಗವಂತನಲ್ಲಿ ನೆಲೆಗೊಳ್ಳು ತ್ತದೆ. ಇದು ನದಿಯ ಮೂಲಕ ತೇಲಿಕೊಂಡು ಹೋಗಿ ಸಾಗರ ವನ್ನು ಸೇರಿದಂತೆ. ಈ ರೀತಿ ಸಂಗೀತದ ಮೂಲಕ ಭಗವದುಪಾಸನೆ ಮಾಡಿ ಸಿದ್ಧಿಯನ್ನು ಪಡೆದ ಸಂತರ ಉದಾಹರಣೆ ಬಹಳಷ್ಟಿವೆ.

ಶ್ರೀರಾಮಕೃಷ್ಣರು ತುಂಬ ಸಂಗೀತಪ್ರಿಯರು. ಅವರು ಅತ್ಯಂತ ಸುಶ್ರಾವ್ಯವಾಗಿ ಹಾಡುತ್ತಿದ್ದರು, ಹಾಗೂ ಇತರರು ಹಾಡುವುದನ್ನು ಕೇಳಿ ಆನಂದಿಸುತ್ತಿದ್ದರು. ಹಾಡು ಕೇಳುತ್ತಾ ಭಗವದ್ಭಾವದಲ್ಲಿ ತಲ್ಲೀನರಾಗುತ್ತಿದ್ದರು. ಹಾಡುವಾಗ ಎಲ್ಲಾ ದರೂ ಲಯ, ಅಥವಾ ಶ್ರುತಿ ತಪ್ಪಿದರೆ ಅವರಿಗೆ ಭಾವಭಂಗ

ವಾಗುತ್ತಿತ್ತು. ಶಾಸ್ತ್ರಬದ್ಧ ಸಂಗೀತವು ಭಗವದ್ಭಾವಕ್ಕೆ ಎಷ್ಟು ಪೂರಕ ಎಂಬುದನ್ನು ಇದು ಸೂಚಿಸುತ್ತದೆ. ಆದ್ದರಿಂದಲೇ ಶಾಸ್ತ್ರೀಯ ಸಂಗೀತವನ್ನು ಕೇಳುವಾಗ ಸಾಮಾನ್ಯ ಸಾಧಕರು ಧ್ಯಾನಭಾವವನ್ನು ತಲುಪುತ್ತಾರೆ. ಗಾಯಕರೂ ಭಗವದ್ಭಾವದಲ್ಲಿ ಹಾಡಿದರೆ ಆ ಸಂಗೀತದ ಸ್ವಾರಸ್ಯವೇ ಬೇರೆ!

ಸಂಗೀತವೆಂದರೆ ಶ್ರುತಿಬದ್ಧವಾದ ಧ್ವನಿ. ಒಂದು ಸಂಗೀತ ಕಛೇರಿಯಲ್ಲಿ ಹಾಡುವವನ ಶ್ರುತಿಗೆ ತಕ್ಕಂತೆ ಎಲ್ಲ ವಾದ್ಯಗಳನ್ನೂ ಅಳವಡಿಸುತ್ತಾರೆ. ಒಂದೊಂದು ವಾದ್ಯದ ಧ್ವನಿ ಬೇರೆ ಬೇರೆ ಯಾದರೂ ಅವೆಲ್ಲವೂ ಒಂದೇ ಶ್ರುತಿಯಿಂದ ಕೂಡಿರುವುದರಿಂದ ಅದೊಂದು ಉತ್ತಮ ಸಂಗೀತವಾಗುತ್ತದೆ. ಇಲ್ಲದಿದ್ದರೆ ಎಲ್ಲ ವಾದ್ಯಗಳನ್ನೂ ಎಷ್ಟೇ ಚೆನ್ನಾಗಿ ನುಡಿಸಿದರೂ ಅದೊಂದು ಸಂತೆಯ ಗದ್ದಲವಾಗುತ್ತದೆ. ನಮ್ಮ ಜೀವನದಲ್ಲಿಯೂ ಇಂದ್ರಿಯ, ಮನಸ್ಸು ಭಾವನೆ ಇತ್ಯಾದಿ ಹಲವಾರು ಅಂಶಗಳಿವೆ. ಇವುಗಳೆಲ್ಲ ದರ ಸ್ವರೂಪ, ಕೆಲಸ ಬೇರೆ ಬೇರೆ. ಆದರೆ ಇವೆಲ್ಲವೂ ಭಗವದ್ ಶ್ರುತಿಯೊಡನೆ ಹೊಂದಿಕೊಂಡು ಕೆಲಸಮಾಡುವಂತಾದರೆ ನಮ್ಮ ವ್ಯಕ್ತಿತ್ವದಲ್ಲಿ ಒಂದು ಸಾಮರಸ್ಯ ಉಂಟಾಗುತ್ತದೆ. ಇದೇ ರೀತಿ ಕುಟುಂಬದಲ್ಲಿ ಮತ್ತು ಒಟ್ಟು ಸಮಾಜದಲ್ಲಿ ಸಾಮರಸ್ಯವಿದ್ದರೆ ಅವೂ ಒಂದು ಸಂಗೀತವಾಗುತ್ತದೆ. ಒಂದು ಕುಟುಂಬದಲ್ಲಿ ಒಬ್ಬ ವ್ಯಕ್ತಿಯ ಸಂಗೀತ ಅಪಸ್ವರದಿಂದ ಕೂಡಿದ್ದರೆ ಇಡೀ ಕೌಟುಂಬಿಕ ಸಂಗೀತವೇ ಕೆಟ್ಟು ಹೋಗುತ್ತದೆ. ಸ್ವಲ್ಪ ಅಪಶ್ರುತಿಯುಂಟಾದರೂ ತಕ್ಷಣ ಅದನ್ನು ಸರಿಪಡಿಸಿಕೊಳ್ಳಬೇಕು. ಒಂದು ಮನೆಯಲ್ಲಿ ಒಬ್ಬನು ಚೆನ್ನಾಗಿ ಹಾಡುತ್ತಿದ್ದು, ಇನ್ನೊಬ್ಬನು ಮನಬಂದಂತೆ ಕಿರುಚುತ್ತಿದ್ದರೆ ಹೇಗಿರುತ್ತದೆ? ಕುಟುಂಬದಲ್ಲಿ ಸಾಮರಸ್ಯವಿಲ್ಲ ದಿದ್ದರೆ ಇದೇ ಪರಿಸ್ಥಿತಿ ಉಂಟಾಗುತ್ತದೆ.

ಇಡೀ ಜಗತ್ತೇ ಒಂದು ನೃತ್ಯ ಸಂಗೀತ. ವಿಶ್ವದ ಪ್ರತಿ ಕಣ ಕಣವೂ ಚಲಿಸುತ್ತ, ಕಂಪಿಸುತ್ತ ಈ ನೃತ್ಯಸಂಗೀತದಲ್ಲಿ ಭಾಗ ವಹಿಸುತ್ತದೆ. ಈ ಸಂಗೀತ ನಮಗೆ ಅರ್ಥವಾಗದೆ ಇರಬಹುದು. ಎಲ್ಲೆಲ್ಲಿಯೂ ಅರಾಜಕತೆ, ಅಪಸ್ವರ, ಅಸಂಬದ್ಧಗಳೇ ನಮಗೆ ಗೋಚರವಾಗುತ್ತಿರಬಹುದು. ಲಘುಸಂಗೀತವನ್ನು ಇಷ್ಟಪಡು ವವರಿಗೆ ಶಾಸ್ತ್ರೀಯ ಸಂಗೀತ ಅರ್ಥವಾಗುವುದಿಲ್ಲ, ಅದು ಏನೋ ಕಿರುಚಾಟದಂತೆ ಕೇಳಿಸುತ್ತದೆ. ಆದರೆ ಕೇಳುತ್ತ ಕೇಳುತ್ತ ಅದರಲ್ಲಿ ಅಭಿರುಚಿ ಉಂಟಾದರೆ ಅದೊಂದು ಶ್ರೇಷ್ಠ ಮಟ್ಟದ ಸಂಗೀತವಾಗಿ ಮನಸೆಳೆಯುತ್ತದೆ. ಹಾಗೇಯೇ ಈ ವಿಶ್ವಸಂಗೀತ ವನ್ನು ಕೇಳಿ ಅನುಭವಿಸುವ ಕಿವಿ ನಮಗಿರಬೇಕು. ಆಗಲೇ ಅದರ ಸೊಬಗನ್ನು ಸವಿಯಬಹುದು. ಸಾಧನೆಯ ಮೂಲಕ ಸೂಕ್ಷ್ಮ ಗ್ರಹಣಶಕ್ತಿಯನ್ನು ಪಡೆದಾಗ, ಎಲ್ಲ ವ್ಯಷ್ಟಿಭಾವವನ್ನು ಮೀರಿ ಸಮಷ್ಟಿಯಲ್ಲಿ ಮನಸ್ಸು ನೆಲೆನಿಂತಾಗ ಈ ವಿಶ್ವಗೀತೆಯ ಮಾಧುರ್ಯವನ್ನು ಅನುಭವಿಸಬಹುದು. ಫ್ರಿಟ್ಜಾಫ್ ಕಾಪ್ರ ಅವರು ತಮ್ಮ **The Tao of Physics** ಎಂಬ ಗ್ರಂಥದಲ್ಲಿ ಹೇಳು ತ್ತಾರೆ: ''ಚಲನೆ ಮತ್ತು ಲಯ ಭೌತದ್ರವ್ಯದ ಬಹುಮುಖ್ಯ ಲಕ್ಷಣಗಳೆಂದು ಆಧುನಿಕ ಭೌತಶಾಸ್ತ್ರವು ನಮಗೆ ತೋರಿಸಿದೆ. ಎಲ್ಲ ಭೌತದ್ರವ್ಯವೂ, ಈ ಭೂಮಿಯ ಮೇಲಿರಲಿ ಅಥವಾ ಬಾಹ್ಯಕಾಶ ದಲ್ಲಿರಲಿ, ನಿರಂತರ ವಿಶ್ವನರ್ತನದಲ್ಲಿ ತೊಡಗಿವೆ... ಕ್ಷೇತ್ರ ಸಿದ್ಧಾಂತದ ಪ್ರಕಾರ ಪ್ರತಿಯೊಂದು ಕಣವೂ ತನ್ನದೇ ಹಾಡನ್ನು ಹಾಡುತ್ತಿದೆ. ಅದು ಲಯಬದ್ಧವಾಗಿ ನರ್ತಿಸುತ್ತ ವಿವಿಧ ಶಕ್ತಿ ವಿನ್ಯಾಸಗಳನ್ನೂ, ರೂಪಗಳನ್ನು ಉಂಟುಮಾಡುತ್ತಿದೆ. ನಾವೆ ಲ್ಲರೂ ಅದರ ಶ್ರುತಿಗೆ ತಕ್ಕಂತೆ ನರ್ತಿಸುತ್ತಿರುವೆವು.''

ಲೀಲಾನಾಟಕಸೂತ್ರಧಾರಿಯಾದ ಭಗವಂತನು ಪ್ರತಿಯೊಂ ದನ್ನೂ ಪ್ರತಿಯೊಬ್ಬರನ್ನೂ ತನ್ನದೇ ರೀತಿಯಲ್ಲಿ ನಡೆಸುತ್ತ ನುಡಿ ಸುತ್ತ ಒಂದು ವಿರಾಟ್ ಸಂಗೀತನೃತ್ಯ ಮೇಳವನ್ನು ನಡೆಸುತ್ತಿರು ವನು. ಇಡೀ ವಿಶ್ವವೇ ಒಂದು ಸಂಗೀತ. ಈ ಗೀತೆಯ ಶ್ರುತಿ ಯೊಂದಿಗೆ ನಮ್ಮ ಬಾಳಿನ ಶ್ರುತಿಯೂ ಮೇಳೈಸಿದಾಗ ನಮ್ಮ ಬದುಕೂ ಒಂದು ಸಂಗೀತವಾಗುತ್ತದೆ.

ನಮ್ಮ ವ್ಯಕ್ತಿತ್ವ ಒಂದು ತಂತಿವಾದ್ಯವಿದ್ದಂತೆ. ಇದರಲ್ಲಿ ಭಾವ ತಂತಿ, ಆಲೋಚನಾತಂತಿ, ವಿಚಾರತಂತಿ ಇತ್ಯಾದಿಗಳಿವೆ. ಈಗ ಈ ಯಾವ ತಂತಿಯೂ ಸರಿಯಾಗಿ ಕೆಲಸ ಮಾಡುತ್ತಿಲ್ಲ. ಆದ್ದರಿಂದ ನಮ್ಮ ಜೀವನ ಅಪಶ್ರುತಿಯಿಂದ ಕೂಡಿದೆ. ತಂತಿಗಳು ಸರಿ ಯಾಗಿದ್ದು ಒಳ್ಳೆಯ ಸಂಗೀತ ಹೊರಹೊಮ್ಮುತ್ತಿರುವಾಗಲೂ ಕೆಲವೊಮ್ಮೆ ಅಪಶ್ರುತಿ ಉಂಟಾಗಿಬಿಡುತ್ತದೆ. ಅದು ತಪ್ಪು ತಿಳು ವಳಿಕೆ, ಮನಸ್ತಾಪ ಇತ್ಯಾದಿಗಳಿಗೆ ಕಾರಣವಾಗಿಬಿಡುತ್ತದೆ. ಈ ವಾದ್ಯವನ್ನು ನುಡಿಸಲು ಅವನಿಗೇ ಬಿಟ್ಟುಬಿಡಬೇಕು. ಆಗ ಒಳ್ಳೆಯ ಸಂಗೀತ ಹೊರಹೊಮ್ಮುತ್ತದೆ. ನಮ್ಮ ಜೀವನ ಒಂದು ಶ್ರೇಷ್ಠಮಟ್ಟದ ವಾದ್ಯ, ಸಂಗೀತವಾಗುತ್ತದೆ.

ಈ ವಾದ್ಯವೂ ಅವನದೆ, ಇದನ್ನು ನುಡಿಸುತ್ತಿರುವವನೂ ಅವನೇ. ನಮ್ಮ ಅಹಂಕಾರ ಮಧ್ಯದಲ್ಲಿ ತೂರಿಕೊಂಡು ಸಂಗೀತದ ರಾಗವನ್ನು ಕೆಡಿಸುತ್ತದೆ. ನಮ್ಮ ಎಲ್ಲ ಕಾರ್ಯಗಳ, ಸಾಧನೆಗಳ ಹಿಂದೆ ಶರಣಾಗತಿಯ ಭಾವವಿದ್ದರೆ ಕೆಲಸದ ಒತ್ತಡವೂ ಇರುವು ದಿಲ್ಲ; ಜೀವನಗೀತೆಯೂ ಶ್ರುತಿಬದ್ಧವಾಗಿ, ಲಯಬದ್ಧವಾಗಿ ಮುಂದುವರಿಯುತ್ತದೆ. ಉತ್ತಮ ಸಂಗೀತವೇ ಒತ್ತಡಕ್ಕೆ ಅತ್ಯು ತ್ತಮ ಮದ್ದು. ಆ ಸಂಗೀತಕ್ಕಾಗಿ ನಾವು ಬೇರೆಲ್ಲಿಗೂ ಹೋಗ ಬೇಕಾಗಿಲ್ಲ, ಹಣ ಖರ್ಚು ಮಾಡಬೇಕಾಗಿಲ್ಲ. ನಮ್ಮ ಅಹಂಕಾರ ವನ್ನು ಅಳಿಸಿಹಾಕಿದರೆ ಸಾಕು, ಅದರ ಸದ್ದಡಗಿದರೆ ಸಾಕು, ನಮ್ಮೊಳಗಿಂದಲೇ ಮಧುರಗಾನ ಕೇಳಿಬರುತ್ತದೆ. ಅದು ನರ ಮಂಡಲವನ್ನೂ ಮನಸ್ಸನ್ನೂ ಶಾಂತಗೊಳಿಸುತ್ತದೆ.

ಪ್ರಾರಂಭದಲ್ಲಿ ಸಂಗೀತವೇ ಬೇರೆ, ಉಪಾಸನೆಯೇ ಬೇರೆ ಯಾಗಿರುತ್ತದೆ. ಸಾಧಕನು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿ ದಂತೆ ಸಂಗೀತವು ಉಪಾಸನೆಗೆ ಪೂರಕವಾಗುತ್ತದೆ. ಕೊನೆಯಲ್ಲಿ ಸಂಗೀತವೇ ಒಂದು ಉಪಾಸನೆಯಾಗಿ ಅವನ ಜೀವನವೇ ಸಂಗೀ ತೋಪಾಸನೆಯಾಗುತ್ತದೆ. ಹೀಗೆ ಸಂಗೀತ ಮತ್ತು ಉಪಾಸನೆ **'ಸಂಗೀತೋಪಾಸನೆ'**ಯಾಗುತ್ತದೆ. ❈

# ಸಾಮವೇದ ಹಾಗೂ ಭಾರತೀಯ ಸಂಗೀತದ ಉಗಮ

ಡಾ. ಕೆ.ಎಲ್.ಪ್ರಸನ್ನಾಕ್ಷೀ



ಭಾರತೀಯ ಶಾಸ್ತ್ರೀಯ ಸಂಗೀತವು ಸಾಮವೇದದಿಂದಲೇ ಹುಟ್ಟಿಕೊಂಡಿತು ಎಂಬುದು ಸರ್ವವಿದಿತವಾದ ಸಂಗತಿ. ಅನೇಕ ನಿದರ್ಶನಗಳ ಮೂಲಕ ಈ ಲೇಖನವನ್ನು ಸಿದ್ಧಪಡಿಸಿರುವ ಲೇಖಕಿ, ಮೈಸೂರು ಮಹಾರಾಣಿ ಕಾಲೇಜಿನ ನಿವೃತ್ತ ಪ್ರಾಂಶುಪಾಲರು. ಸಂಸ್ಕೃತ ವ್ಯಾಸಂಗ, ಶಾಸ್ತ್ರ ಹಾಗೂ ಆಧ್ಯಾತ್ಮಿಕ ಕೃತಿಗಳನ್ನು ವಿಶೇಷವಾಗಿ ಅಧ್ಯಯನ ಮಾಡಿರುವ ಅವರು ಮೈಸೂರು ಆಶ್ರಮದ ಭಕ್ತರು. ದೀರ್ಘಕಾಲದಿಂದ ಅವರು 'ವಿವೇಕಪ್ರಭ' ಪತ್ರಿಕೆಯಲ್ಲಿ ಹಲವು ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ.

**ಪೀಠಿಕೆ:**

ಅಕಾರಶ್ಚ ಉಕಾರಶ್ಚ ಮಕಾರಶ್ಚ ತೃತೀಯಕಮ್ ।
ಬಿಂದು-ನಾದ-ಸಮಾಯುಕ್ತಂ ಪ್ರಣವಂ ಮೋಕ್ಷಕಾರಣಮ್ ॥
ಅನಾಹತಶ್ಶಬ್ದೋ ನಾದಃ ತಸ್ಯ ಶಬ್ದಸ್ಯ ಯೋ ಧ್ವನಿಃ ।
ಧ್ವನೇರಂತರ್ಗತಂ ಜ್ಯೋತಿಃ ಜ್ಯೋತಿರಂತರ್ಗತಂ ಮನಃ
ತನ್ಮನೋ ವಿಲಯಂ ಯಾತಿ ತದ್ವಿಷ್ಣೋಃ ಪರಮಂ ಪದಮ್ ॥

ಎಲ್ಲದರ ಒಳಗೂ ಹೊರಗೂ, ಎಲ್ಲೆಲ್ಲೂ ತುಂಬಿಕೊಂಡಿರುವ, ಎಳ್ಳುಕೊನೆ ಮುಳ್ಳುಮೊನೆಯಾದಿಯಾಗಿ ಪ್ರತಿಯೊಂದು ಅಣು ಅಣುವಿನಲ್ಲೂ ಚೈತನ್ಯಮಯವಾಗಿ ಬೆಳಗುತ್ತಿರುವ ಪ್ರತ್ಯಕ್ ಜ್ಯೋತಿ ಯಾವುದಿದೆಯೋ, ಅದೇ 'ಪರ'ಗಳಿಗೆಲ್ಲಾ 'ಪರ'ವೂ ಜ್ಯೋತಿಗಳಿಗೆಲ್ಲಾ ಜ್ಯೋತಿಯೂ ಆದ ನಿತ್ಯ ನಿರಂಜನವಾದ ಪರಂಜ್ಯೋತಿ, ಮಹಿಮಾನ್ವಿತ ಮಂಗಳಮಯ ಭೂಮ ಸಚ್ಚಿದಾನಂದ ಜ್ಯೋತಿ. ಭಾರತೀಯನಾದ ಪ್ರತಿಯೊಬ್ಬನ ಆಹಾರ-ವಿಹಾರ, ಆಚಾರ-ವಿಚಾರ, ನೀತಿ-ಧರ್ಮ, ವಿದ್ಯಾ-ವ್ಯವಹಾರ ಮೊದಲಾದ ಸಮಸ್ತವೂ ಈ ಜ್ಯೋತಿ ಕೇಂದ್ರಿತವಾಗಿಯೇ ಇದೆ. ಇಂತಹ ದಿವ್ಯ-ಭವ್ಯ ಜ್ಯೋತಿಯನ್ನು ತಮ್ಮ ಅಂತರಂಗದೊಳಗೆ ಕಂಡುಂಡ ಭಾರತೀಯ ಮಹರ್ಷಿಗಳ ಅನುಭವಾತ್ಮಕ ಅನಾಹತ ನಾದವೇ ಧ್ವನಿಯಾಗಿ, ಅಕಾರ ಉಕಾರ ಮಕಾರ ಬಿಂದು ನಾದಗಳಾಗಿ ಪ್ರಣವವಾಗಿ, ಜೀವಿಗಳೆಲ್ಲರೂ ಒಂದಲ್ಲ ಒಂದು ವಿಧದಿಂದ ಬವಣೆಪಡುತ್ತಿರುವ ಈ ಭವದ ಬಾಧೆಯಿಂದ ಅವರನ್ನು ಪಾರುಮಾಡುವ ಅದ್ವಿತೀಯ ಶಬ್ದ ತರಂಗಗಳಾಗಿ ದಿವಿ-ಭುವಿಗಳನ್ನೆಲ್ಲಾ ವ್ಯಾಪಿಸಿಕೊಂಡಿದೆ. ಯೋಗಿಗಳ ಜ್ಞಾನಿಗಳ ಮುನಿಗಳ ಅಂತರಂಗದಲ್ಲಿ, ಅವ್ಯಕ್ತ 'ನಾದ' ಅನಾಹತ ನಾದವಾಗಿ ವ್ಯಕ್ತಗೊಂಡು ಈ 'ನಾದ'ವೇ ವರ್ಣಾದಿ ಆಹತ ಧ್ವನಿರೂಪ ತಳೆದು 'ವೇದ'ಗಳಾಗಿವೆ.

**ವೇದಗಳು:** ವೇದಗಳು ಋಕ್ ಯಜುಸ್ ಸಾಮ ಅಥರ್ವ ಎಂದು ನಾಲ್ಕು ಬಗೆಯಾಗಿದ್ದರೂ ವೇದವಾಙ್ಮಯ ಅಖಂಡವಾಗಿ ಒಂದೇ. ಮನುಷ್ಯನ ಆಯುಃಪ್ರಮಾಣ, ಅವನ ಮೆದುಳಿನ

ಗ್ರಹಣ ಧಾರಣ ಸ್ಮರಣ ಶಕ್ತಿಗಳು ಕುಂಠಿತವಾಗುತ್ತಾ ಹೋದಂತೆ ಅಖಂಡ ವೇದವಾಙ್ಮಯವನ್ನು ವ್ಯಕ್ತಿಯ ಧ್ಯೇಯ, ಸಾಧನೆ ಮೊದಲಾದ ಆವಶ್ಯಕತೆಗಳಿಗನುಗುಣವಾಗಿ ವಿಭಜಿಸಬೇಕಾಯಿತೆಂದು ಭಾಗವತವೇ ಮೊದಲಾದ ಶಾಸ್ತ್ರಗಳು ತಿಳಿಸುತ್ತವೆ. ಹೀಗಾಗಿ ವೇದವಾಙ್ಮಯದ ಗದ್ಯಾತ್ಮಕ ಭಾಗವು ಯಜುರ್ವೇದವಾಗಿಯೂ, ಪದ್ಯಾತ್ಮಕ ಭಾಗವು ಋಗ್ವೇದವಾಗಿಯೂ ರೂಪ ತಳೆದವು. ಈ ಋಙ್ಮಂತ್ರಗಳನ್ನೇ ಕಂಪನಾದಿಗಳೊಂದಿಗೆ ಹಾಡಿದಾಗ ಅದು **ಸಾಮ** ಎನ್ನಿಸಿಕೊಳ್ಳುತ್ತದೆ.

**ಸಾಮವೇದ: 'ಸಾಮ ಸಂತಾನಃ'** ಎಂದು ತೈತ್ತಿರೀಯ ಉಪನಿಷತ್ತು, 'ಅಕ್ಷರಗಳೂ ಪದಗಳೂ ಪ್ರಕೃತಿ ಪ್ರತ್ಯಯಗಳೂ ಸ್ವರಗಳೂ ನಿಯಮಾನುಸಾರವಾಗಿ ಪರಸ್ಪರ ಸಮ್ಮಿಳಿತಗೊಂಡು ಅಡೆತಡೆಗಳಿಲ್ಲದೆ ನಿರಂತರ ಹರಿಯುವುದು **ಸಾಮ** ' — ಎನ್ನುತ್ತದೆ.

**'ಸಾಮವೇದಸ್ಯ ಗೀತಿಷು ಸಮಾಖ್ಯಾ'** ಎಂದು ಮೀಮಾಂಸಾ ಸೂತ್ರವು *(೨.೧.೩೬)*, 'ಗಾನದಿಂದಲೇ ಸಾಮವೇದಕ್ಕೆ ಆ ಹೆಸರು ಬಂತು' ಎಂದು ತಿಳಿಸುತ್ತದೆ. ಛಾಂದೋಗ್ಯ ಉಪನಿಷತ್ತು *(೧.೩.೪)*, 'ಋಙ್ಮಂತ್ರಗಳೇ ಗಾನಾತ್ಮಕವಾದಾಗ ಸಾಮವಾಗುತ್ತದೆ' ಎನ್ನುತ್ತದೆ. ವಿಕಾರ,[೧] ವಿಶ್ಲೇಷಣ[೨] ಇದೇ ಮೊದಲಾದ ನಿಯಮಗಳಿಗನುಗುಣವಾಗಿ, ಕೃಷ್ಟ ಪ್ರಥಮ... ಮಂದ್ರ ಅತಿಸ್ವರ್ಯ ಎಂಬ ಏಳು ಸ್ವರಗಳೊಡನೆ ಋಙ್ಮಂತ್ರವನ್ನು ಗಾನ ಮಾಡುವುದು **'ಸಾಮ'**. ಹೀಗೆ ಗಾನ ಮಾಡುವಾಗ ಕೃಷ್ಟ ಮೊದಲಾದ ಸ್ವರಗಳನ್ನು ಬೆರಳುಗಳ ತುದಿ, ಮಧ್ಯ , ಬುಡ ಭಾಗಗಳನ್ನು ಸ್ಪರ್ಶಿಸುವುದರ ಮೂಲಕ ಸೂಚಿಸಲಾಗುವುದು. ಈ ಕ್ರಮವೇ ಕಾಲಕ್ರಮದಲ್ಲಿ ಸಂಗೀತದಲ್ಲಿಯೂ ಕಾಲ, ಲಯಗಳನ್ನು ಸೂಚಿಸುವ ತಾಳಗಳಿಗೆ ಆಧಾರವಾಗಿದೆ.

ಛಾಂದೋಗ್ಯ ಉಪನಿಷತ್ತು 'ಸಾಮ'ದ ಉಪಾಸನೆಯ ವಿಭಿನ್ನ ಮಜಲುಗಳನ್ನು ವಿವಿಧ ರೀತಿಯಲ್ಲಿ ವಿವರಿಸುವುದು. ಉದಾಹರಣೆಗೆ: ಪೃಥ್ವಿ–ಸಾ ಅಗ್ನಿ–ಅಮ, ಈ ಋಕ್ಕಿನಲ್ಲಿ ಸಾಮ ಅಧಿಷ್ಠಿತವಾಗಿದೆ. ಆದುದರಿಂದ ಈ ತತ್ತ್ವಾನುಸಂಧಾನದೊಡನೆ ಸಾಮಗಾನ ಮಾಡಬೇಕು. ಹಾಗೆಯೇ ಸಾ–ಅಂತರಿಕ್ಷ (ಋಕ್) ಅಮ–ವಾಯು (ಸಾಮ); ದ್ಯೌಃ–ಸಾ (ಋಕ್) ಆದಿತ್ಯ–ಅಮ (ಸಾಮ); ನಕ್ಷತ್ರ–ಸಾ (ಋಕ್) ಅಮ–ಚಂದ್ರಮಾ (ಸಾಮ); ಇತ್ಯಾದಿಯಾಗಿ ಛಾಂದೋಗ್ಯ ಉಪನಿಷತ್ತಿನ ಒಂದರಿಂದ ಆರು ಖಂಡಗಳು ಪೂರ್ತಿ 'ಸಾ' ಮತ್ತು 'ಅಮ' ಪ್ರತಿನಿಧಿಸುವ ತತ್ತ್ವಗಳನ್ನು ಸಂಧಾನ ಮಾಡುತ್ತಾ ಅವುಗಳಲ್ಲಿ ಅಧಿಷ್ಠಿತವಾದ ಸಾಮಗಾನದಿಂದ ಸಾಧಕನು ಪಡೆಯುವ ವಿವಿಧ ಲಾಭ (ಸಿದ್ಧಿ)ಗಳನ್ನು ವಿಸ್ತಾರವಾಗಿ ವಿವರಿಸುತ್ತವೆ. 'ಸಾ'–ಪರಮಾತ್ಮ 'ಅಮ'–ಜೀವಾತ್ಮ. 'ಅಮ' ಧಾತುವಿಗೆ ಗತಿ, ಚಲನ ಎಂದು ಅರ್ಥವಿರುವುದರಿಂದ ಜೀವಾತ್ಮನು ಶಾಸ್ತ್ರಬದ್ಧ ಕ್ರಮದಲ್ಲಿ ಸಾಮಗಾನ ಮಾಡುತ್ತಾ ಪರಮಾತ್ಮನೆಡೆಗೆ ಸಾಗಲು ಸಹಕರಿಸುವುದು 'ಸಾಮ'. ಹೀಗೆ ಸಾಧಕನು ಸಾಮಗಾನ ಸಾಧನೆ ಮಾಡುತ್ತಾ ಮಾಡುತ್ತಾ ತನ್ನ ಸಾಧನೆಯ ಸಿದ್ಧಿಯ ಕೊನೆಯ ಹಂತದಲ್ಲಿ ತನ್ನನ್ನು ತಾನು ಸಂಪೂರ್ಣವಾಗಿ ಪರತತ್ತ್ವದಲ್ಲಿ ಲೀನಗೊಳಿಸಿಕೊಳ್ಳುವನು. ಆಗ ಸಮಸ್ತ ಭೇದಗಳೂ ಲಯವಾಗಿ ಹೋಗುತ್ತವೆ. ವಿಸ್ತಾರವಾಗಿ ಕಾಣುತ್ತಿರುವ ಈ ಅಖಂಡ ವಿಶ್ವ ಆತನೊಡಗೂಡಿ ಪರತತ್ತ್ವದಲ್ಲಿ ಒಂದಾದ ಅನುಭೂತಿ ಆತನದಾಗುತ್ತದೆ. ತೈತ್ತಿರೀಯ ಉಪನಿಷತ್ತು ತಿಳಿಸುವಂತೆ ಅನ್ನಮಯವು ಪ್ರಾಣಮಯದಲ್ಲಿ, ಪ್ರಾಣಮಯವು ಮನೋಮಯದಲ್ಲಿ ಒಂದರೊಳಗೆ ಒಂದು ಲೀನವಾಗುತ್ತಾ, ಭೇದವಾಗಿ ಗೋಚರಿಸುವ ಎಲ್ಲ ಸ್ತರಗಳನ್ನೂ ದಾಟಿ ಸಾಗುತ್ತ, ಪರಮೋತ್ಕೃಷ್ಟ ಐಕ್ಯಭಾವದಲ್ಲಿ ಸಾಧಕನು ನೆಲೆಗೊಂಡುಬಿಡುತ್ತಾನೆ. ಆಗ ಅವನಿಂದ ಹೊರಹೊಮ್ಮುವ ಉದ್ಗಾರ 'ಹ' 'ಉ'. ಇಷ್ಟು ಬಿಟ್ಟು ಇನ್ನೇನೂ ಉಚ್ಚರಿಸಲಾಗದ ವಾಙ್ಮನೋತೀತವಾದ ನೆಲೆಯಲ್ಲಿ ಆತನಿರುತ್ತಾನೆ. ಆದುದರಿಂದ ಮಂಗಲನಿನಾದ ರೂಪದ ಆಧ್ಯಾತ್ಮಿಕ ಪರಮೋತ್ಕೃಷ್ಟ ಆನಂದವು, ಅತ್ಯುಜ್ಜ್ವಲ ಪ್ರಕಾಶಮಯ ಪರತತ್ತ್ವದ ಸಾಕ್ಷಾತ್ಕಾರದ ಅನಿರ್ವಚನೀಯ ಭಾವವಾಗಿ ಘನೀಭೂತಗೊಂಡು, **'ಸಾಮ'** ರೂಪ ತಳೆದಿದೆ, ಎಂದು ಹೇಳಬಹುದು.

**ಸ್ವರಗಳ ಉತ್ಪತ್ತಿ:** ಇಂತಹ 'ಸಾಮ'ಕ್ಕೆ[೩] ಆಧಾರ ಯಾವುದು? ಎಂದರೆ ಸ್ವರ ಎಂದು ಛಾಂದೋಗ್ಯ ಉತ್ತರಿಸುತ್ತದೆ. ಈ ಸ್ವರಗಳೆಂದರೇನು? ಅವು ಎಲ್ಲಿ ಹೇಗೆ ಉತ್ಪನ್ನವಾಗುತ್ತವೆ? ಎಂಬ ಪ್ರಶ್ನೆ ಏಳುತ್ತದೆ.

ಜೀವಾತ್ಮನು ವಸ್ತುಜ್ಞಾನವನ್ನು ನಿರ್ಣಯ ಮಾಡುವ ಬುದ್ಧಿಯೊಡನೆ ಸೇರಿ ಸಂಕಲ್ಪ–ವಿಕಲ್ಪಗಳನ್ನುಂಟುಮಾಡುವ ಮನಸ್ಸನ್ನು ಪ್ರೇರೇಪಿಸುವುದು. ಮನಸ್ಸು ಶರೀರದಲ್ಲಿ ಜಠರಾಗ್ನಿಯನ್ನು ಎಬ್ಬಿಸುತ್ತದೆ. ಈ ಅಗ್ನಿ ಪ್ರಾಣವಾಯುವನ್ನು ಪ್ರೇರೇಪಿಸುತ್ತದೆ. ಇದು ಹೃದಯಾಕಾಶದಲ್ಲಿ ಸಂಚರಿಸುತ್ತಾ **ಶ್ವಾಸನಾದ, ಘೋಷ** ಮೊದಲಾದ ಹನ್ನೆರಡು ಬಾಹ್ಯ ಹಾಗೂ **ಸ್ಪೃಷ್ಟ, ಈಶತ್‌ಸ್ಪೃಷ್ಟ** ಮೊದಲಾದ ನಾಲ್ಕು ಆಭ್ಯಂತರ ಪ್ರಯತ್ನಗಳಿಂದ, ಎದೆ ಕಂಠ ಮೊದಲಾದ ವಾಗ್ದ್ವಾರಗಳನ್ನು ಮುಟ್ಟುತ್ತದೆ. ಆ ಸ್ಥಾನಗಳ ತೆರೆಯುವಿಕೆ, ಅರೆ–ತೆರೆಯುವಿಕೆಗಳ ಮೂಲಕ ವಿವಿಧ ಧ್ವನಿಗಳು ಹುಟ್ಟಿಕೊಳ್ಳುವುವು.[೪] ಪ್ರಾಣವಾಯುವಿನ, ಅಕ್ಷರಗಳ ಹುಟ್ಟುಸ್ಥಾನಗಳ ಸ್ಪರ್ಶರೂಪ ಸಂಚಾರವು, ಶಬ್ದರೂಪವನ್ನು ತಳೆಯುವುದು.[೫] ಅವೇ ಸ್ವರಗಳು. ಇವು ಸ್ವತಃ ತಮ್ಮಿಂದ ತಾವೇ ಬೆಳಗುತ್ತವೆ ಹಾಗೂ ಜೀವಿಗಳನ್ನು ರಂಜಿಸುತ್ತವೆ.[೬]

---

೧ **ಅಗ್ನೇ**–ಎಂಬ ಪದವನ್ನು **ಓಽಗ್ನಾ** ಇ ಎಂದು ಬದಲಾಯಿಸಿಕೊಳ್ಳವುದು.
೨ ಪದವನ್ನು ಒಡೆಯುವುದು ಉದಾ: **ವೀತಯೇ** ಎಂದಿದ್ದರೆ **ವೋ** ಇ **ತೋ ಯಾಽ೨** ಇ ಎಂದು ವಿಭಜಿಸುವುದು.

೩. **'ಕಾ ಸಾಮ್ನೋ ಗತಿರಿತಿ ಸ್ವರ ಇತಿ.'** *(ಛಾಂ.ಉ. ೧.೮.೪)*
೪ **'ಸ್ವರತಿ ಗಚ್ಛತಿ ಇತಿ ಸ್ವರಃ'**
೫. **'ಸ್ವರಂತಿ ಶಬ್ದಾಯಂತೇ'**
೬. **ಸ್ವಯಂ ರಾಜತೇ ಇತಿ ಸ್ವರಃ**

**ಸ್ವರ** ಎಂದರೆ ಪ್ರಾಣ (ವಾಯು). ಇದು ಒಳಗೆ ಅವ್ಯಕ್ತವಾಗಿದ್ದ ಅನಾಹತನಾದವು ಶಬ್ದರೂಪ ತಳೆಯುವಂತೆ ಮಾಡುವುದು. ಪ್ರಾಣದ ಈ ಧರ್ಮವನ್ನು ಅಕಾರಾದಿ ವರ್ಣಗಳು ಹೊಂದಿರುತ್ತವೆ. ಈ ಕಾರಣದಿಂದಲೇ ಉದಾತ್ತ ಅನುದಾತ್ತಾದಿಗಳೂ ಈ ಧರ್ಮದೊಡಗೂಡಿದ ಅಕಾರಾದಿ ಸ್ವರಗಳ ಸಹಾಯದಿಂದ ಶಬ್ದರೂಪ ತಳೆಯುವ ವ್ಯಂಜನಾದಿಗಳೂ ಸ್ವರಗಳೇ ಆಗುತ್ತವೆ. ಉದಾತ್ತಕ್ಕೆ ಮೂರ್ಧವೂ, ಅನುದಾತ್ತಕ್ಕೆ ಹೃದಯವೂ ಸ್ವರಿತಕ್ಕೆ ಕರ್ಣಮೂಲವೂ, ಪ್ರಚಯಕ್ಕೆ ಕಂಠ, ತಾಲು ಮೊದಲಾದ ವರ್ಣೋತ್ಪತ್ತಿ ಸ್ಥಾನಗಳಿಂದ ಕೂಡಿದ ಸಂಪೂರ್ಣ ಮುಖವೂ ಸ್ಥಾನಗಳಾಗಿರುತ್ತವೆ.

**ಸ್ವರಭೇದಗಳು:** ಶಬ್ದಗಳು ಹುಟ್ಟುವ ಸ್ಥಾನಗಳಾದ ಕಂಠ ಮೊದಲಾದವುಗಳ ಮೇಲ್ಭಾಗವನ್ನು ಪ್ರಾಣವಾಯುವು ಸ್ಪರ್ಶಿಸಿದಾಗ ಹೊರಹೊಮ್ಮುವ ಸ್ವರ **'ಉದಾತ್ತ'**.[೭] ಎತ್ತರದ ಮೇಲು ಧ್ವನಿಯ ಉಚ್ಚಾರ ಇದರದು. ಅಕ್ಷರಗಳ ಹುಟ್ಟುಸ್ಥಾನಗಳ ಶಿಥಿಲತೆಯಿಂದ ಆ ಜಾಗಗಳು ಹೆಚ್ಚು ವಿಸ್ತಾರಗೊಂಡಾಗ ಮೆದುವಾದ ಪ್ರಾಣವಾಯುವಿನ ಸ್ಪರ್ಶದಿಂದ ಉಂಟಾಗುವ ಸ್ವರ **'ಅನುದಾತ್ತ'**.[೮] ಉದಾತ್ತ, ಅನುದಾತ್ತ ಸ್ವರಗಳ ಸಮ್ಮೇಳದಿಂದ ಉಚ್ಚರಿತವಾಗುವ ಸ್ವರ **'ಸ್ವರಿತ'**.[೯] ಸ್ವತಂತ್ರ ಸ್ವರಿತದ ನಂತರ ಬರುವ ಉದಾತ್ತ ಅಥವಾ ಸ್ವತಂತ್ರ ಸ್ವರಿತದ ಪೂರ್ವ ಸ್ವರಿತದಲ್ಲಿ ಉಚ್ಚರಿತವಾಗುವ ಅನುದಾತ್ತವು ಕಂಪಿತವಾಗಿ ಉಚ್ಚರಿತವಾಗುತ್ತದೆ. ಇದನ್ನು **'ಕಂಪ'** ಸ್ವರ ಎನ್ನುತ್ತಾರೆ. ಉದಾತ್ತ ಅನುದಾತ್ತಗಳ ಮಧ್ಯದ ಒಂದರಿಂದ ಮತ್ತೊಂದರೆಡೆಗೆ ಸಾಗುವ ಸಾಧಾರ ಶ್ರುತಿ **'ಸ್ವಾರ'** ಎನ್ನಿಸಿಕೊಳ್ಳುತ್ತದೆ. ಉದಾತ್ತಕ್ಕೆ ಸ್ವರವು ಪರವಾದಾಗ ಸ್ವರಿತದ ಮುಂದೆ ಸ್ವರಿತವೇ ಬಂದಾಗ ಅಲ್ಲಿ ವಾಯುವಿನ ಸ್ಪರ್ಶ ಅತ್ಯಂತ ಶಿಥಿಲವಾಗಿರುತ್ತದೆ. ಅದನ್ನು **'ಪ್ರಚಯ'** ಎನ್ನುತ್ತಾರೆ. ಮುಂದಿರುವ ಪ್ರಚಯಸ್ವರದ ಕಾರಣ ಸ್ವರಿತವು ನಾಶವಾದರೆ ಅದನ್ನು **'ನಿಪಾತ'** ಎನ್ನುತ್ತಾರೆ.

ಅನಾಹತ ನಾದದಿಂದ ವ್ಯಕ್ತಗೊಂಡ ಈ ಸ್ವರಗಳು ಪ್ರಪಂಚಾತ್ಮಕವಾಗಿ ಉದಾತ್ತಾದಿ ತರಂಗರೂಪದಲ್ಲಿ ವಿಸ್ತಾರವಾಗುತ್ತಾ ಸಾಗುತ್ತವೆ. ಉದಾತ್ತದಲ್ಲಿ ನಿಷಾದ-ಗಾಂಧಾರಗಳೂ, ಅನುದಾತ್ತದಲ್ಲಿ ಋಷಭ-ಧೈವತಗಳೂ ಸ್ವರಿತದಲ್ಲಿ ಉಳಿದ ಸ್ವರಗಳೂ ಲೀನವಾಗುತ್ತವೆ ಎಂದು **ಯಾಜ್ಞ ಶಿಕ್ಷಾ** *(೧-೭)* ತಿಳಿಸುತ್ತದೆ. ಆದುದರಿಂದ ಉದಾತ್ತಾದಿಸ್ವರಗಳ ಹುಟ್ಟುಸ್ಥಾನಗಳೇ ನಿಷಾದಾದಿ ಸ್ವರಗಳ ಹುಟ್ಟುಸ್ಥಾನವೂ ಆಗಿರುತ್ತದೆ. ಹಾಗಾಗಿ ಕಂಠದಿಂದ ಷಡ್ಜವೂ ಶಿರಸ್ಸಿನಿಂದ (ಮೂರ್ಧ) ಋಷಭವೂ ಅನುನಾಸಿಕದಿಂದ ಗಾಂಧಾರವೂ, ಎದೆಯಿಂದ ಮಧ್ಯಮವೂ, ಉರ, ಶಿರ, ಕಂಠಗಳಿಂದ ಪಂಚಮವೂ, ಲಲಾಟದಿಂದ ಧೈವತವೂ ಸರ್ವಸಂಧಿಯಿಂದ ನಿಷಾಧವೂ ವ್ಯಕ್ತಗೊಳ್ಳುತ್ತವೆ — ಎಂದು **ನಾರದೀಯ ಶಿಕ್ಷಾ** *(೧.೫.೬-೭)* ತಿಳಿಸುತ್ತದೆ.

**ಸ್ವರಗುಣಗಳು:** ಸ್ವರಗಳ ವಿವಿಧ ಸಮ್ಮೇಳದಿಂದಾಗುವ ಉತ್ಕೃಷ್ಟ ಭಾವಾಭಿವ್ಯಂಜಕ ಪರತತ್ತ್ವದಲ್ಲಿನ ರಕ್ತಿ (ಪ್ರೀತಿ, ಅಂಟು) **'ರಕ್ತಂ'**. ಸ್ವರ ಶ್ರುತಿ ಛಂದ ಪಾದಾಕ್ಷರಗಳ ಸಂಯೋಗದಿಂದುಂಟಾಗುವ ಗುಣ **'ಪೂರ್ಣ'**. ಕಂಠದಲ್ಲಿರುವ ಸ್ವರವನ್ನು ಕೆಳಗೆ ಹೃದಯದಲ್ಲಿ ಸ್ಥಾಪಿಸಿ ಎತ್ತರಿಸುತ್ತಾ ಶಿರಸ್ಥಾನಕ್ಕೆ ಒಯ್ಯುವುದು **'ಅಲಂಕೃತ'**. ಗದ್ಗದತೆ ಇಲ್ಲದೆ ಶಂಕಾರಹಿತವಾದ ಶಾಂತವಾದ ಸ್ವರಗಳ ಉಚ್ಚಾರ **'ಪ್ರಸನ್ನ'**. ಪದ-ಪದಾರ್ಥ, ಪ್ರಕೃತಿ-ಪ್ರತ್ಯಯ, ಆಗಮ-ಲೋಪ, ಧಾತು ನಿಪಾತ ಮೊದಲಾದವುಗಳ ಸುಸ್ಪಷ್ಟ ಅಭಿವ್ಯಕ್ತಿ **'ವ್ಯಕ್ತ'**. ಸ್ವರಗಳನ್ನು ತಾರಸ್ವರದಲ್ಲಿ ಉಚ್ಚರಿಸುವುದು **'ವಿಕೃಷ್ಟ'**. ನಿಧಾನ ವೇಗ ಮೊದಲಾದ ದೋಷಗಳಿಲ್ಲದ ಹ್ರಸ್ವ ದೀರ್ಘ ಪ್ಲುತ ಸ್ವರಗಳ ಕಾಲನಿಯಮಾನುಗುಣ ಉಚ್ಚಾರಣೆ **'ಶ್ಲಕ್ಷ್ಣ'**. ಸ್ವರಗಳ ಏರಿಳಿತಗಳು ವ್ಯವಸ್ಥಿತವಾದ ಸ್ಥಾನದಲ್ಲಿ ಸಮಾವೇಶವಾಗಿರುವುದು **'ಸಮ'**. ಪದ ವರ್ಣ ಸ್ವರ ಆವೃತ್ತ ಅಕ್ಷರಗಳನ್ನು ಕೋಮಲವಾಗಿ ಮೃದುವಾಗಿ ಉಚ್ಚರಿಸುವುದು **'ಸುಕುಮಾರ'**. ಸ್ವರಗಳ ಸಹಜ ಲಲಿತತೆಗನುಗುಣವಾದ ಈ ಗುಣಗಳು ಸ್ವರಗಳಲ್ಲಿ ರಂಜಕತೆಯನ್ನುಂಟುಮಾಡುವುವು.

ಮೇಲೆ ತಿಳಿಸಿರುವ ಉದಾತ್ತಾದಿ ಸಪ್ತವಿಧ ಸ್ವರ ಉಚ್ಚಾರಕ್ರಮಗಳನ್ನು 'ರಕ್ತಾ'ದಿ ಹತ್ತು ಗೇಯಗುಣಗಳೊಡನೆ ಯೋಜಿಸಿ ಗಾನಮಾಡುವುದನ್ನು ಸಾಧಕನು ವಿಶಿಷ್ಟಸಾಧನೆಯಿಂದ ಸಾಧಿಸಿಕೊಳ್ಳಬೇಕು. ಸಾಮಗಾನದಲ್ಲಿ ಈ ಸ್ವರಗಳನ್ನು ಕೃಷ್ಟ ಪ್ರಥಮಾ ದ್ವಿತೀಯಾ ತೃತೀಯಾ, ಚತುರ್ಥೀ ಮಂದ್ರ ಅತಿಸ್ವಾರ್ಯ ಎಂದು ಕರೆಯಲಾಗಿದೆ. ಇವು ಕ್ರಮವಾಗಿ ಪಂಚಮ ಮಧ್ಯಮ ಗಾಂಧಾರ ಋಷಭ ಷಡ್ಜ ನಿಷಾದ ಧೈವತ ಸ್ವರಗಳಿಗೆ ಸಂವಾದಿಯಾಗಿದೆ. ಮತ್ತು ಕ್ರಮವಾಗಿ ಇವು ಶೃಂಗಾರ, ಹಾಸ್ಯ, ಕರುಣ ಮತ್ತು ಶಾಂತ, ವೀರ, ರೌದ್ರ ಹಾಗೂ ಅದ್ಭುತ, ಬೀಭತ್ಸ ರಸಗಳ ದ್ಯೋತಕಗಳೂ ಆಗಿವೆ.

**ಸಾಮವೇದದ ಸ್ವರ ಹಾಗೂ ಸಂಗೀತದ ಸ್ವರಗಳ ಸಂಬಂಧ:** ಸಾಮವೇದದ ಸ್ವರಗಳು ಮತ್ತು ಅದಕ್ಕೆ ಸಂವಾದಿಯಾದ **ಗಾಂಧರ್ವವೇದ** ಎನ್ನಿಸಿಕೊಂಡಿರುವ ಭಾರತೀಯ ಸಂಗೀತದ ಷಡ್ಜಾದಿ ಸ್ವರಗಳ ನಡುವೆ ಇರುವ ಸಂಬಂಧವನ್ನು **ನಾರದೀಯ ಶಿಕ್ಷಾ** *(೧.೫, ೧-೨)* ಹೀಗೆ ತಿಳಿಸುತ್ತದೆ: ಸಾಮವೇದದ ಸ್ವರಿತ ಉದಾತ್ತ ಪ್ರಧಾನವಾಗಿದ್ದಾಗ – ಪಂಚಮ, ಕೋಗಿಲೆಯ ಕೂಗಿಗೆ ಸಮಾನವಾದುದು. ಅದೇ ಸ್ವರಿತ ಅನುದಾತ್ತ ಸ್ವರವನ್ನು ಪ್ರಧಾನವಾಗಿ ಹೊಂದಿದ್ದಾಗ ಮಧ್ಯಮ, ಕ್ರೌಂಚ ಪಕ್ಷಿಯ ಕ್ರೇಂಕಾರದಂತೆ ಸ್ವರವಾಗುವುದು. ಕೇವಲ ಉದಾತ್ತ ಸ್ವರವು ಗಾಂಧಾರ – ಆಡಿನ ಧ್ವನಿಯ ಹೋಲಿಕೆಯುಳ್ಳದ್ದು. ಅನುದಾತ್ತವು– ಋಷಭ (ರಿ), ವೃಷಭದ ಕೂಗಿಗೆ ಸಮಾನವಾದುದು. ಈ ಅನುದಾತ್ತವು ಅನುದಾತ್ತತರ (ಪೂರ್ಣ ತಗ್ಗಿನ ಶ್ರುತಿ)ವಾದಾಗ ಷಡ್ಜ – ನವಿಲಿನ

---

೭. ಉಚ್ಚೈರುದಾತ್ತಃ।
೮. ನೀಚೈರನುದಾತ್ತಃ।
೯. ಸಮಾಹಾರಃ ಸ್ವರಿತಃ।

ಧ್ವನಿಯನ್ನೂ, ಉದಾತ್ತ ಸ್ವರವು ಉದಾತ್ತತರವಾದಾಗ ಧೈವತ –ಕುದುರೆಯ ಧ್ವನಿಯನ್ನೂ, ಸ್ವರಿತವು ಸ್ವರಿತತರವಾಗಿ ಉದಾತ್ತ ಶ್ರುತಿಯ ಕಂಪವನ್ನು ಹೊಂದಿದ್ದಾಗ ನಿಷಾಧ – ಆನೆಯ ಘೀಳಿ ಡುವಿಕೆಯ ಧ್ವನಿಯನ್ನೂ ಹೋಲುವುವು.

ಸಾಮವೇದದ ಸ್ವರಗಳೂ ಸಂಗೀತದ ಸ್ವರಗಳೂ ಪಶುಪಕ್ಷಿಗಳ ಧ್ವನಿಗೆ ಸಂವಾದಿಯಾಗಿರುವುದನ್ನು **ಋಗ್ವೇದ**ದ *(೨.೪೩. ೧–೩)* ಮಂತ್ರಗಳು ದೃಢಪಡಿಸುತ್ತವೆ. ಸಾಮಗಾಯಕನ ಗಾನವನ್ನು ವಿವಿಧ ಹಕ್ಕಿಗಳು ಅನುಕರಿಸುವುವು. ೧) ಸಾಮಗಾಯಕನ ಗಾಯತ್ರಿಯಂತೆ ಕಪಿಂಜಲ ಹಕ್ಕಿಯು ಉದಾತ್ತ ಅನುದಾತ್ತ (ಋಷಭ ಗಾಂಧಾರ) ಸ್ವರಗಳನ್ನು ಉಲಿಯುತ್ತಿದೆ. ೨) ಶಾಕುಂತಿಕ ಪಕ್ಷಿಯು ಉದ್ಗಾತೃವು ಸಾಮವನ್ನು ಗಾನಮಾಡುವಂತೆ ಮಾಡು ತ್ತಿದೆ. ೩) 'ಓ ಪಕ್ಷಿಯೆ ನಿನ್ನ ಕೂಗು ಉದಾತ್ತ ಪ್ರಧಾನ ಸ್ವರಿತದ ಪಂಚಮಸ್ವರದಂತೆ ಮಂಗಳಮಯವಾಗಲಿ' — ಇತ್ಯಾದಿ.

**ಭಾರತೀಯ ಸಂಗೀತ:** ಈ ಎಲ್ಲಾ ಅಂಶಗಳನ್ನೂ ಗಮನಿಸಿ ದಾಗ, **ಗಾಂಧರ್ವವೇದ** ಎಂದು ಪ್ರಸಿದ್ಧವಾಗಿರುವ, ಶ್ರುತಿಯನ್ನು ತಾಯಿ, ಲಯವನ್ನು ತಂದೆ **(ಶ್ರುತಿರ್ಮಾತಾ ಲಯಃ ಪಿತಾ)** ಯಾಗಿ ಹೊಂದಿರುವ, ಭಾರತೀಯ ಸಂಗೀತಕ್ಕೆ ಸಾಮವೇದವೇ ಮೂಲಸ್ರೋತವಾಗಿದೆ ಎಂಬಂಶ ಖಚಿತವಾಗುತ್ತದೆ.

**ನಾಕಾರಂ ಪ್ರಾಣನಾಮಾನಂ ದಕಾರಮನಲಂ ವಿದುಃ ।**
**ಜಾತಃ ಪ್ರಾಣಾಗ್ನಿ ಸಂಯೋಗಾತ್ತೇನ ನಾದೋಽಭಿಧೀಯತೇ ॥**

—ಎಂಬಂತೆ ಪ್ರಾಣ ಮತ್ತು ಅಗ್ನಿಗಳ ಸಂಯೋಗವೇ ನಾದದ ಉತ್ಪತ್ತಿಗೆ ಕಾರಣ. ಈ ನಾದವೇ ಗೀತ, ಸ್ವರ, ರಾಗ, ನೃತ್ಯಗಳಿಗೆ ಮೂಲ. ಈ ನಾದವಿಲ್ಲದಿದ್ದರೆ [೧೧] ಸಂಗೀತ ಎನ್ನಿಸಿಕೊಳ್ಳುವ ಗೀತ ವಾದ್ಯ ನೃತ್ಯಗಳಿಗೆ ಅಸ್ತಿತ್ವವೇ ಇಲ್ಲ ಎಂದು **'ಸಂಗೀತ ರತ್ನಾಕರ'** ದಲ್ಲಿ ಹೇಳಲಾಗಿದೆ. ಈ ನಾದವೂ ವೇದದ ಸ್ವರಗಳಂತೆ; ಆತ್ಮದಿಂದ ಪ್ರೇರಿತವಾದ ಮನಸ್ಸು ನಾಭಿಯಲ್ಲಿರುವ ಅಗ್ನಿಯನ್ನು ಪ್ರಜ್ವಲಿಸು ವಂತೆ ಮಾಡಿ, ಅದರಿಂದ ಪ್ರೇರಿತವಾದ ವಾಯು ನಾಭಿ, ಹೃದಯ, ಕಂಠ, ಮೂರ್ಧಸ್ಥಾನಗಳನ್ನು ಮುಟ್ಟಿ ಸಾಗುವಾಗ ಹುಟ್ಟುತ್ತದೆ. ಇದು ಆಹತ, ಅನಾಹತ ಎಂದು ಎರಡು ವಿಧ ವಾಗಿದೆ. ದೀರ್ಘವಾದ ಘಂಟಾನಾದದಂತೆ ಅನಾಹತ ನಾದವು ಜ್ಞಾನಿಗಳ ಅಂತರಂಗದೊಳಗೆ ತೈಲಧಾರೆಯಂತೆ ನಿರಂತರವಾಗಿ ಸಾಗುತ್ತಿರುತ್ತದೆ. ಅದೇ ಪ್ರಣವನಾದ, ನಿತ್ಯನಿರ್ವಿಕಲ್ಪ ನಿರಂಜನ ಜ್ಯೋತಿರೂಪ ಪರತತ್ತ್ವದ ಪ್ರತೀಕ. ಈ ನಾದವೇ ಕಂಠ ಆದಿ ವರ್ಣಗಳ ಹುಟ್ಟುಸ್ಥಾನಗಳನ್ನು ಬಡಿದಾಗ (ಆಹತ) ಷಡ್ಜ ಋಷ ಭಾದಿ ಸ್ವರಗಳಾಗಿ ಉತ್ಪನ್ನವಾಗುತ್ತದೆ.

**ಷಡ್ಜಾದಿ ಸ್ವರಗಳು:** ಉರ, ಕಂಠ, ನಾಸ, ತಾಲು, ಜಿಹ್ವೆ, ದಂತ — ಈ ಆರೂ ಅಂಗಗಳ ಸಂಗದಿಂದ ಹುಟ್ಟುವುದರಿಂದ ಇದಕ್ಕೆ ಷಟ್+ಜ, 'ಷಡ್ಜ' ಎಂದು ಹೆಸರು. 'ಋಷಭ'ವು ನಾಭಿಮೂಲ ದಿಂದ ಮೇಲ್ಮುಖವಾಗಿ ಸಂಚರಿಸತೊಡಗಿದ ವಾಯುವು ಕಂಠ, ನೆತ್ತಿಗಳಿಗೆ ಬಡಿದಾಗ ಹುಟ್ಟುತ್ತದೆ. ಗಾಂಧಾರ ಮಧ್ಯಮಾದಿ ಸ್ವರ ಗಳು ಮೇಲೆ ತಿಳಿಸಿರುವ ಕ್ರಮದಲ್ಲಿ ಜನ್ಮ ತಳೆಯುತ್ತವೆ ಎಂದು ಸಂಗೀತ ಶಾಸ್ತ್ರಗ್ರಂಥಗಳು ತಿಳಿಸುತ್ತವೆ.

ಅನೇಕ ಶ್ರುತಿಗಳೊಡಗೂಡಿದ ಈ ಸಪ್ತಸ್ವರಗಳು ಬೇರೆ ಬೇರೆ ಬಗೆಗಳಲ್ಲಿ ಬೆರೆತು, ಮನಸ್ಸನ್ನು ರಂಜಿಸುವ ಅನೇಕ ವಿಧ ರಾಗ ಗಳಾಗುತ್ತವೆ. ಇವು ರಾಗದ ರೂಪ ತಳೆಯಲು ಗ್ರಹ, ಅಂಶ, ಮಂದ್ರ, ತಾರ, ನ್ಯಾಸ, ಅಪನ್ಯಾಸ, ಸನ್ಯಾಸ, ವಿನ್ಯಾಸ, ಬಹು, ಅಲ್ಪ ಎಂಬ ಹತ್ತು ಅಂಶಗಳು ಸಹಕಾರಿಯಾಗಿರುತ್ತವೆ ಎಂದು ಭರತ, ನಾರದ, ವೇಂಕಟಮುಖಿ (ಚತುರ್ದಂಡಿ ಪ್ರಕಾಶಿಕಾ) ಮೊದಲಾದ ಸಂಗೀತ ಶಾಸ್ತ್ರಜ್ಞರು ತಿಳಿಸಿದ್ದಾರೆ. ರಾಗದ ಮೊದಲ ಸ್ವರ (ಸ) **ಗ್ರಹ**, ರಾಗ ರಂಜಕವಾಗಲು ಸಹಕರಿಸುವ ಜೀವಸ್ವರ **ಅಂಶ**, ತಗ್ಗುಸ್ವರ **ಮಂದ್ರ**, ಉಚ್ಚಸ್ವರ **ತಾರ**, ರಾಗ ಮುಕ್ತಾಯ ಗೊಳಿಸುವ ಸ್ವರ **ನ್ಯಾಸ**, ರಾಗ ಹಾಡುವಾಗ ಮಧ್ಯದಲ್ಲಿ ನಿಲ್ಲಿಸುವ ಸ್ವರ **ಅಪನ್ಯಾಸ** (ಮ ಪ ಧ ಇತ್ಯಾದಿ), ರಾಗ ಸಂಬದ್ಧ ಸ್ವರಗಳ ಖಂಡ **ವಿನ್ಯಾಸ, ಸನ್ಯಾಸ**, ರಾಗದಲ್ಲಿ ಹೆಚ್ಚು ಉಪಯೋಗಿಸುವ ಸ್ವರ **ಬಹು**, ಉಪಯೋಗಿಸದೆ ಇದ್ದರೆ **ಅಲ್ಪ**. ಈ ಸ್ವರಗಳು ಮತ್ತೆ ವಾದಿ, ಸಂವಾದಿ, ಅನುವಾದಿ, ವಿವಾದಿ ಎಂದು ನಾಲ್ಕು ಬಗೆ. ವಾದಿಸ್ವರವು ರಾಜನಂತೆ, ಆ ರಾಗದ ಸಂಚಾರದಲ್ಲಿ ಮತ್ತೆ ಮತ್ತೆ ಬರುವ ಸ್ವರ. ಸಂವಾದಿ ಮಂತ್ರಿಯಂತೆ ವಾದಿಗೆ ಸಹಾಯಕ. ವಿವಾದಿ ಕಿವಿಗೆ ಇಂಪು ಕೊಡದ ಶುದ್ಧಗಾಂಧಾರಾದಿ. ಅನುವಾದಿ ವಾದಿಗೆ ಸಹಾಯಕ ಅಥವಾ ಸೇವಕನಂತೆ ಇರುವುದು.

ಈ ಎಲ್ಲಾ ವಿಚಾರಗಳನ್ನು ಸೂಕ್ಷ್ಮವಾಗಿ ಮನನ ಮಾಡಿದಾಗ ಸಾಮವೇದವನ್ನು ಗಾನಮಾಡುವಲ್ಲಿ ಅನುಸರಿಸುವ ತಾಂತ್ರಿಕ ವಿಧಾನ ಸಂಗೀತದಲ್ಲೂ ಇದೆ ಎಂದು ದೃಢಪಡುತ್ತದೆ.

**ಸಂಗೀತ ಪ್ರಭೇದ :** ಸಂಗೀತವು **ಮಾರ್ಗೀ, ದೇಶೀ** ಎಂದು ಎರಡು ವಿಧವಾಗಿದೆ. ಯಾವುದನ್ನು ಬ್ರಹ್ಮನು ಉಪದೇಶಿಸಿ ದನೋ, ಭರತಮುನಿ ಶಿವನ ಸನ್ನಿಧಿಯಲ್ಲಿ ಯಾವ ಗಾನಕಲೆ ಯನ್ನು ಪ್ರಯೋಗಿಸಿದನೋ ಅದು **ಮಾರ್ಗೀ** ಇದನ್ನು ಆರ್ಚಿಕ



---

೧೧ **ಗೀತಂ ವಾದ್ಯಂ ಚ ನೃತ್ಯಂ ಚ ತ್ರಯಂ ಸಂಗೀತಮುಚ್ಯತೇ ।**

(ಋಗ್ವೇದೋಕ್ತ ಮಂತ್ರಗಳ ಗಾಯಕ) ಗಾಥಿಸ್ಥ (ಸ್ತುತಿರೂಪ ಮಂತ್ರಗಳ ಗಾಯಕ) ಹಾಗೂ ಸಾಮಗಾಯಕರು ಹಾಡುತ್ತಾರೆ. ಇದು ಮುಕ್ತಿದಾಯಕವಾದುದು. ಆಯಾ ಸ್ಥಳೀಯ ರೀತಿಗನು ಗುಣವಾಗಿ ದೇಶದೇಶಗಳಲ್ಲಿ ಲೋಕರಂಜನೆಗಾಗಿ ಗಾನ ಮಾಡುವುದು **ದೇಶೀ** ಎಂದು 'ಸಂಗೀತ ಸುಧಾಕರ'ಕಾರರು ತಿಳಿಸುತ್ತಾರೆ. ಈ ಪ್ರಭೇದವೂ **ವೇದ ಮತ್ತು ಸಂಗೀತಗಳ ಸಂಬಂಧವನ್ನು** ಸುಸ್ಪಷ್ಟಪಡಿಸುತ್ತದೆ.

ವೇದಗಳಲ್ಲಿ ಸಂಗೀತವಾದ್ಯಪ್ರಭೇದಗಳಾದ ತತ, ಸುಷಿರ, ಆನದ್ಧ ವಾದ್ಯಗಳ ಉಲ್ಲೇಖಗಳಿವೆ:[೧೧] ವೀಣೆ, ವೀಣೆಯಂತಹ 'ತೂನಭ' ಎಂಬ ವಾದ್ಯ, ಕೊಳಲು, ಕೊಳಲಿನಂತಹ 'ಕರ್ಕರೀ' ಎಂಬ ಗಾಳಿ ವಾದ್ಯ, ಗರ್ಗರ, ದುಂದುಭಿ, ರಣಭೇರಿ, ಹಿಂಗಾ ಮೊದಲಾದ ವಾದ್ಯಗಳ ಉಲ್ಲೇಖ, ಅವುಗಳನ್ನು ನುಡಿಸುವವರ ಉಲ್ಲೇಖ ಇಲ್ಲಿ ಕಂಡುಬರುತ್ತದೆ.

**ಉಪಸಂಹಾರ:** ಶಾಸ್ತ್ರಗಳು ಸಮರ್ಥಿಸುವ ಯಾವುದಾದರೂ ವ್ಯಕ್ತಿ, ವಸ್ತು, ಪದಾರ್ಥಗಳನ್ನು ಆಸರೆಯಾಗಿಟ್ಟುಕೊಂಡು, ಅವುಗಳಲ್ಲಿ ಮನಸ್ಸನ್ನು ಅಲುಗಾಡದಂತೆ ಅಲ್ಲೇ ಸ್ಥಿರವಾಗಿ ನೆಲೆ ನಿಲ್ಲಿಸುವುದು ಉಪಾಸನೆ. ಇಂತಹ ಉಪಾಸನೆ ಅಂತರಂಗ ಬಹಿರಂಗಗಳನ್ನು ಶುದ್ಧಗೊಳಿಸಿ ಜ್ಞಾನ-ಭಕ್ತಿಗಳು ಉಂಟಾಗಲು, ಪರತತ್ತ್ವ ಪ್ರಕಟಗೊಳ್ಳಲು ಉಪಕರಿಸುತ್ತವೆ. ಈ ಹಿನ್ನೆಲೆಯಲ್ಲಿ ಸಾಮಗಾನವು ಜ್ಞಾನರೂಪದ ಗಾನೋಪಾಸನೆ. ಸಂಗೀತ, ಭಕ್ತಿ ರೂಪದ ಗಾನೋಪಾಸನೆ. **'ಮೋಕ್ಷಮುಗಲದಾ'**, **'ಸಂಗೀತ ಜ್ಞಾನಮು'**, **'ರಾಗಸುಧಾರಸ'** ಮೊದಲಾದ ಕೃತಿಗಳಲ್ಲಿ ಶ್ರೀ ತ್ಯಾಗರಾಜರು ಇದನ್ನು ಸ್ಪಷ್ಟಪಡಿಸಿದ್ದಾರೆ. ಶ್ರೀ ಮಧುಸೂದನ ಸರಸ್ವತಿಗಳು ತಮ್ಮ **'ಅದ್ವೈತಸಿದ್ಧಿ'** ಗ್ರಂಥದಲ್ಲಿ, ''ಭಗವಾನ್ ಭರತರು ರಚಿಸಿರುವ ಗಾಂಧರ್ವವೇದವು ಗೀತ, ವಾದ್ಯಾದಿ ಅನೇಕ ವಿಧ ಉಪಾಸನೆಯ ರೂಪವಾಗಿದೆ. ಇದರ ಮೂಲಕ ಇಷ್ಟದೇವತೆಯನ್ನು ಆರಾಧಿಸಿ ತೃಪ್ತಿಪಡಿಸಿ, ತನ್ಮೂಲಕ ನಿರ್ವಿಕಲ್ಪ ಸಮಾಧಿ ಮೊದಲಾದ ಸ್ಥಿತಿಯನ್ನು ಪಡೆಯುವುದೇ ಗಾಂಧರ್ವ ವೇದದ ಪ್ರಯೋಜನವಾಗಿದೆ.''[೧೩] ಎಂದಿದ್ದಾರೆ.

ಛಾಂದೋಗ್ಯ ಉಪನಿಷತ್ತು ಸಾಮದ ಉಪಾಸನೆಯನ್ನು ವಿವರಿಸುತ್ತಾ ಸಾಮಗಾನದಲ್ಲಿ ಪ್ರಯೋಗಿಸುವ, ಶಬ್ದವ್ಯುತ್ಪತ್ತಿ ಅರ್ಥವಿವರಣೆ ಇಲ್ಲದ **ಹಾಉ, ಇ, ಹಾಇ, ಊ, ಔಹೋಯಿ** ಮೊದಲಾದ ಹದಿಮೂರು ಸ್ತೋಭಗಳ ಸ್ವರೂಪವನ್ನು ತಿಳಿಸುತ್ತದೆ. ಈ ಸ್ತೋಭಗಳನ್ನು **ಫುಲ್ಲ** ಅಥವಾ **ಪುಷ್ಪ** ಎಂದೂ ಕರೆಯುವರು. ಕೊಂಬೆಯಲ್ಲಿ ಹೂವು ಅರಳುವಂತೆ ವೇದದ ಪದಗಳು ಇವುಗಳ ಜೋಡಣೆಯಿಂದ ವಿಕಾಸಗೊಂಡು ರಸ-ಭಾವಪೂರ್ಣಗಳಾಗುತ್ತವೆ. ಸಂಗೀತದಲ್ಲಿ ಅರ್ಥವಿಲ್ಲದ ತ, ನ, ರಿ ಇತ್ಯಾದಿ ಅಕ್ಷರಗಳನ್ನು ಸೇರಿಸಿ ರಾಗ ವಿಸ್ತರಿಸುವುದು ಈ ಹಿನ್ನೆಲೆಯಲ್ಲೇ. ಸಾಮಗಾನ ಮಾಡುವವನು ಸ್ತೋಭಗಳ ಅರ್ಥಾನುಸಂಧಾನದೊಡನೆ ಉಪಾಸನೆ ಮಾಡಿ ಮುಕ್ತಾತ್ಮನಾಗಬೇಕೆಂದೂ, ಪರತತ್ತ್ವದೊಡನೆ ಲೀನನಾಗಬೇಕೆಂದೂ ತಿಳಿಸುತ್ತದೆ. ಉದಾಹರಣೆಗೆ: **ಹಾ ಉ** ಎಂದರೆ ಈ ಲೋಕ. ಮಡಕೆಯೊಂದನ್ನು ಎಲ್ಲಾದರೂ, ಯಾವಾಗಲಾದರೂ, ಹೇಗಾಗಲಿ (ಒಂದು ತುಂಡು ಎಂಬಂತೆ) ಕಂಡರೂ ಅದರ ಮೂಲವಾದ ಮಣ್ಣು ದರ್ಶಕನ ಅನುಭವಕ್ಕೆ ಹೇಗೆ ಬರುವುದೋ ಹಾಗೆ **ಹಾ, ಉ** ಎಂಬ ಸ್ತೋಭದ ಗಾನವನ್ನು ಮಾಡುತ್ತಾ ಗಾಯಕನು ಈ ಲೋಕ, ಈ ಲೋಕಗಳ ಸಮಸ್ತ ಚರಾಚರಾದಿ ಮತ್ತು ಆ ಎಲ್ಲದಕ್ಕೂ ಕಾರಣನಾದ ಆಧಾರನಾದ ಪರಬ್ರಹ್ಮನನ್ನು ಭಾವಿಸಬೇಕು ಎನ್ನುತ್ತದೆ.

ಹೀಗೆ ಪರತತ್ತ್ವ ಮೂಲದಿಂದ ಹೊರಟು ಪರತತ್ತ್ವದ ಮೂಲಕೇಂದ್ರದಲ್ಲೇ ಲೀನವಾಗುವ ಉಪಾಸನಾತ್ಮಕ ಜ್ಞಾನಭಕ್ತಿಪೂರ್ಣ ಸಾಮಗಾನವು ಯಾವ ಸ್ವರ, ಲಯ, ಕಂಪಾದಿ ಗೀತ ಸಾಧನಗಳೊಂದಿಗೆ ವಿಕಾಸಗೊಂಡಿದೆಯೋ, ಅದೇ ನಾದ, ಸ್ವರ, ಲಯಗಳನ್ನು ಆಧಾರವಾಗಿಟ್ಟುಕೊಂಡು ಭಾರತೀಯ ಸಂಗೀತ ಕಲೆಯೂ ವ್ಯಾಪಕವಾಗಿ ವಿಕಾಸಗೊಂಡಿದೆ. ರಂಜನೀಯ ಭಾವ, ರಾಗ, ತಾಳ, ಮೇಳಗಳಿಂದ ಭಕ್ತಿ ಚೋದಕವಾಗಿ ಭಗವತ್ಸಾನ್ನಿಧ್ಯ ಸಾಯುಜ್ಯದಾಯಕವಾಗಿದೆ. ❋

### ವೀಣಾ ಬಾಬಾ - ಪರ್ವತೀಕರ್ ಮಹಾರಾಜ್

'ವೀಣಾ ಬಾಬಾ' ಎಂದೇ ಪ್ರಸಿದ್ಧರಾದ ಶ್ರೀ ದತ್ತಾತ್ರೇಯ ರಾಮರಾವ್ ಪರ್ವತೀಕರ್ ಮಹಾರಾಜರು ನಾದಯೋಗಿಗಳಾಗಿದ್ದರು. ಬಾಗಲಕೋಟೆಯ ಬಾದಾಮಿ ಸಮೀಪದ ಗುಳೇದಗುಡ್ಡದಲ್ಲಿ ೧೯೧೬ರಲ್ಲಿ ಜನಿಸಿದ ಅವರು ಸಂನ್ಯಾಸಿಗಳಾಗಿ ಹಿಮಾಲಯದ ಬದರೀನಾಥ ದೇವಾಲಯದ ಬಳಿ ವಾಸ ಮಾಡುತ್ತಿದ್ದರು. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿದ್ದ ಅವರು ರುದ್ರವೀಣೆ ನುಡಿಸುವುದರಲ್ಲಿ ನಿಷ್ಣಾತರಾಗಿದ್ದರು. ಸಿತಾರ್, ವಿಚಿತ್ರವೀಣೆ, ಸ್ವರಮಂಡಲಗಳನ್ನು ಕೂಡ ಅವರು ನುಡಿಸುತ್ತಿದ್ದರು. ಸಂಗೀತದ ಮೂಲಕ ಆಧ್ಯಾತ್ಮಿಕತೆಯನ್ನು ಜನರ ಕಡೆಗೆ ಕೊಂಡೊಯ್ಯುವುದೇ ಅವರ ಪ್ರಧಾನ ಧ್ಯೇಯವಾಗಿತ್ತು. ೧೯೫೦ರಲ್ಲಿ ಅವರು ಹೃಷೀಕೇಶದಲ್ಲಿ 'ನಾದಯೋಗ ಶಾಲೆ'ಯನ್ನು ಆರಂಭಿಸಿದರು. ಅವರು ಭಾರತದಾದ್ಯಂತ ಅನೇಕ ಸಂಗೀತ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದ್ದರು. ೧೯೭೫ರಲ್ಲಿ ಬೆಂಗಳೂರಿನಲ್ಲಿ 'ಶ್ರೀ ರಾಘವೇಂದ್ರ ಸ್ವಾಮಿ ಮಿಷನ್' ಸಂಸ್ಥೆಯನ್ನು ಆರಂಭಿಸಿದರು. ಬಹಳ ದೊಡ್ಡ ತಪಸ್ವಿಗಳಾಗಿದ್ದ ಅವರು ಹೆಚ್ಚು ಮಾತನಾಡುತ್ತಿರಲಿಲ್ಲ. ಅವರು ೧೯೯೦ರಲ್ಲಿ ಮಹಾಸಮಾಧಿಯನ್ನು ಹೊಂದಿದರು.

---

೧೧ ಋಗ್ವೇದ (೮.೬೯.೯, ೨.೪೩.೩, ೧೦.೧೩೫.೭), ತೈತ್ತಿರೀಯ ಸಂಹಿತೆ (೧.೫.೯, ೩೦)

೧೨ **ಸತ್ವಶುದ್ಧಿಕರತ್ವೇನ ವಸ್ತುತತ್ತ್ವಾವಭಾಸಕತ್ವಾತ್ ಜ್ಞಾನಭಕ್ತಿ ಉಪಕಾರಿಣೀ ।**

೧೩ **ನಿರ್ವಿಕಲ್ಪಸಮಾಧ್ಯಾದಿಶ್ಚ ಗಾಂಧರ್ವ ವೇದ ಶಾಸ್ತ್ರಸ್ಯ ಪ್ರಯೋಜನಮ್**



# ಸಂಗೀತದಲ್ಲಿ ಗುರು-ಶಿಷ್ಯ ಪರಂಪರೆ ಮತ್ತು ಆಧ್ಯಾತ್ಮಿಕತೆ

**ಪಂಡಿತ್ ರಾಜಶೇಖರ ಮನ್ಸೂರ್**

ಸಂಗೀತದಲ್ಲಿ ಗುರು-ಶಿಷ್ಯ ಪರಂಪರೆಗೆ ಅತಿಹೆಚ್ಚಿನ ಮಹತ್ವವಿದೆ. ಗುರು, ಶಿಷ್ಯರಿಬ್ಬರ ನಡುವಿನ ಸಂಬಂಧ, ಅವರ ಶ್ರದ್ಧೆ-ಭಕ್ತಿ-ಸಾಧನೆಗಳು ಅವರ ಸಂಗೀತ ಸಾಧನೆಯ ಶ್ರೇಷ್ಠತೆಯನ್ನು ನಿರ್ಧರಿಸುತ್ತವೆ. ಈ ಕುರಿತು ವಿವರಿಸಿರುವ ಲೇಖಕರು ಹಿಂದೂಸ್ತಾನೀ ಸಂಗೀತದ ಪ್ರಸಿದ್ಧ ಜಯಪುರ- ಅತ್ರೌಲಿ ಘರಾನಕ್ಕೆ ಸೇರಿದ ಹಿರಿಯ ಸಂಗೀತ ವಿದ್ವಾಂಸರು. ಅವರು ಹಿಂದೂಸ್ತಾನೀ ಸಂಗೀತದ ದಿಗ್ಗಜರೆಂದೇ ಖ್ಯಾತರಾದ ಪಂಡಿತ್ ಮಲ್ಲಿಕಾರ್ಜುನ ಮನ್ಸೂರ್ ಅವರ ಪುತ್ರರು. ಸಂಗೀತವನ್ನು ತಮ್ಮ ತಂದೆಯವರಿಂದಲೇ ಕಲಿತು, ಹಲವು ವರ್ಷಗಳ ಕಾಲ ಅವರೊಂದಿಗೆ ಸಹಗಾಯನ ಮಾಡಿರುವ ಅವರು, ಹಲವು ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಪ್ರಸ್ತುತ ಅವರು ಬೆಂಗಳೂರಿನಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ.

**ಸಂ**ಗೀತ ಮನೋರಂಜನೆಗಾಗಿ ಎಂದು ಹೇಳುವುದೇನೋ ನಿಜ, ಆದರೆ ಶಾಸ್ತ್ರೀಯ ಸಂಗೀತದಲ್ಲಿ ಮನೋರಂಜನೆಗಿಂತಲೂ ಮುಂದೆ ಹೋಗಿ ಕೆಲ ಸಂಗೀತೋಪಾಸಕರಿಗೆ ಅದು ಒಂದು ಆಧ್ಯಾತ್ಮಿಕ ವಿಷಯ ಅಥವಾ ಸಾಧನೆ ಆಗಿಬಿಡುತ್ತದೆ. ಇಂಥ ಒಬ್ಬ ಸಂಗೀತ ಸಾಧಕನಿಗೆ ಶಾಸ್ತ್ರೀಯ ಸಂಗೀತ ಕೊನೆಯವರೆಗೂ ಆಧ್ಯಾತ್ಮಿಕತೆಗೆ ದಾರಿ ಆಗಿಬಿಡುತ್ತದೆ. ಸಂಗೀತಗಾರ ಸದಾಕಾಲವೂ ಸ್ವರ ಲಯಗಳ ಉಪಾಸಕನಾಗಿದ್ದರೆ, ಸಂಗೀತವೇ ಅವನ ಉಸಿರಾಗಿದ್ದರೆ, ಅದು ಅವನ ಆಧ್ಯಾತ್ಮಿಕ ಕ್ರಿಯೆಯಾಗುತ್ತದೆ. ತಾನು ಜೀವಿಸುವುದೇ ಸಂಗೀತಕ್ಕಾಗಿ ಎಂಬುದು ಅವನಿಗೆ ಅರಿವಾಗಿದ್ದರೆ, ಸಂಗೀತ ಬಿಟ್ಟು ಇನ್ನೇನೂ ಈ ಜೀವನದಲ್ಲಿ ಇಲ್ಲ ಎಂಬುದು ಮನದಟ್ಟಾಗಿದ್ದರೆ, ಅಂಥವನು ಒಬ್ಬ ಶ್ರೇಷ್ಠ ಸಂಗೀತೋಪಾಸಕ. ಇಂಥ ಒಬ್ಬ ಸಂಗೀತಗಾರನು ಗುರುವಾದಾಗ, ತನ್ನ ಶಿಷ್ಯರಲ್ಲೂ ಅಂಥ ಆಧ್ಯಾತ್ಮಿಕತೆಯ ಬೀಜವನ್ನು ಬಿತ್ತಲು ಪ್ರಯತ್ನಿಸುತ್ತಾನೆ. ಈರ್ವರಲ್ಲೂ ಆಧ್ಯಾತ್ಮಿಕ ಮನೋಧರ್ಮ ಏರ್ಪಟ್ಟರೆ ಸಂಗೀತದಲ್ಲಿ ಆದಾನ - ಪ್ರದಾನ ಸರಳವಾಗುತ್ತದೆ, ಸಂಗೀತ ಕಲಿಸುವಿಕೆ - ಕಲಿಯುವಿಕೆ ಸರಾಗವಾಗಿ ಸಾಗುತ್ತದೆ.

ಭರತಖಂಡದಲ್ಲಿ ವಿದ್ಯಾರ್ಜನೆ ಎಂಬುದು ಅನಾದಿ ಕಾಲ ದಿಂದಲೂ ಅನೂಚಾನವಾಗಿ ಗುರು-ಶಿಷ್ಯ ಪರಂಪರೆಯಲ್ಲಿಯೇ ನಡೆದು ಬಂದಿದೆ. ಇಂತಹ ಅದ್ವಿತೀಯ ವಾತಾವರಣದ ಪರಂ ಪರೆಯಲ್ಲಿ ನಮ್ಮ ಕಲೆಗಳು ಪರಿಪಕ್ವಗೊಂಡಿವೆ. ಇಂಥ ಸಂಗೀತದ ಅಭ್ಯಾಸ ಪದ್ಧತಿ ಬಹಳ ಹಿಂದಿನಿಂದಲೂ, ಅಂದರೆ ವೇದ ಕಾಲ ದಿಂದಲೂ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ನಡೆದುಕೊಂಡು ಬಂದಿದೆ. ಶಾಸ್ತ್ರೀಯ ಸಂಗೀತದಲ್ಲಿ ಇಂಥ ಆಧ್ಯಾತ್ಮಿಕ ಪ್ರಕ್ರಿಯೆ ಸ್ವಾಮಿ ಹರಿದಾಸ-ತಾನಸೇನ್ ಕಾಲದಿಂದಲೂ ನಡೆದುಕೊಂಡು ಬಂದ ಪ್ರತೀತಿ ಇದೆ.

ನನ್ನ ದೃಷ್ಟಿಯಲ್ಲಿ ನಿಜವಾದ ಗುರು-ಶಿಷ್ಯ ಸಂಬಂಧವೆಂದರೆ ಅದು ಈರ್ವರಲ್ಲಿ ಕಟಿಬದ್ಧವಾದ ದೀಕ್ಷಾಬಂಧವಾಗಿದ್ದು, ಹಿಂದಿನ ಅನೇಕ ಜನ್ಮಗಳಿಂದ ಹರಿದು ಬಂದು, ಮುಂದಿನ ಜನ್ಮಾಂತರದ ವರೆಗೂ ಪ್ರವಹಿಸುವಂಥದ್ದು. ಇಂಥ ಗುರು-ಶಿಷ್ಯರು ಸಿಗುವುದು ಅಪರೂಪ. ಇಂದಿನ ಕಾಲದಲ್ಲಿಯಂತೂ ಈ ತೆರನಾದ ವಾತಾ ವರಣ ನಿರ್ಮಾಣವಾಗುವುದು ಬಹಳ ಕಠಿಣವೆನ್ನಬಹುದು. ನಿಜ ವಾದ ಆಧ್ಯಾತ್ಮಿಕ ಕಲಿಕೆ, ಕಲಿಸುವಿಕೆ ಗುರು ಒಬ್ಬನೇ ಒಬ್ಬ ಶಿಷ್ಯ ನಿಗೆ ಮಾತ್ರ ಕಲಿಸುವಾಗ ಸಾಧ್ಯವಾಗುವಂಥದ್ದು. ಎಂಟು ಹತ್ತು ಶಿಷ್ಯರಿಗೆ ಒಟ್ಟಿಗೇ ಕಲಿಸುವಾಗ ಇಂಥ ವಾತಾವರಣ ಸಂಗೀತ ದಲ್ಲಂತೂ ಆಗದು. ಹಿಂದೆ ನಿಷ್ಣಾತ ಗುರುಗಳು ಕೆಲವೇ ಯೋಗ್ಯ ಶಿಷ್ಯರನ್ನು ಆರಿಸಿಕೊಂಡು ಅವರಿಗೆ ಸಂಗೀತದಲ್ಲಿ ಹಲವು ವರ್ಷ ಗಳ ಕಾಲ ತರಬೇತಿ ಕೊಟ್ಟು, ಪರಂಪರೆಯನ್ನು ಸಮೃದ್ಧಗೊಳಿಸಿ ದ್ದಾರೆ. ಇದು ನಮಗೆ ದಾರಿದೀಪವಾಗಬೇಕು. ಗುರು ಮತ್ತು ಶಿಷ್ಯ ಇಬ್ಬರೇ ಇದ್ದಾಗ ಇಬ್ಬರ ಆಲೋಚನಾ ರೀತಿ (wave-lengths) ಹೊಂದಿಕೊಳ್ಳಲು ಸಾಧ್ಯವಾಗುವುದು.

ಇಂಥ ಅದ್ವಿತೀಯ, ಅತೀಂದ್ರಿಯವಾದ ಆಧ್ಯಾತ್ಮಿಕ ವಾತಾ ವರಣದಲ್ಲಿ ಸಂಗೀತ ಪಾಠ ನಡೆದರೆ ಗುರು ಮತ್ತು ಶಿಷ್ಯ ಇಬ್ಬರೂ ಆನಂದವನ್ನು ಅನುಭವಿಸಬಹುದು. ಇಂಥಲ್ಲಿ ಕೇವಲ ಎರಡು ಮನಸ್ಸುಗಳ ಬೆಸೆಯುವಿಕೆ ಮಾತ್ರವಲ್ಲ, ಎರಡು ಆತ್ಮಗಳು ವಿಲೀನವಾಗುತ್ತವೆ. ಯಾವಾಗ ಒಬ್ಬ ಶಿಷ್ಯನು ಸಂಪೂರ್ಣವಾಗಿ ತನ್ನ ಗುರುವಿಗೆ ಹೃದಯಪೂರ್ವಕ ಶರಣಾಗತನಾಗುತ್ತಾನೋ, ಆಗ ಗುರು ಆತನನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸುತ್ತಾನೆ. ಗುರು ಏಕೆ ಕೃತಜ್ಞತಾಪೂರ್ವಕವಾಗಿ ಶಿಷ್ಯನನ್ನು ಸ್ವೀಕರಿಸುತ್ತಾನೆ ಎಂದರೆ, ತನ್ನಂತೆ ತನ್ನ ಅಮೂಲ್ಯವಾದ ವಿದ್ಯೆಯನ್ನು ತನ್ನ ಶಿಷ್ಯಂ ದಿರಿಗೆ ಧಾರೆ ಎರೆಯುವ ಶಿಷ್ಯ ಲಭ್ಯನಾಗಿದ್ದಾನೆ ಎಂದು ದೇವರಿಗೆ ಕೃತಜ್ಞತೆ ಅರ್ಪಿಸುತ್ತಾನೆ. ಇಲ್ಲಿ ಇಂಥ ಗುರು ಇರುವುದು ಕೊಡಲು, ಶಿಷ್ಯನಿರುವುದು ಸ್ವೀಕರಿಸಲು. ಕೊಡುವಾಗ ಗುರು ತುಂಬು ಹೃದಯದಿಂದ ಕೊಡುವಂತೆ, ಶಿಷ್ಯನೂ ಸಂಪೂರ್ಣ ಶರಣಾಗತನಾಗಿ ಕೃತಜ್ಞತಾಪೂರ್ವಕವಾಗಿ ಸ್ವೀಕರಿಸುತ್ತಾನೆ. ಇಂಥ ಗಾಢವಾದ ಸಂಬಂಧ ಅವರಿಬ್ಬರಲ್ಲೂ ಮೇಳೈಸಿದರೆ ಅಮೋಘವಾದ ವಿದ್ಯೆ ಬೆಳೆಯುತ್ತದೆ. ಶಿಷ್ಯನಾದವನು ಗುರು ಹಾಕಿಕೊಟ್ಟ ದಾರಿಯಲ್ಲಿ ನಡೆದಾಗ ಸಂಗೀತ ಬೆಳೆಯುತ್ತದೆ. ಗುರು ಹೇಳಿಕೊಟ್ಟದ್ದನ್ನು ಮೊದಲ ಬಾರಿಗೆ ಮನನ ಮಾಡಿ ಕೊಂಡು, ಕೆಲವು ವರ್ಷಗಳ ಅವಿರತ ಸಾಧನೆಯ ನಂತರ ಅದನ್ನು ಕುರಿತು ಚಿಂತನೆ ಮಾಡಿ, ತದನಂತರ ಅದನ್ನು ಮಂಥನ ಮಾಡಲು ಸಾಧ್ಯವಾದರೆ ಸಂಗೀತ ಸಾಕ್ಷಾತ್ಕಾರವಾಗುತ್ತದೆ. ವಾಸ್ತವವಾಗಿ ಹೀಗೆ ಆದಾಗ ಇಬ್ಬರಲ್ಲೂ ಮಹಾನ್ ತಿಳುವಳಿಕೆ, ಇಬ್ಬರಲ್ಲೂ ಸಮಾಗಮವಾಗುವ ಅದ್ವಿತೀಯ ಪ್ರೀತಿ ಉಂಟಾ ಗುತ್ತದೆ. ಆಗ ಅಲ್ಲಿ ಕೇಳಲು ಪ್ರಶ್ನೆಗಳು ಇರುವುದಿಲ್ಲ, ಹೇಳಲು ಉತ್ತರಗಳೂ ಇರುವುದಿಲ್ಲ.

ಭಾರತೀಯ ಸಂಗೀತ ಪರಂಪರೆಯಲ್ಲಿ ಓರ್ವ ಶಿಷ್ಯ ತನ್ನ ಹಾಡುವಿಕೆಯಲ್ಲಿ ಎಸಗುವ ಲೋಪಗಳಿಂದ ಪ್ರಶ್ನೆಯನ್ನು ಕೇಳು ತ್ತಾನೆ. ಇದಕ್ಕೆ ಗುರು ತನ್ನ ಖಚಿತವಾದ ಸ್ವರ ಅಥವಾ ಸ್ವರಗುಚ್ಛಗಳ ಹಾಡುವಿಕೆಯ ಮೂಲಕ ಉತ್ತರಿಸುತ್ತಾನೆ. ಶಿಷ್ಯನಾದವನು ಸೂಕ್ಷ್ಮಗ್ರಹಿಕೆ ಉಳ್ಳವನಾಗಿದ್ದು, ರಾಗಸ್ವರಗಳ ಸೂಕ್ಷ್ಮ ವ್ಯತ್ಯಾಸ ಗಳನ್ನು ಸರಿಯಾಗಿ ಗ್ರಹಿಸಿ, ತನ್ನ ಸಂಪೂರ್ಣ ತೊಡಗುವಿಕೆಯಿಂದ ಅವುಗಳನ್ನು ಪುನರುಚ್ಚರಿಸುತ್ತ, ನಿಜವಾದ ಸಾಧನಾಕಾಂಕ್ಷಿಯಾಗಿ ದ್ದಲ್ಲಿ ಒಂದಲ್ಲ ಒಂದು ದಿನ ಸರಿಯಾಗಿ ಉಚ್ಚರಿಸುತ್ತಾನೆ. ಗುರು ವಾದವನು ತನ್ನ ಶಿಷ್ಯನ ಬಗೆಗೆ ಅಪಾರ ತಾಳ್ಮೆ ಮತ್ತು ಸಹನೆಯನ್ನು ಹೊಂದಿರಬೇಕಾಗುತ್ತದೆ. ಆತ ನಿರ್ದಿಷ್ಟ ಸ್ವರ, ಲಯಗಳನ್ನು ಅಗಾಧ ತಣಿಸುವಿಕೆ ಹಾಗೂ ಇಚ್ಛಾಪೂರ್ಣ ದೃಷ್ಟಿಯಲ್ಲಿ ಪುನರು ಚ್ಚರಿಸುತ್ತಾನೆ.

ಗುರುವಾದವನು ತನ್ನ ಶಿಷ್ಯನಲ್ಲಿ ಸಂಗೀತ ಎಂಬುದು ಒಂದು ಅಮೋಘವಾದ ದೈವೀಕ್ರಿಯೆ ಎಂಬ ಮನೋಭಾವವನ್ನು ಮೊದಲು ಹುಟ್ಟಿಸಬೇಕು. ಸ್ವರ ಲಯಗಳು ಪೂಜನೀಯ ವಿಷಯಗಳು, ಅವುಗಳನ್ನು ಓಲೈಸಬೇಕು, ಅವುಗಳನ್ನು ಪದೇ ಪದೇ ವಿನೀತಭಾವದಿಂದ ಆಹ್ವಾನಿಸಬೇಕು ಎಂಬುದನ್ನು ಮನ ದಟ್ಟು ಮಾಡಿಸಬೇಕು. ತಾನೂ ಸಹ ಇಂದಿಗೂ ಸಂಗೀತವನ್ನು ಇದೇ ತರಹ ಕಾಣುತ್ತೇನೆ ಎಂಬುದನ್ನು ಶಿಷ್ಯನಿಗೆ ತೋರಿಸಿಕೊಡ ಬೇಕು.

ಸಂಗೀತೋಪಾಸಕನಾದ ಗುರುವು ಬರಿ ಸ್ವರಗಳನ್ನು, ರಾಗ ಗಳನ್ನು, ತಾಳಗಳನ್ನು ಕಲಿಸುವುದಿಲ್ಲ. ಸೂಕ್ಷ್ಮಮತಿಯ ಶಿಷ್ಯ ನಿದ್ದರೆ ಅದಕ್ಕಿಂತ ಮುಂದೆ ಹೋಗಿ ಸಂಗೀತದ ತಿರುಳನ್ನು ಹೇಳಿ ಕೊಡುವ, ಯಾವುದಕ್ಕೆ ನಾವು 'ಗಾಯಕಿ' ಅನ್ನುತ್ತೇವೋ ಅದನ್ನು ತನ್ನ ಶಿಷ್ಯನಲ್ಲಿ ಬಿತ್ತುತ್ತಾನೆ; ಆಧ್ಯಾತ್ಮಿಕವಾದ ದೃಷ್ಟಿಯನ್ನು ತೋರಿಸುತ್ತಾನೆ. ಈ ದೃಷ್ಟಿಯನ್ನು ಹಿಡಿದುಕೊಂಡು ಶಿಷ್ಯನು ಮುಂದೆ ಸಾಗಬೇಕು. ಆಗ ಗುರುವಿಗೆ ಸಂತೋಷವಾಗುತ್ತದೆ. ಗುರು ಹಾಕಿಕೊಟ್ಟ ದಾರಿಯನ್ನು ಹಿಡಿದುಕೊಂಡು ಹೊರಟರೆ ನಂತರ ಶಿಷ್ಯನಿಗೆ ತನ್ನತನ ಬರುತ್ತದೆ, ಸ್ವಂತಿಕೆ ಬರುತ್ತದೆ. ಶಿಷ್ಯನಿಗೆ ಇಲ್ಲಿ ಸಾಕಷ್ಟು ತಾಳ್ಮೆ, ಸಂಯಮ ಇರಬೇಕಾಗುತ್ತದೆ.

ಗುರುವಿಗೆ ತನ್ನ ಶಿಷ್ಯ ಅಂಬೆಗಾಲಿಡುತ್ತಿರುವ ಮಗು. ತಾನು ಜ್ಞಾನಿಯಾದದ್ದರಿಂದ ಮಗುವನ್ನು ಸುಜ್ಞಾನದಿಂದ ಪೊರೆದು ಮಾರ್ಗದರ್ಶನ ನೀಡಬೇಕು. ತನ್ನ ಶಿಷ್ಯ ನಡೆದಾಡಲು ಕಲಿತ ನಂತರ ಓಡಲು ತೊಡಗುವಾಗ ಗುರುವಿಗೆ ಅತೀವ ಸಂತಸ. ತನ್ನ ಗುರುವಿನ ಸಂತೋಷಕ್ಕೆ ತಾನು ಓಡುತ್ತಿರುವುದು ಶಿಷ್ಯನಿಗೆ ಸಿಗುವ ತೃಪ್ತಿ. ಈರ್ವರಿಗೂ ದಕ್ಷಿಣೆ ಮುಖ್ಯವಲ್ಲ. ಗುರುನಿಷ್ಠೆ, ಗುರು ಸೇವೆ ಮುಖ್ಯ. ಗುರು ಏನನ್ನೂ ತೆಗೆದುಕೊಳ್ಳದೆ, ಸಂತೋಷದಿಂದ ಶಿಷ್ಯನಿಗೆ ತನ್ನೆಲ್ಲ ಅಮೂಲ್ಯ ವಿದ್ಯೆಯನ್ನು ಧಾರೆ ಎರೆದ ಅನೇಕ ಉದಾಹರಣೆಗಳು ನಮ್ಮಲ್ಲಿ ಈಗಲೂ ಸಿಗುವುವು. ಗುರುವನ್ನು ಸಲುಹುವ ಅನೇಕ ಶಿಷ್ಯಂದಿರನ್ನು ಇಂದಿಗೂ ಕಾಣಬಹುದು. ಗುರು ತೋರಿಸುವ ಸರಿಯಾದ ದಾರಿಯಲ್ಲಿ ಸಾಗಿ ಅಲ್ಲಿ ಶ್ರೇಷ್ಠತೆ ಯನ್ನು ಸಾಧಿಸಿದರೆ ಅದು ಒಬ್ಬ ಶಿಷ್ಯ ತನ್ನ ಗುರುವಿಗೆ ನೀಡುವ ನಿಜವಾದ ದಕ್ಷಿಣೆ. ಶಾಸ್ತ್ರೀಯ ಸಂಗೀತದಲ್ಲಿ ಕಲಿಸುವಿಕೆ-ಕಲಿಯುವಿಕೆ ಎರಡೂ ಆಧ್ಯಾತ್ಮಿಕ ದೃಷ್ಟಿಯಿಂದ ನಡೆದರೆ ಒಂದು ಅಲೌಕಿಕ ಆನಂದ ಲಭಿಸುತ್ತದೆ.

ಸಂಗೀತ ಗುರುಮುಖೇನ ಮಾತ್ರ ಬರುವ ವಿದ್ಯೆ, ಪಠ್ಯ-ಪುಸ್ತಕಗಳಿಂದಲ್ಲ. ಪಠ್ಯ-ಪುಸ್ತಕಗಳಿಂದ ಸಂಗೀತದ ಸಾಮಾನ್ಯ ಮಾಹಿತಿ ಸಿಗಬಹುದು. ಆದರೆ ಈ ಮಾಹಿತಿ ವಿದ್ಯೆಯಾಗುವುದಿಲ್ಲ. ಸಂಗೀತದ ಮಾಹಿತಿಯನ್ನು ಸಂಗ್ರಹಿಸುತ್ತಾ ಹೋದರೆ ಒಬ್ಬ ಕಲಾ ಕಾರನಾಗುವುದಿಲ್ಲ. ಕಲಾಕಾರನೆಂದರೆ ತನ್ನ ಕಲೆಯಲ್ಲಿ ನಿರಂತರ ದುಡಿಯುತ್ತಿರುವವನು, ಅದನ್ನು ಜತನದಿಂದ ಕೃಷಿ ಮಾಡಿ, ಪೋಷಿಸುತ್ತಿರುವವನು. ಶಾಸ್ತ್ರಗಳಲ್ಲಿ ರಾಗದ ಬಗ್ಗೆ ಒಂದು ಅಸ್ಥಿ ಪಂಜರ ರೂಪದ (skeletal) ವಿವರಣೆ ಮಾತ್ರ ಸಿಗಬಹುದು. ಕೇವಲ ಶಾಸ್ತ್ರಗಳನ್ನು ಪುಸ್ತಕದಲ್ಲಿ ಓದಿ ಅದರ ಪ್ರಕಾರ ಹಾಡಿದರೆ ಒಂದು ರಾಗವಾಗುವುದಿಲ್ಲ. ಗುರುಮುಖೇನ ಕಲಿತು ಹಾಡಿದಾಗ ಮಾತ್ರ ಒಂದು ರಾಗವಾಗುತ್ತದೆ. ಏಕೆಂದರೆ ಗುರುವಾದವನು ಶಾಸ್ತ್ರಗಳಲ್ಲಿ ಕೊಟ್ಟ ಅಸ್ಥಿಪಂಜರಕ್ಕೆ ಮಾಂಸ, ರಕ್ತಗಳನ್ನು ತುಂಬಿ ಅದರಲ್ಲಿ ಒಂದು ಜೀವವನ್ನು ಸ್ಥಾಪಿಸಿ, ರಾಗವೆಂಬ ವ್ಯಕ್ತಿತ್ವವನ್ನು ಸೃಷ್ಟಿಸುತ್ತಾನೆ. ಪ್ರತಿಯೊಂದು ರಾಗಕ್ಕೂ ತನ್ನದೇ ಆದ ಒಂದು ವ್ಯಕ್ತಿತ್ವ, ವಿಶಿಷ್ಟವಾದ ಪರಿಚಯ, ಒಂದು ಪ್ರಕೃತಿ, ಒಂದು ಸ್ವಭಾವ, ಒಂದು ಸ್ವಂತಿಕೆ ಇರುತ್ತದೆ. ಒಂದು ರಾಗದ ಇಂಥ ವ್ಯಕ್ತಿತ್ವ ಕೇವಲ ಸ್ವರಗಳ ಜೋಡಣೆ ಅಥವಾ ಅವುಗಳ ಸಮೀಕರಣ ದಿಂದ ಪ್ರಕಟ ಮಾಡಲು ಆಗುವುದಿಲ್ಲ. ರಾಗದಲ್ಲಿ ಸ್ವರಗಳು ಹೇಗೆ ನಡೆದುಕೊಳ್ಳುತ್ತವೆಯೋ, ಯಾವ ರೀತಿಯಲ್ಲಿ ಒಂದಕ್ಕೊಂದು ಹೊಂದಿಕೊಂಡಿವೆಯೋ, ಸಂಬಂಧವಿಟ್ಟುಕೊಂಡಿವೆಯೋ ಅಥವಾ ಕಲ್ಪಿಸಿಕೊಂಡಿವೆಯೋ, ಯಾವ ಯಾವ ಸ್ವರಗಳು ಎಷ್ಟು ತೂಕ ದಿಂದೆವೆಯೋ, ಆ ಸ್ವರಗಳ (timing) ಲಯ ಎಷ್ಟಿದೆಯೋ, ಸ್ವರ ಸಮೂಹಗಳು ಹೇಗೆ ಹೆಣೆಯಲ್ಪಟ್ಟಿವೆಯೋ ಇತ್ಯಾದಿಗಳ ಮೇಲೆ ಒಂದು ರಾಗದ ವ್ಯಕ್ತಿತ್ವವನ್ನು ನಿರ್ಧರಿಸಲಾಗುವುದು. ಇವುಗಳು ಒಬ್ಬ ಶಿಷ್ಯನಿಗೆ ದಕ್ಕುವುದು ಆತ ತನ್ನ ಗುರುವಿನ ಮುಂದೆ ಶ್ರದ್ಧೆ, ಭಕ್ತಿಯಿಂದ ಕುಳಿತು, ಗುರು ಹೇಳುತ್ತಿರುವ ಸಂಗತಿಯನ್ನು ತದೇಕಚಿತ್ತದಿಂದ ಕೇಳಿ, ಮನನ ಮಾಡಿಕೊಂಡು, ತನ್ನ ಅಂಕು ಡೊಂಕುಗಳನ್ನು ತಿದ್ದಿಕೊಳ್ಳುತ್ತಾ, ಬಹಳ ತಾಳ್ಮೆಯಿಂದ ಎಲ್ಲ ವಿಷಯಗಳನ್ನು ಅರಿತುಕೊಂಡಾಗ ಮಾತ್ರ.

ಭಾರತೀಯ ಶಾಸ್ತ್ರೀಯ ಸಂಗೀತ ಬರೀ ಮನೋರಂಜನೆಗಾಗಿ ಇರುವ ಸಾಧನವಲ್ಲ. ಮನೋರಂಜನೆ ಅತಿ ಕ್ಷಣಿಕವಾದ ಪರಿ ಣಾಮ. ಶಾಸ್ತ್ರೀಯ ಸಂಗೀತವನ್ನು ಗಂಭೀರತೆಯಿಂದ ಹಾಡು ವುದಾಗಲೀ, ಕೇಳುವುದಾಗಲೀ ಒಂದು ಅತೀತದ ಅನುಭವ. ಸಂಗೀತದಲ್ಲಿ ಅನುಭವ ಹೆಚ್ಚಾದಂತೆ ಪಕ್ವತೆ ಬೆಳೆಯುತ್ತದೆ. ಸುಲಭವಾಗಿ, ಲಗುಬಗೆಯಿಂದ ಸಾಧಿಸುವ ಕಲೆ ಸಂಗೀತವಲ್ಲ. ದೇವರನ್ನು ಮೆಚ್ಚಿಸುವ ಕಲೆ ಸಂಗೀತವಾದುದರಿಂದ ತಾಳ್ಮೆಯನ್ನು ಮೈಗೂಡಿಸಿಕೊಳ್ಳಬೇಕಾಗುತ್ತದೆ.

ಭಾರತೀಯ ಶಾಸ್ತ್ರೀಯ ಸಂಗೀತದ ಬುನಾದಿ ತುಂಬಾ ಘನ ವಾದ ಅಡಿಪಾಯದ ಮೇಲೆ ನಿಂತಿರುವುದು ಕಂಡುಬರುತ್ತದೆ. ಹಿಂದಿನ ಪೀಳಿಗೆಯ ಗಾಯಕರೆಲ್ಲ ತಮ್ಮ ಗುರುವಿನ ಬಳಿ ಶ್ರದ್ಧೆ ಯಿಂದ ಹಲವಾರು ವರ್ಷಗಳವರೆಗೆ ತಾಲೀಮು ಪಡೆಯು ತ್ತಿದ್ದರು. ಗುರುಸಾನ್ನಿಧ್ಯದಲ್ಲಿ ದಿನಂಪ್ರತಿ ಹಲವಾರು ತಾಸುಗಳ ತಾಲೀಮಿನಲ್ಲಿ ನಿರತರಾಗಿರುತ್ತಿದ್ದರು. ಗುರು ಹೇಳುವುದನ್ನು ತದೇಕಚಿತ್ತದಿಂದ ಕೇಳುತ್ತಿದ್ದರು. ಗುರು-ಶಿಷ್ಯರ ಸಂಬಂಧ ಅನ್ಯೋನ್ಯವಾಗಿರುತ್ತಿತ್ತು. ವ್ಯಾಪಾರೀ ಮನೋಭಾವ ಇಬ್ಬರಲ್ಲೂ ಇರುತ್ತಿರಲಿಲ್ಲ. (ಇದಕ್ಕೆ ಕೆಲವು ಅಪವಾದಗಳಿರಬಹುದು). ಸಮಯದ ಬಂಧನ ಇರುತ್ತಿರಲಿಲ್ಲ. ಶಿಷ್ಯನ ಪ್ರಗತಿಯನ್ನು ಮನ ಗಂಡು ಗುರುವಾದವನು ಸಾವಧಾನವಾಗಿ ಸಂಗೀತ ಪ್ರಪಂಚದ ಖಜಾನೆಯನ್ನು ತೆರೆದಿಡುತ್ತಿದ್ದನು. ತಾಲೀಮು ಸಮಯದ ನಂತರ ಶಿಷ್ಯನು ತನ್ನಷ್ಟಕ್ಕೆ ತಾನೇ ಗುರು ಹೇಳಿಕೊಟ್ಟದ್ದನ್ನು ಗಂಟೆ ಗಟ್ಟಲೆ ರಿಯಾಜ್ ಮಾಡುತ್ತಿದ್ದನು. ಅಂದಿನ ಶಿಷ್ಯನಿಗೆ ಸಮ ಯದ ಚಿಂತೆ ಕಾಡುತ್ತಿರಲಿಲ್ಲ. ವರ್ಷ ವರ್ಷಗಳು ಕಳೆದು ಹೋದರೂ ಗುರುವಿನಿಂದ ಇನ್ನೂ ಕಲಿತುಕೊಳ್ಳಬೇಕೆಂಬ ಮಹ ದಾಸೆ ಇರುತ್ತಿತ್ತು. ಸಂಗೀತ ಒಂದು ಮೈಗೂಡುವ ವಿದ್ಯೆ. ಸಮಯ ಹಿಡಿಯುವುದು ಸಹಜ. ಅಷ್ಟು ತಾಳ್ಮೆ ಅಂದಿನ ಶಿಷ್ಯಂದಿ ರಲ್ಲಿ ಇತ್ತು. ರಾಗದ ಮನನ, ಚಿಂತನ ಮಾಡುವುದರಲ್ಲಿ ಸಮ ಯದ ಲೆಕ್ಕವನ್ನಿಡಲು ಅವಕಾಶವೇ ಇರುತ್ತಿರಲಿಲ್ಲ. ಇಂದು ಎಲ್ಲವೂ ಗಡಿಯಾರವನ್ನು ಅವಲಂಬಿಸಿದೆ. ಎಲ್ಲವೂ ನಿರ್ದಿಷ್ಟ ಸಮಯದಲ್ಲಿ ನಡೆದು ಹೋಗಬೇಕು. ಸಂಗೀತವೂ ಅಷ್ಟೆ. ಇಂಥ ಮನೋಭಾವವಿದ್ದರೆ ಸಂಗೀತ ಬಾರದು. ಸಂಗೀತದಲ್ಲಿ ಸಮಯ ನಿಂತು ಬಿಡುತ್ತದೆ. ಗಡಿಯಾರ ಕಾಣುವುದಿಲ್ಲ. ರಾಗಗಳು, ಸ್ವರ ಗಳು, ಲಯ ಇವೆಲ್ಲ ಕಾಣತೊಡಗುತ್ತವೆ.

ಶಿಷ್ಯನಾದವನು ಗುರುವಿನ ಸಂಗೀತವನ್ನು ಮೊದಲು ಮೆಚ್ಚಿರ ಬೇಕಾಗುತ್ತದೆ. ಹೆಸರುವಾಸಿಯಾದ ಸಂಗೀತಗಾರನಲ್ಲಿಯೇ ಕಲಿಯಬೇಕು ಎಂಬುದು ಕೇವಲ ಹುಸಿ ಪ್ರತಿಷ್ಠೆಯ ವಿಷಯ.

ಅವನ ಸಂಗೀತ ಅಮೋಘವಾದದ್ದು, ಅದಕ್ಕೆ ಅವನಲ್ಲಿ ಕಲಿಯಬೇಕು ಎಂಬ ಬಯಕೆಯಿಂದ ಒಬ್ಬ ಗುರುವಿನ ಬಳಿಗೆ ಹೋಗುವುದು ಉತ್ತಮ. ಗುರುವಿನ ಸಂಗೀತವನ್ನು ಅತ್ಯಂತ ಸೂಕ್ಷ್ಮತೆಯಿಂದ ಕೇಳಬೇಕು. ಮೊದಲು ಹರವಾದ (broad conceptualisations) ಸ್ವರ-ಲಯಗಳ ಸಮೂಹಗಳನ್ನು ಮನದಟ್ಟು ಮಾಡಿಕೊಂಡ ಮೇಲೆ, ಅತಿ ಸೂಕ್ಷ್ಮವಾದ ಸಂಗತಿಗಳ ಕಡೆಗೆ ದೃಷ್ಟಿ ಹರಿಸಬೇಕು. ಯಾವುದೇ ಗುರು ತನ್ನ ಶಿಷ್ಯನ ಗಂಟಲಲ್ಲಿ ತನ್ನೆಲ್ಲ ಸಂಗೀತವನ್ನೂ ಎರಕ ಹೊಯ್ಯಲು ಸಾಧ್ಯವಿಲ್ಲ. ಎಲ್ಲ ಸಂಗತಿಗಳನ್ನೂ ಶಿಷ್ಯನ ಗಂಟಲಲ್ಲಿ ಇಳಿಸಲು ಸಾಧ್ಯವಿಲ್ಲ. ಶಿಷ್ಯನಾದವನು ಕುತೂಹಲದಿಂದ, ಗಮನವಿಟ್ಟು ಸಾಧ್ಯವಿದ್ದಷ್ಟು ಸಂಗತಿಗಳನ್ನು ಮನನ ಮಾಡಿಕೊಳ್ಳಬೇಕು. ಮನಸ್ಸಿನ ಪರದೆಯ ಮೇಲೆ ಈ ಸಂಗತಿಗಳು ಸ್ಪಷ್ಟ ಚಿತ್ರಗಳಾಗಬೇಕು, ಅಚ್ಚಳಿಯದಂತಹ ವಿನ್ಯಾಸಗಳಾಗಬೇಕು. ಬಹಳ ತಾಳ್ಮೆಯಿಂದ ಮತ್ತು ಜಾಗ್ರತೆಯಿಂದ ಗುರುವಿನಿಂದ ಸಂಗೀತ ಪಡೆದುಕೊಳ್ಳಬೇಕು. ಒಬ್ಬ ಒಳ್ಳೆಯ ಗುರುವಾದವನು ತನ್ನ ಶಿಷ್ಯನ ಪಾತ್ರತೆ ಹೆಚ್ಚಿದಂತೆ ಹೆಚ್ಚಿನ ವಿದ್ಯೆಯನ್ನು ಕೊಡುವುದರಲ್ಲಿ ಸಂದೇಹವೇ ಇಲ್ಲ.

ಶಾಸ್ತ್ರೀಯ ಸಂಗೀತ ಒಂದು ತಪಸ್ಸು ಎಂದು ನಂಬಿದರೆ ಮಾತ್ರ ಗಾಯಕನು ವಿನಮ್ರ ದೃಷ್ಟಿಯಿಂದ ತನ್ನ ಕ್ರಿಯೆಯನ್ನು ಕಾಣುವನು. ಒಂದು ವಿನೀತ ಭಾವದಿಂದ, ಆತ್ಮ ಸಮರ್ಪಣೆಯ ಭಾವದಿಂದ ಸಂಗೀತವನ್ನು ನೋಡಬೇಕು. ಈ ವಿದ್ಯೆಗೆ ಕೊನೆಯೇ ಇಲ್ಲದಿರುವುದರಿಂದ ಗಾಯಕನು ಸಾಧನೆ ಮಾಡುತ್ತಲೇ ಇರಬೇಕು. 'ನನಗೆ ಸಂಗೀತ ವಿದ್ಯೆ ಒಲಿಯಿತು, ಎಲ್ಲವೂ ಕರಗತವಾಯಿತು, ಲೀಲಾಜಾಲವಾಗಿ ಹಾಡಬಲ್ಲೆ, ಎಲ್ಲರೂ ಮೆಚ್ಚುತ್ತಾರೆ' ಎಂದು ತಿಳಿದರೆ ಆ ಸಂಗೀತದಲ್ಲಿ ಬರೀ ಅಹಂಕಾರ ತುಂಬಿದೆ ಎಂದು ಅರ್ಥ. ಆಗ ಆ ಸಂಗೀತದಲ್ಲಿ ಸೌಂದರ್ಯ ನಶಿಸಿ ಹೋಗುವುದು. ಅಂತಹ ವಿದ್ವತ್ತಿಗೆ ಯಾವ ಬೆಲೆಯೂ ಬಾರದು. ಸಂಗೀತ ಒಂದು ಓಲೈಸುವ ವಿಷಯ. ಅದರ ಮೇಲೆ ಸ್ವಾಮಿತ್ವ ಸ್ಥಾಪಿಸುವ ಪ್ರಶ್ನೆ ಏಳಲೇಬಾರದು. ಸಂಗೀತದ ಬಗೆಗೆ ವಿನಮ್ರ ಮನೋಭಾವನೆಯನ್ನು ಹೊಂದಿದ್ದಾದರೆ ಕಿಂಚಿತ್ ಸಾಫಲ್ಯ ದೊರೆಯಬಹುದು. 'ನೋಡಿ ನಾನು ಇಷ್ಟು ಸಾಧನೆಯನ್ನು ಮಾಡಿರುವೆ' ಎಂದು ತೋರಿಸುವುದು ಇರುವುದಿಲ್ಲ. ಎಳೆ ಮಗುವಿನ ಪರಿಶುದ್ಧ ಮನಸ್ಸಿನಂತೆ ಕಲಿಯುವವನ ನಡವಳಿಕೆ ಸಂಗೀತದಲ್ಲಿ ಇರಬೇಕು. ಸೊಕ್ಕು-ಸೆಟೆಗೆ ಯಾವ ಕಲೆಯಲ್ಲೂ ಸ್ಥಾನವಿಲ್ಲ. ಪ್ರಸಿದ್ಧಿಗಾಗಿ ಸಂಗೀತವನ್ನು ಆರಿಸಬಾರದು. ಅದೆಷ್ಟೋ ಮಹಾನ್ ಗಾಯಕರಿಗೆ ಪ್ರಸಿದ್ಧಿ ದೊರಕದೇ ಹೋಗಿದೆ. ಆದರೆ ಅವರಿಗೆ ಅದರ ಕೊರತೆ ಬಾಧಿಸಿದಂತೆ ಅನಿಸುವುದಿಲ್ಲ. ತಮ್ಮ ಸಾಧನೆಯನ್ನು ಅವರು ಪರಿಪಕ್ವ ಮಾಡುತ್ತಾ ಹೋಗಿದ್ದಾರೆ. ಸಂಗೀತ ವಿದ್ಯಾರ್ಥಿಗಳಿಗೆ ಸಂಗೀತದ ತೃಷೆ ಇರಬೇಕೇ ಹೊರತು ಪ್ರಸಿದ್ಧಿಯ ತೃಷೆಯಲ್ಲ. ಸಂಗೀತ ತೃಷೆಯೆಂದರೆ ಹೃದಯ-ಮನಸ್ಸು ಬಾಯಾರಿಕೆಯಿಂದ ಬಳಲಿರಬೇಕು. ಈ ಬಾಯಾರಿಕೆಯನ್ನು ಕಠಿಣ ಪರಿಶ್ರಮ ವಹಿಸಿ ನೀಗಿಸಿಕೊಳ್ಳುತ್ತೇನೆ ಎಂಬ ಪ್ರಬಲ ಇಚ್ಛೆ ಉಳ್ಳವರಾಗಿರಬೇಕು. ಆಗ ಮಾತ್ರ ಸಂಗೀತದಲ್ಲಿ ಏನಾದರೂ ಒಂದಿಷ್ಟು ಬೆಳಕು ಕಂಡೀತು.

ಸಂಗೀತ ಸಾಧನೆ ಮಾಡುವುದರಲ್ಲೇ ಒಂದು ಆನಂದವಿದೆ. ಪ್ರಸಿದ್ಧಿ ಇಂಥ ಆನಂದವನ್ನು ಕೊಡುವುದಿಲ್ಲ. ಈಗಿನ ಯುವ ಗಾಯಕರಲ್ಲಿ ಪ್ರಸಿದ್ಧಿ ಗಳಿಸುವುದು ಒಂದು ದೊಡ್ಡ ಸಮಸ್ಯೆಯಾಗಿಬಿಟ್ಟಿದೆ. ಪ್ರಶಸ್ತಿ ಗಿಟ್ಟಿಸುವುದು, ಕ್ಯಾಸೆಟ್-ಸಿ.ಡಿ. ಮಾಡಿಸುವುದು, ಬಣ್ಣಬಣ್ಣದ ಬ್ರೋಷರ್ಸ್ ಮಾಡಿಸುವುದು, ಬಿರುದುಗಳನ್ನು ಪಡೆಯುವುದು, ದಿಢೀರನೆ ಕಾರ್ಯಕ್ರಮ ಕೊಡುವುದು, ತಮಗೇ ಸಾಕಷ್ಟು ವಿದ್ಯೆ ಇಲ್ಲದಾಗಲೂ ಶಿಷ್ಯರನ್ನು ಹೊಂದುವುದು, ಇಂಥದರಲ್ಲಿ ತಮ್ಮ ಶ್ರಮವನ್ನು ವ್ಯಯಿಸಿದರೆ ಸಂಗೀತದಲ್ಲಿ ಮುಳುಗುವುದು ಯಾವಾಗ? ಸಂಗೀತದ ಗೀಳು ಹತ್ತಬೇಕೇ ವಿನಃ, ಈ ಪ್ರಸಿದ್ಧಿಯ ಹಪಹಪಿಯಲ್ಲ. ನನ್ನ ಗುರುವಿನ ಮಾತಿನಲ್ಲಿ ಹೇಳುವುದಾದರೆ, 'ನಾಗರ ಹಾವಿನ ವಿಷ ಏರಿದಂತೆ ಸಂಗೀತ ನಮ್ಮನ್ನಾವರಿಸಬೇಕು.' ಪ್ರಸಿದ್ಧಿ ಬಾರದೆ ಹೋದರೂ ಚಿಂತೆಯಿಲ್ಲ, ಸಾಧನೆ ಮಾಡುತ್ತಲೇ ಇರುವೆ ಎಂಬ ಛಲ ಬೇಕು. ಈಗಿನ ದಿನಮಾನಗಳು ಸ್ಪರ್ಧಾತ್ಮಕ ದಿನಗಳೆಂದು ಅನ್ನುತ್ತೇವೆ. ಆದರೆ ನಿಜವಾದ ವಿದ್ಯೆಯಲ್ಲಿ ಸ್ಪರ್ಧೆ ಇರುವುದಿಲ್ಲ. ಸಂಗೀತ ಸ್ಪರ್ಧಾತ್ಮಕ ವಿಷಯವಲ್ಲ. ವಿದ್ಯೆ ತಲೆ ಬಾಗಿಸುವುದರಲ್ಲಿದೆ. ಇಲ್ಲಿ ಸೋಲುಗಳೇ ಹೆಚ್ಚು, ಗೆಲುವುಗಳು ಅಪವಾದ. ಸಂಗೀತದ ನಿಜವಾದ ತಿಳುವಳಿಕೆ ಆದರೆ, ದೇವರಿಗೂ ಪ್ರಿಯವಾದ ಸಂಗೀತದ ಆನಂದದ ಕಿಂಚಿತ್ ಅನುಭವವಾದರೆ, ಬೇರಿನ್ನೇನೂ ಬೇಕಾಗುವುದಿಲ್ಲ. ಸಂಗೀತವು ಕೊಟ್ಟಷ್ಟು ಆನಂದವನ್ನು ಪ್ರಸಿದ್ಧಿ ಕೊಡಲಾರದು. ತಾಮ್ರ-ಹಿತ್ತಾಳೆ-ಬೆಳ್ಳಿ-ಬಂಗಾರದ ಪದಕಗಳು, ಫಲಕಗಳು ಸಂಗೀತದ ಆನಂದವನ್ನು ಅಳೆಯಬಲ್ಲವೆ? ಒಂದು ಅತ್ಯುನ್ನತ ಪ್ರಶಸ್ತಿ ನಿಮ್ಮ ಸಂಗೀತವನ್ನು ಹೆಚ್ಚುಗೊಳಿಸಬಹುದೇ ಅಥವಾ ಕಡಿಮೆ ಮಾಡಬಹುದೆ? ಅವುಗಳು ನಿಜವಾದ ಸಂಗೀತವನ್ನು ಹೆಚ್ಚಾಗಲೀ, ಕಡಿಮೆಯಾಗಲೀ ಮಾಡಲಾರವು. ಅವುಗಳಿಂದ ಒಬ್ಬ ಕಲಾಕಾರನ ಸಂಗೀತಕ್ಕೆ ಹೆಚ್ಚಿನ ಮೆರುಗು ಬರುವುದಿಲ್ಲ. ಆತನ ಅಥವಾ ಆಕೆಯ ಜಾಗೃತ ಸಾಧನೆಗೆ ಮಹತ್ವವಿದೆ. ಅದರಿಂದ ಆ ಸಂಗೀತಕ್ಕೆ ಒಂದು ಅಲೌಕಿಕ ಮೆರುಗು ಬರುತ್ತದೆ. ❇

### ಸ್ವಾಮಿ ಹರಿದಾಸರು

ತಾನಸೇನನ ಗುರುಗಳಾಗಿದ್ದ ಸ್ವಾಮಿ ಹರಿದಾಸರು ೧೬ನೇ ಶತಮಾನದಲ್ಲಿ ಬದುಕಿದ್ದ ಶ್ರೇಷ್ಠ ಸಂಗೀತಗಾರರು. ಧ್ರುಪದ್ ಶೈಲಿಯ ಸಂಗೀತಕ್ಕೆ ಹೆಸರಾದವರು ಅವರು. ತಾನಸೇನನು ಅಷ್ಟೊಂದು ವಿಖ್ಯಾತಿ ಹೊಂದಲು ಬಹುಪಾಲು ಹರಿದಾಸರೇ ಕಾರಣ ಎನ್ನುತ್ತಾರೆ. ಶ್ರೀಕೃಷ್ಣನ ಭಕ್ತರಾಗಿದ್ದ ಅವರು ಬೃಂದಾವನದ ನಿಧುವನದಲ್ಲೇ ಆಶ್ರಮ ಕಟ್ಟಿಕೊಂಡು ಸಾಧನೆ, ಭಜನೆಗಳೊಂದಿಗೆ ತಮ್ಮ ಜೀವನದ ಕೊನೆಯವರೆಗೂ ಜೀವಿಸಿದರು.

# ಭಾರತೀಯ ಸಂಗೀತ ಮತ್ತು ನೃತ್ಯಕಲೆಗಳಲ್ಲಿ ಅಧ್ಯಾತ್ಮ

ಡಾ. ಕಬ್ಬಿನಾಲೆ ವಸಂತ ಭಾರದ್ವಾಜ

ಭಾರತೀಯ ಕಲಾಪ್ರಕಾರಗಳಲ್ಲೆಲ್ಲ ಹಾಸುಹೊಕ್ಕಾಗಿರುವ ಸಂಗೀತವು ತನ್ನದೇ ಆದ ಆಧ್ಯಾತ್ಮಿಕ ಆಯಾಮದಿಂದಾಗಿ ನಮ್ಮ ದೇಶದ ಜನಜೀವನದ ಸಾಂಸ್ಕೃತಿಕ ಹಿರಿಮೆಯನ್ನು ಹೆಚ್ಚಿಸಿದೆ. ಈ ಕುರಿತು ಇಲ್ಲಿ ವಿಶ್ಲೇಷಿಸಿರುವ ಲೇಖಕರು ನಿವೃತ್ತ ಬ್ಯಾಂಕ್ ಅಧಿಕಾರಿಗಳು. ಅಷ್ಟಾವಧಾನಿಗಳಾಗಿ ಪ್ರಸಿದ್ಧರಾಗಿರುವ ಇವರು ಕಲೆ, ನಾಟಕ, ಯಕ್ಷಗಾನ ಮೊದಲಾದ ಕಲೆಗಳನ್ನು ಕುರಿತು ಆಳವಾದ ಅರಿವನ್ನು ಹೊಂದಿದ್ದು, ಸಂಸ್ಕೃತ, ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕುರಿತು ೫೦ಕ್ಕೂ ಹೆಚ್ಚು ಪುಸ್ತಕಗಳನ್ನು ತುಳು ಮತ್ತು ಕನ್ನಡದಲ್ಲಿ ಬರೆದಿದ್ದಾರೆ.



ನಮ್ಮ ದೇಶದ ಸಾಹಿತ್ಯ ಮತ್ತು ಕಲಾಮೀಮಾಂಸೆಯ ಹಿನ್ನೆಲೆಯಲ್ಲಿ ಅಧ್ಯಾತ್ಮದ ಎಳೆಗಳು ಹಾಸುಹೊಕ್ಕಾಗಿರುವುದು ಅದರ ಅನನ್ಯತೆಗೆ ಸಾಕ್ಷಿ. ನಾವು ಸಂಗೀತ ಮತ್ತು ನೃತ್ಯಕಲೆಗಳನ್ನು ಮನೋರಂಜನೆಗಷ್ಟೇ ಸೀಮಿತಗೊಳಿಸಿಕೊಳ್ಳದೆ ಮನೋವಿಕಾಸಕ್ಕಾಗಿ ಬಳಸಿಕೊಂಡಿರುವುದು ಮಹತ್ವದ ಸಂಗತಿ. 'ಕಲೆಗಾಗಿ ಕಲೆ' ಎನ್ನುವುದು ನಮ್ಮ ಚಿಂತನೆಯಲ್ಲ. ಪ್ರಾಚೀನ ಕಾಲದಿಂದಲೂ ಅನುಭಾವದ ನೆಲೆಗಳಲ್ಲಿ ನಮ್ಮ ಹಿರಿಯರು ಯೋಚಿಸುತ್ತಾ ಬಂದಿರುವುದು ಇದಕ್ಕೆ ಕಾರಣ ಎನ್ನಬಹುದು. ಭಾರತೀಯ 'ರಸ ಸಿದ್ಧಾಂತ'ವೆನ್ನುವುದು ಲೌಕಿಕಪ್ರಪಂಚವನ್ನು ಮರೆತು ಲೋಕೋತ್ತರವಾದ ಸ್ತರದಲ್ಲಿ ಮನಸ್ಸನ್ನು ತನ್ಮಯಗೊಳಿಸುವುದೇ ಆಗಿದೆ. 'ಭವ'ದಿಂದ ದೂರವಾಗಿ 'ಶಿವ'ವಾಗುವುದು ರಸಸೂತ್ರದ ಸಾರಸರ್ವಸ್ವ. ಆದುದರಿಂದಲೇ ಭಾರತೀಯ ಸಾಹಿತ್ಯ, ಸಂಗೀತ, ನೃತ್ಯ ಮುಂತಾದವುಗಳಲ್ಲಿ ಅಧ್ಯಾತ್ಮದ ಅನುಸಂಧಾನವಿದೆ ಎನ್ನಬಹುದು.

ಭಾರತೀಯ ಸಂಗೀತ ಮತ್ತು ಅದನ್ನು ಆಧರಿಸಿದ ನೃತ್ಯಕಲೆಗಳು ಪ್ರಾದೇಶಿಕವಾಗಿ ವಿಭಿನ್ನವಾದರೂ ಅವುಗಳ ಆಂತರ್ಯದಲ್ಲಿ ಮನೋವಿಕಾಸದ ಉಜ್ವಲ ಕಾಂತಿಯಿದೆ. ಅವುಗಳ ಹಿನ್ನೆಲೆಯಲ್ಲಿರುವ ಸಾಹಿತ್ಯದ ಮೂಲದ್ರವ್ಯವೇ ಅದಕ್ಕೆ ಮುಖ್ಯಕಾರಣ ಎನ್ನಬಹುದು. ಸಾಹಿತ್ಯದಲ್ಲಿ ಅಧ್ಯಾತ್ಮದ ವಸ್ತುನಿರ್ದೇಶನ ಇಲ್ಲದಿದ್ದಾಗ ಸಂಗೀತ ನೃತ್ಯಕಲೆಗಳಲ್ಲಿ ಅದು ಸುಳಿದಾಡುವುದು ಸಾಧ್ಯವಿಲ್ಲ. ನಮ್ಮ ಭರತನಾಟ್ಯ, ಕೂಚಿಪುಡಿ, ಕಥಕ್ಕಳಿ, ಒಡಿಸ್ಸಿ, ಯಕ್ಷ



ಗಾನ ಮುಂತಾದ ನೃತ್ಯಕಲೆಗಳು ಸಂಗೀತದ ಸಾಹಚರ್ಯ ದಿಂದಲೇ ಬೆಳೆದುಬಂದಿವೆ. ಆ ಪದ್ಯಸಾಹಿತ್ಯದಲ್ಲಿ ಅಧ್ಯಾತ್ಮದ ಗಂಧವಿರುವುದರಿಂದಲೇ ಸಂಗೀತ ಮತ್ತು ಕಲೆಗಳಲ್ಲಿ ಅದು ಪ್ರತಿಫಲಿಸಿರುವುದು. ಕನ್ನಡದ ಪುರಂದರದಾಸ, ಕನಕದಾಸಾದಿಗಳು, ತೆಲುಗಿನ ತ್ಯಾಗರಾಜಾದಿಗಳು, ಮರಾಠಿ ಸಂತರು, ತಮಿಳು ಆಳ್ವಾರರು ಮೊದಲಾದವರ ಸಂಗೀತ ಕೃತಿಗಳಲ್ಲಿ ಭಗವಂತನ ಸ್ತುತಿ, ಲೀಲಾಮಹಿಮೆಗಳ ವರ್ಣನೆಯೊಂದಿಗೆ ಸಾಂಸಾರಿಕ ವೈರಾಗ್ಯ, ದಾರ್ಶನಿಕ ನೋಟ, ಜೀವನಮೌಲ್ಯ ಮುಂತಾದವುಗಳ ಪ್ರತಿಪಾದನೆ ಇದೆ. ಅವುಗಳಲ್ಲಿ ಉಪನಿಷತ್ತಿನ ಅನೇಕ ವಿಚಾರಗಳು ಸರಳವಾದ ಭಾಷೆಯಲ್ಲಿ ಮೂಡಿನಿಂತಿರುತ್ತವೆ. ಆದುದರಿಂದಲೇ ಸಂಗೀತ ಮತ್ತು ನೃತ್ಯಕಲೆಗಳಲ್ಲಿ ಭಾರತೀಯ ಅಧ್ಯಾತ್ಮದ ಸಹಜ ಸುಂದರವಿಲಾಸವನ್ನು ಅನುಭವಿಸಲು ಸಾಧ್ಯವಾಗುತ್ತದೆ.

### ಹೃದಯಕಮಲವೆಂಬ ಹರಿವಾಣ

ನಮ್ಮ ಯಕ್ಷಗಾನ ಕವಿಯಾದ ಪಾರ್ತಿಸುಬ್ಬ ಎಂಬವನು ರಚಿಸಿದ **'ಪಂಚವಟಿ ರಾಮಾಯಣ'** ಪ್ರಸಂಗ ಸಾಹಿತ್ಯದಲ್ಲಿ ಭಗವಂತನ ಸ್ತುತಿಯೊಂದು ಹೀಗೆ ಮೂಡಿದೆ:

**ಹೃದಯಕಮಲವೆಂಬ ಹರಿವಾಣದೊಳು ದಿವ್ಯ**
**ಸದಮಲ ಭಕ್ತಿರಸದ ತೈಲದಿ ।**
**ಪದುಮನಾಭನ ನಾಮವೆಂಬ ಜ್ಯೋತಿಯ ತಂದು**
**ಮುದದಿಂದ ಜ್ಞಾನದಾರತಿ ಎತ್ತಿರೆ ॥**

ಇದೊಂದು ಮನೋಹರವಾದ ಪ್ರಾರ್ಥನಾಪದ್ಯ. ಭಗವಂತನಿಗೆ ಭೌತಿಕವಾದ ಪೂಜೆಯನ್ನು ಮಾಡುವುದಕ್ಕಿಂತಲೂ ಮುಖ್ಯವಾಗಿ ಸಾಂಕೇತಿಕವಾದ ಆರತಿಯನ್ನು ಬೆಳಗುವ ಅರ್ಥಸಂಪನ್ನತೆ ಇಲ್ಲಿಯದು. ಭಕ್ತನ ಹೃದಯಕಮಲವೇ ಹರಿವಾಣ; ಭಕ್ತಿರಸವೇ ತೈಲಧಾರೆ. ಹರಿನಾಮವೇ ಜ್ಯೋತಿ ಹಾಗೂ ಜ್ಞಾನಾರ್ಜನೆಯೇ ಮಂಗಳಾರತಿ. ಇದರಲ್ಲಿ ತಮಿಳಿನ ಭೂದತ್ತಾಳ್ವಾರ್ ಎಂಬ ಭಕ್ತ ಕವಿ ಹಾಡಿದ **'ಇರಂಡಾಂ ತಿರುವಂದಾದಿ'** ಎಂಬ ಪ್ರಬಂಧದ ಭಾವಾನುವಾದ ಕಾಣಿಸುತ್ತದೆ. ಸಂಗೀತ ಮತ್ತು ನೃತ್ಯಗಳೂ ಈ ಅರ್ಥದಲ್ಲಿ ಭಗವಂತನ ಪೂಜೆಯಾಗಬಲ್ಲವು.

**'ರುಕ್ಮಾಂಗದ ಚರಿತ್ರೆ'** ಎಂಬ ಯಕ್ಷಗಾನದಲ್ಲಿ ಇಂತಹುದೇ ಆದ ಇನ್ನೊಂದು ಪದ್ಯವಿದೆ.

**ಡಿಂಬ ದೇವಾಲಯದೊಳಗೆ । ಹಂಸ**
**ನೆಂಬ ನಿನ್ನನು ಭಕ್ತಿಯೊಳಗೆ ॥**
**ತುಂಬಿದಜ್ಞಾನನಿರ್ಮಾಲ್ಯವ ತೆಗೆಯುತ್ತ ।**
**ಸಂಭ್ರಮದೊಳು ಪೂಜಿಸುವೆ ನಿತ್ಯಾನಂದನೆ ॥**

**ಪರಮಶ್ರದ್ಧಾನದಿಯೊಳಗೆ । ಮೆರೆ**
**ದಿರುವ ಚಿತ್ತದ ಜಲದೊಳಗೆ ॥**
**ಸರಸಿಜಾಂಬಕನಭಿಷೇಕವ ಗೈಸುತ್ತ ।**
**ಚರಣಭಕ್ತಿಯ ಗಂಧ ಭಜನಾಕ್ಷತವೀವೆ ॥**

ಇಲ್ಲಿ **'ದೇಹೋ ದೇವಾಲಯ ಪ್ರೋಕ್ತಃ ಜೀವೋ ಹಂಸಃ ಸನಾತನಃ'** ಎಂಬ ಆರ್ಷೇಯ ಚಿಂತನೆಯಿದೆ. ದೇಹವೆಂಬ ದೇಗುಲದಲ್ಲಿ ಹಂಸರೂಪಿಯಾದ ಭಗವಂತನನ್ನು ಆರಾಧಿಸುವ ಮಾನಸಪೂಜೆಯಿದು. ಅಜ್ಞಾನವೆಂಬ ನಿರ್ಮಾಲ್ಯವನ್ನು ಮೊದಲು ತೆಗೆದು, ಶ್ರದ್ಧೆಯೆಂಬ ನದಿಯಲ್ಲಿರುವ ಚಿತ್ತಜಲದಲ್ಲಿ ಅಭಿಷೇಕ ಮಾಡಿ, ಭಕ್ತಿಯೆಂಬ ಗಂಧ-ಭಜನೆ-ಅಕ್ಷತೆಗಳನ್ನು ಸಮರ್ಪಿಸುವುದು ಇಲ್ಲಿಯ ಪೂಜಾಕ್ರಮ. ಅನಂತರ ಸಮಾಧಿಯ ಹಂತವನ್ನೇರುವುದೇ ಪುಷ್ಪಾರ್ಚನೆ. ಆನಂದಮಯಕೋಶದ ವಿಹಾರವೇ ಧೂಪಾರತಿ. ಉತ್ತಮ ನಡೆನುಡಿಗಳಿಂದ ಸಂಚಯನಮಾಡಿದ ಸುಕೃತಗಳೇ ಫಲಸಮರ್ಪಣೆ. ಆತ್ಮಜ್ಯೋತಿಯನ್ನು ಬೆಳಗುವುದೇ ಮಂಗಳ ನೀರಾಜನದ ಮಹಾಪೂಜೆ! ಭಾರತೀಯ ಅದ್ವೈತ



ವೇದಾಂತವನ್ನು ಇದಕ್ಕಿಂತ ಚೆನ್ನಾಗಿ ಹೇಳಲು ಸಾಧ್ಯವಿಲ್ಲ ಎನಿಸುತ್ತದೆ.

### ಬಯಲು ಆಲಯದೊಳಗೆ

ಭಾರತೀಯ ಅಧ್ಯಾತ್ಮವನ್ನು ಸರಳವಾದ ಉದಾಹರಣೆಗಳಿಂದ ಕಟ್ಟುವ ಕೆಲಸವನ್ನು ದಾಸಸಾಹಿತ್ಯ ಮಾಡಿದೆ. ಈ ದೆಸೆಯಲ್ಲಿ ಕನಕದಾಸರ ಪ್ರಸಿದ್ಧ ಪದ್ಯವೊಂದನ್ನು ಇಲ್ಲಿ ಉದಾಹರಿಸಬಹುದು.

ಬಯಲು ಆಲಯದೊಳಗೊ ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥

ಈ ಪ್ರಪಂಚವನ್ನು ಆವರಿಸಿರುವ ಮಾಯಾಸ್ವರೂಪ ಎಂತಹುದು ಎಂಬ ತಾತ್ತ್ವಿಕ ಜಿಜ್ಞಾಸೆ ಇಲ್ಲಿಯದು. ಆ ಮಾಯೆಯ ಒಳಗೆ ದೇವರಿದ್ದಾನೆಯೋ ಅಥವಾ ದೇವರೊಳಗೆ ಮಾಯೆಯಿದೆಯೋ ಎಂಬ ಪ್ರಶ್ನೆಯ ಮೂಲಕ ಈ ಚಿಂತನೆ ಮೊದಲಾಗುತ್ತದೆ. ಅದನ್ನು ವಿವರಿಸುವುದಕ್ಕೆ ಬಯಲು-ಆಲಯ, ನಯನ-ಬುದ್ಧಿ, ಸವಿ-ಸಕ್ಕರೆ, ಜಿಹ್ವೆ-ಮನಸು, ಕುಸುಮ-ಗಂಧ ಮುಂತಾದ ದೃಷ್ಟಾಂತಗಳನ್ನು ಕನಕದಾಸರು ನಮ್ಮ ಮುಂದೆ ತರುತ್ತಾರೆ. ಕೊನೆಗೆ ಅವರು 'ಉಸುರಲೆನ್ನಳವಲ್ಲ, ಎಲ್ಲ ನಿನ್ನೊಳಗೊ' ಎಂದು ಭಗವಂತನಿಗೆ ಶರಣಾಗುತ್ತಾರೆ. ನವರಸಗಳ ಕೊನೆಯ ಶಾಂತರಸ ಇಂತಹ ಪ್ರಪತ್ತಿಯ ನಿಲ್ದಾಣವೆಂಬುದನ್ನು ಮರೆಯಬಾರದು.

ಭಗವದ್ಗೀತೆಯ ಗಹನವಾದ ಅಧ್ಯಾತ್ಮವನ್ನೂ ನಮ್ಮ ಸಂಗೀತ ಕಲೆಗಳು ತಿಳಿಯಹೇಳುತ್ತವೆ. 'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ' ಮುಂತಾದ ಶ್ಲೋಕಗಳಲ್ಲಿ ಜೀವನದ ನಶ್ವರತೆಯನ್ನು ಹೇಳಲಾಗಿದೆ. ಇದನ್ನೇ ಪುರಂದರದಾಸರು ಶಕುನದ ಹಕ್ಕಿಯ ಹಾಡಿನ ಮೂಲಕ 'ಹಳೇ ವಸ್ತ್ರವ ಬಿಸಾಡಣ್ಣ, ಹೊಸ ವಸ್ತ್ರವ ನಿನಗೆ ದೇವರು ಕೊಟ್ಟಾನು' ಎಂದು ಸೂಚಿಸುತ್ತಾರೆ. ಆ ಹಾಡಿನಲ್ಲೇ 'ಒಂದೇ ಹಕ್ಕಿ ಹಣ್ಣು ತಿನ್ನುತೈತೆ' ಎಂದು ಹೇಳಿ, 'ದ್ವಾ ಸುಪರ್ಣಾ ಸಯುಜಾ ಸಖಾಯ' ಎಂಬ ಮುಂಡಕೋಪನಿಷತ್ತಿನ ಸೂಕ್ತಿಯನ್ನು ಕನ್ನಡಿಸುತ್ತಾರೆ!

ಕನ್ನಡದ ಕೆಲವು ತತ್ತ್ವಪದಕಾರರ ರಚನೆಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಶಿಶುನಾಳ ಷರೀಫರಂತಹ ತತ್ತ್ವಪದಕಾರರ ಪ್ರತಿಮಾವಿಧಾನ ಅಧ್ಯಾತ್ಮಬೋಧೆಗೆ ಹೇಳಿಮಾಡಿಸಿದ ಹಾಗಿದೆ. ಅವರು ಹೇಳುವ ಹಾವು, ಹುಚ್ಚುನಾಯಿ, ಕೋಡಗ, ಕೋಳಿ, ಚೇಳು, ಮುದುಕಿ ಮುಂತಾದ ರೂಪಕಗಳು ಅನ್ಯಾರ್ಥವನ್ನು ಸಮರ್ಥವಾಗಿ ಧ್ವನಿಸುತ್ತವೆ. ಆ ಮೂಲಕ ಅನುಭಾವದ ಅರ್ಥಲೋಕವನ್ನು ಅನಾವರಣಮಾಡುತ್ತವೆ.



ಸೋರುತಿಹುದು ಮನೆಯ ಮಾಳಿಗಿ । ಅಜ್ಞಾನದಿಂದ
ಸೋರುತಿಹುದು ಮನೆಯ ಮಾಳಿಗಿ ॥

ಸೋರುತಿಹುದು ಮನೆಯ ಮಾಳಿಗಿ
ದಾರು ಗಟ್ಟಿ ಮಾಳ್ಪರಿಲ್ಲ
ಕಾಳಕತ್ತಲೆಯೊಳಗೆ ನಾನು
ಮೇಲಕೇರಿ ಹೋಗಲಾರೆ ॥

ಮಾನವನ ದೇಹವನ್ನೇ ಇಲ್ಲಿ ಮನೆಯ ಮಾಳಿಗೆಯನ್ನಾಗಿ ಹೇಳಲಾಗಿದೆ. ಪುರಂದರದಾಸರ ಪ್ರಸಿದ್ಧ ಕೀರ್ತನೆ 'ಮಾಡು ಸಿಕ್ಕದಲ್ಲಾ ಮಾಡಿನ ಗೂಡು ಸಿಕ್ಕದಲ್ಲಾ' ಎನ್ನುವುದೂ ಇದೇ ರೀತಿಯ ಅರ್ಥವುಳ್ಳ ರಚನೆ.

### ಯಾರಿಗೆ ಯಾರುಂಟು ಎರವಿನ ಸಂಸಾರ

ಈ ಸಂಸಾರದ ಮೇಲಿನ ವ್ಯಾಮೋಹ ಇರುವಷ್ಟು ಕಾಲ ಅಧ್ಯಾತ್ಮದ ನಿಜವಾದ ರುಚಿ ಹತ್ತುವುದಿಲ್ಲ. ಅದಕ್ಕಾಗಿಯೇ ಪುರಂದರದಾಸರು 'ಯಾರಿಗೆ ಯಾರುಂಟು ಎರವಿನ ಸಂಸಾರ' ಎಂದು ಹಾಡಿದರು!

ಮಂಚ ಬಾರದು ಮಡದಿ ಬಾರಳು
ಕಂಚುಕನ್ನಡಿ ಬಾರವು ।
ಸಂಚಿತಾರ್ಥದ ದ್ರವ್ಯ ಬಾರದು
ಮುಂಚೆ ಮಾಡಿರೊ ಕರ್ಮವ ॥

ಎಂಬ ಸಾಲುಗಳು ರಾಗತಾಳಗಳ ಮೂಲಕ ನಮ್ಮ ಹೃದಯವನ್ನು ತಟ್ಟುತ್ತವೆ. 'ಆರು ಹಿತವರು ನಿನಗೆ ಈ ಮೂವರೊಳಗೆ? ನಾರಿಯೋ ಧಾರಿಣಿಯೊ ಬಲುಧನದ ಸಿರಿಯೊ?' ಎಂದು ಪ್ರಶ್ನೆಮಾಡಿ ಭೋಗಭಾಗ್ಯಗಳು ಶಾಶ್ವತವಲ್ಲ ಎನ್ನುವುದನ್ನು ಸಾರಿ ಹೇಳುತ್ತವೆ. ನಿಜಗುಣ ಶಿವಯೋಗಿಗಳೆಂಬ ಶರಣರ ರಚನೆಯೊಂದು ಆತ್ಮಸಂಬೋಧನೆಯ ರೂಪದಲ್ಲಿ ನಮ್ಮನ್ನು ಹೀಗೆ ಎಚ್ಚರಿಸುತ್ತದೆ:

ಕೋಗಿಲೆ ಚೆಲ್ವ ಕೋಗಿಲೆ ಮುದ್ದು
ಕೋಗಿಲೆ ಜಾಣ ಕೋಗಿಲೆ ॥

ಹಿಂದೆ ತಪದೊಳೀಶ ನೊಂದಿರುತಿರಲೆಚ್ಚು
ಬೆಂದ ಕಾಮನ ಬಿಟ್ಟು ಕೋಗಿಲೆ



ಬಂದು ಬೇಗದಿ ಬಾಲೇಂದುಧರನ ಕೂಡಿ
ಕುಂದದೆ ನೀ ಬಾಳು ಕೋಗಿಲೆ ॥

ಇಲ್ಲಿ ಕೋಗಿಲೆಯು ಆತ್ಮಾರ್ಥದಲ್ಲಿ ಬಳಕೆಯಾಗಿದೆ. ಮನ್ಮಥನೊಂದಿಗೆ ಇದ್ದ ಕೋಗಿಲೆಯನ್ನು ಶಿವನೊಂದಿಗೆ ಇರಲು ಹೇಳುವ ಮೂಲಕ ಭೋಗದ ನಶ್ವರತೆಯನ್ನು ಅರ್ಥವಿಸಿಕೊಂಡು ಆತ್ಮವು ಭಗವಂತನನನ್ನು ಚಿಂತಿಸಬೇಕೆಂಬ ಆಶಯ ಇಲ್ಲಿದೆ. ಯಕ್ಷಗಾನದ **'ವಾಲಿಸಂಹಾರ'**ದಲ್ಲಿ ಶ್ರೀರಾಮನ ಬಾಣಕ್ಕೆ ಎದೆಯನ್ನು ಕೊಟ್ಟ ವಾಲಿಯು ತನ್ನ ತಪ್ಪಿನ ಅರಿವಾದ ಮೇಲೆ ಮಾಡುವ ಆತ್ಮನಿವೇದನೆಯಲ್ಲಿ ಸಂಸಾರವೆನ್ನುವುದು ಒಂದು ಕನಸಿನಂತೆ ಎಂಬ ಮಾತು ಬರುತ್ತದೆ.

ಕರುಣವಿದ್ದರೆ ಸಾಕು । ಪದಾಬ್ಜದ
ಕರುಣವಿದ್ದರೆ ಸಾಕು ॥

ಭೂತಪಂಚಕ ದೇಹ ಏತಕಿಷ್ಟರ ಮೋಹ ।
ಚೇತನಾತ್ಮಕ ನಿಮ್ಮ ನೀತಿ ಪದಾಬ್ಜದ ॥

ತಂದೆ ತಾಯಿಗಳೆಂಬುದೊಂದು ಸ್ವಪ್ನವಿಚಾರ ।
ಎಂದೂ ನಿನ್ನ ಪದಾರವಿಂದ ಪೂಜಿಸುವಂಥ ॥

ಈ ಶರೀರವು ಪಂಚಭೂತಗಳಿಂದ ಸೃಷ್ಟಿಯಾಗಿರುವುದರಿಂದ ಮರಣದ ಬಳಿಕ ಅದು ಆ ವಸ್ತುಗಳಲ್ಲೇ ಸೇರಿಕೊಳ್ಳುವುದೆಂದು ಹೇಳುವ ಮೂಲಕ ದೇಹಾಭಿಮಾನವನ್ನು ತೊರೆಯಬೇಕೆಂಬ ಬೋಧೆಯಿಲ್ಲಿದೆ. **'ಗದಾಪರ್ವ'** ವೆಂಬ ಯಕ್ಷಗಾನ ಪ್ರಸಂಗದಲ್ಲಿ ಹದಿನೆಂಟನೆಯ ದಿನದ ಕುರುಕ್ಷೇತ್ರ ರಣಾಂಗಣದಲ್ಲಿ ತನ್ನನ್ನು ಭೇಟಿಯಾದ ಸಂಜಯನೊಂದಿಗೆ ಏಕಾಂಗಿಯಾದ ಕೌರವನು ಹೇಳುವ ಅಧ್ಯಾತ್ಮದ ಮಾತು ನಮ್ಮನ್ನು ಸೆಳೆಯುತ್ತದೆ.

ಆದೊಡೆಲೆ ಸಂಜಯನೆ ನೀಕೇ
ಳಾದಿ ಸುಕೃತವಿಶಾಲ ವನವದು
ಸೀದು ಪೋದರೆ ಜಯಸಿರಿಯು ಜಂಗುಳವ ಜಾರಿದರೆ ।
ಆದರಿಸುವವರಾರು ವಿಧಿ ಬರೆ
ದಾದಿಯಕ್ಷರಕಿಂದು ಪ್ರತಿಕೂ
ಲಾದಿಯುಂಟೇ ಎಂದು ಕಂಬನಿದುಂಬುತುಸುರಿದನು ॥

ಇದು ಪುರುಷಪ್ರಯತ್ನವನ್ನೇ ಬಲವಾಗಿ ನಂಬಿ ಅನ್ಯಾಯಗಳನ್ನು ಮಾಡುತ್ತಲೇ ಮೆರೆದು ಅಧಃಪತನಕ್ಕೆ ಜಾರಿದ ದುರ್ಯೋಧನನ ಅಂತರಂಗ! 'ಪುಣ್ಯವು ಕ್ಷೀಣವಾದ ಬಳಿಕ, ಜಯಲಕ್ಷ್ಮಿಯು ಜಾರಿಹೋದ ಬಳಿಕ ಈ ಪ್ರಪಂಚದಲ್ಲಿ ಯಾರೂ ಆದರಿಸುವವರಿಲ್ಲ! ಮನುಷ್ಯನ ಹಣೆಯಲ್ಲಿ ವಿಧಿಯು ಬರೆದ ಬರೆಹಕ್ಕೆ ಯಾವುದೂ ಎದುರಿಲ್ಲ!' ಎಂಬ ನಿತ್ಯಸತ್ಯವನ್ನು ಸಂಗೀತ ನೃತ್ಯಗಳ ದೃಶ್ಯನಿರ್ಮಾಣದ ಮೂಲಕ ಜನಮಾನಸಕ್ಕೆ ಸಂವಹನ ಮಾಡುವುದು ಭಾರತೀಯ ಕಲಾಪ್ರೌಢಿಮೆ!

## ತಾಯಿಗೆ ಬಾಯಲ್ಲಿ ಜಗವನ್ನೆ ತೋರಿದ

ನಾವೆಲ್ಲ ನೋಡುವ ಭರತನಾಟ್ಯದಲ್ಲಿ ಈ ದೃಶ್ಯ ಇದ್ದೇ ಇರುತ್ತದೆ. ಅಲ್ಲಿ ಬಾಲಕೃಷ್ಣನನ್ನು ಯಶೋದಾಮಾತೆ ಮಗುವೆಂದು ಆಡಿಸುತ್ತಾಳೆ! ಆ ಸಂಗೀತದ ರಾಗಾಲಾಪನೆಯಲ್ಲಿ ನಾವು ಪರವಶರಾಗಿಬಿಡುತ್ತೇವೆ. ಅಥವಾ ಆ ಸುಂದರ ನೃತ್ಯಲೋಕದಲ್ಲಿ ಮೈ ಮರೆತುಬಿಡುತ್ತೇವೆ. ಮುದ್ದುಮಗುವಾದ ಶ್ರೀಕೃಷ್ಣಪರಮಾತ್ಮನು ಬಾಯಿತೆರೆದು ಬ್ರಹ್ಮಾಂಡವನ್ನು ತೋರಿಸಿದಾಗ ರೋಮಾಂಚಿತರಾಗುತ್ತೇವೆ. ಆ ಮೂಲಕ ನಾವು ಯಃಕಶ್ಚಿತ್ತರೆಂಬ ಭಾವನೆ ಮೊಳಕೆಯೊಡೆಯುತ್ತದೆ. ಭಗವಂತನು ಅಣುರೇಣು ತೃಣಕಾಷ್ಠ ಪರಿಪೂರ್ಣನೆಂಬುದು ಭಾಸವಾಗುತ್ತದೆ. **'ಪೋಗದಿರೆಲೋ ರಂಗ'** ಎಂಬ ಸಂಗೀತವನ್ನು ಆಲಿಸುತ್ತಾ 'ದೊರಕದ ವಸ್ತುವು ದೊರಕಿತು ತಮಗೆ' ಎಂದು ಗೋಪಿಯರು ಸಂತೋಷತುಂದಿಲರಾಗುವುದನ್ನು ನೋಡಿ ನಾವೂ ಆನಂದಿಸುತ್ತೇವೆ. ಇಲ್ಲಿರುವ ವಸ್ತು ಸಾಮಾನ್ಯವಾದ ಲೌಕಿಕಸಾಮಗ್ರಿಯಲ್ಲ , ಅದು ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಪರಬ್ರಹ್ಮವಸ್ತು!

ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ರಂಗನ ಕಂಡಿರೆ?
ಬೊಮ್ಮಮೂರುತಿ ನಮ್ಮ ರಂಗನು ನಿಮ್ಮ ಕೇರಿಯೊಳಿಲ್ಲವೆ?

ಎಂಬ ಭರತನಾಟ್ಯವನ್ನು ನೋಡುವುದಷ್ಟೇ ಅಲ್ಲ, ಆ ಸಾಹಿತ್ಯದ ಸಾಲುಗಳನ್ನು ಅರ್ಥೈಸಬೇಕು. ಬಾಲಕನಾದ ಶ್ರೀಕೃಷ್ಣನು ಯಾವ ಬೀದಿಯಲ್ಲಿದ್ದಾನೆ? ಯಾವ ಕೇರಿಯಲ್ಲಿದ್ದಾನೆ? ಅವನು ನಿಜವಾಗಿ ಎಲ್ಲಾ ಕಡೆಗೂ ವ್ಯಾಪಿಸಿದ ಬೊಮ್ಮಮೂರುತಿಯಾದ ಪರಮಾತ್ಮನಲ್ಲವೆ? ಹಾಗಿರುವಾಗ ಅವನು ಎಲ್ಲಾ ಕಡೆಗಿದ್ದಾನೆ ಎನ್ನುವುದು ಪದ್ಯಭಾವ!

ಎಲ್ಲಿ ನೋಡಿದಿರಿ? ರಂಗನ ಎಲ್ಲಿ ನೋಡಿದಿರಿ?
ಎಲ್ಲಿ ನೋಡಿದರಲ್ಲಿ ತಾನಿಲ್ಲದಿಲ್ಲವೆಂಬ
ಬಲ್ಲ ಜಾಣರಿರ ಎಲ್ಲಿ ನೋಡಿದಿರಿ?

ರಂಗನನ್ನು ಹುಡುಕುತ್ತಾ 'ಎಲ್ಲಿ ನೋಡಿದಿರಿ?' ಎಂದು ಕೇಳುವುದೇ ಅರ್ಥವಿಲ್ಲದ ಮಾತು. ಏಕೆಂದರೆ 'ಎಲ್ಲಿ ನೋಡಿ

ದರೂ ಅಲ್ಲಿ ಅವನಿಲ್ಲದೇ ಇಲ್ಲ! ಅರ್ಥಾತ್ ಅವನು ಎಲ್ಲೆಡೆ ಇರುವವನು! ಆ ಸತ್ಯವನ್ನು ತಿಳಿದ ಜಾಣರಾದ ನೀವು ಅವನನ್ನು ಎಲ್ಲಿ ನೋಡಿದಿರಿ?' ಎಂದು ಕೇಳುವಲ್ಲಿ ವಿಡಂಬನೆಯ ಮೊನಚಿದೆ. ಭಗವಂತನನ್ನು ಎಲ್ಲಿಯೂ ಕಾಣದಿರುವ ನೀವು ನಿಜವಾಗಿಯೂ ಮೂರ್ಖರು ಎಂಬ ಧ್ವನಿ ಅಲ್ಲಿಯದು! ಇದು ನಮ್ಮನ್ನೇ ಉದ್ದೇಶಿಸಿದ ಮಾತು. ಸಂಗೀತ ಮತ್ತು ನಾಟ್ಯಗಳಲ್ಲಿ ಸಹೃದಯನು ತನ್ಮಯನಾದಾಗ ಮಾತ್ರ ಈ ಸಾಹಿತ್ಯದ ಸೌಂದರ್ಯ ವೇದ್ಯವಾಗುತ್ತದೆ! ಒಮ್ಮೆ ಮನಸ್ಸನ್ನು ಈ ಅರ್ಥಸೌಂದರ್ಯ ಆವರಿಸಿದರೆ ಸಂಗೀತ ಮತ್ತು ನೃತ್ಯದ ಅನಂತರವೂ ಅದು ನಮ್ಮನ್ನು ಕಾಡುತ್ತಾ ಇರುತ್ತದೆ!

### ಅಡಿಯನಂಬರ ಮಾಡು

ಯೋಗಶಾಸ್ತ್ರದ ಪರಿಭಾಷೆಯನ್ನು ಬಳಸುವುದು ನಮ್ಮ ದಾಸಸಾಹಿತ್ಯದ ಮತ್ತೊಂದು ಪ್ರಮುಖ ಅಂಶ. ನಮ್ಮ ದೇಹದಲ್ಲಿರುವ ಮೂಲಾಧಾರವೇ ಮೊದಲಾದ ಆರು ಚಕ್ರಗಳಲ್ಲಿ ಕುಂಡಲಿನೀಶಕ್ತಿಯು ಹರಿದು ಸಹಸ್ರಾರಕ್ಕೆ ಏರಿದಾಗ ದಿವ್ಯಾನುಭೂತಿ ಸಾಧ್ಯವಾಗುತ್ತದೆ ಎಂಬ ಯೋಗವಿಜ್ಞಾನವನ್ನು ಕನಕದಾಸರು ಅನೇಕ ಕೀರ್ತನೆಗಳಲ್ಲಿ ಹೇಳುತ್ತಾರೆ.

**ಅಡಿಯನಂಬರ ಮಾಡುವನಕ । ಅಗ್ನಿ**
**ಕಿಡಿಯೆದ್ದು ಮೇಲಣ ಕೊಡನುಕ್ಕದನಕ ॥**
**ಒಡನೆರಡೊಂದಾಗದನಕ । ಅಲ್ಲಿ**
**ಒಡಗೂಡಿ ಅಂಗನೆ ನುಡಿಗೇಳದನಕ ॥**

ಮೂಲಾಧಾರವು ಚೇತನಗೊಂಡು ಕುಂಡಲಿನಿಯು ಮೇಲ್ಮುಖವಾಗಿ ಹರಿದು ಸಹಸ್ರಾರವನ್ನು ಸೇರಿದಾಗ 'ಅಡಿಯು ಅಂಬರವಾಗುತ್ತದೆ' ಹಾಗೂ ಅಲ್ಲಿರುವ ಅಮೃತದ ಕಲಶ ಉಕ್ಕಿಹರಿಯುತ್ತದೆ! ಮುತ್ತುಸ್ವಾಮಿದೀಕ್ಷಿತರ 'ಶ್ರೀ ಮೂಲಾಧಾರಚಕ್ರ ವಿನಾಯಕ' ಯೌಗಿಕಭಾಷೆಯ ಶಿವ-ಶಕ್ತಿ ಸಂಯೋಗದ ಸಂಕೇತ. 'ವಿಕಟ ಶತ್‌ಸಹ ಶ್ವಾಸಾಧಿಕಾರ' ಎನ್ನುವುದು ಅಜಪಾಜಪದ ಪ್ರಾಣಾಯಾಮವಿಚಾರ. ಕನಕದಾಸರು ಹೇಳುವ 'ಓಹೋ ಎನ್ನ ಜೀವ ಮೈಯೆಲ್ಲ ನವಗಾಯ' ಎನ್ನುವುದು ದೇಹದ ನವರಂಧ್ರಗಳ ಕುರಿತಾದ ರೂಪಕ. 'ನನ್ನವ್ವ ಕಲ್ಲ ಬಿಡೆ – ಈ ಧೋತರ ಚೆನ್ನಾಗಿ ಒಗೆಯಬೇಕು' ಎನ್ನುವಲ್ಲಿಯೂ ಇಂದ್ರಿಯನಿಯಂತ್ರಣದ ದೃಷ್ಟಿಯಿದೆ.

**ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು**
**ಅಳ್ಳಾಚಾರಿ ಗೊಂಬೆಯಂತೆ ಆಡಿಹೋಯಿತು ।**
**ಹಳ್ಳಹರಿದು ಹೋಗುವಾಗ ಗುಳ್ಳೆ ಬಂದು ಒಡೆಯುವಂತೆ**
**ಉಳ್ಳೆ ಪೊರೆಯಂತೆ ಕಾಣೊ ಸಂಸಾರದಾಟವು ॥**

ಜನಪದರ ಗೊಂಬೆಯಾಟದೊಂದಿಗೆ ಸಂಸಾರಜೀವನವನ್ನು ಹೋಲಿಸಿದ ಸುಂದರಚಿತ್ರವಿದು. ಸೂತ್ರಧಾರಿಯ ನಿಯಂತ್ರಣದಲ್ಲಿರುವವರೆಗೆ ಗೊಂಬೆಗಳು ಆಭರಣವನ್ನು ತೊಟ್ಟು ರಂಗದಲ್ಲಿ ಕುಣಿಯುತ್ತವೆ. ಆ ಮೇಲೆ ಮೂಲೆಗೆ ಸೇರುತ್ತವೆ! ಈ ಪ್ರಪಂಚಜೀವನವೂ ಅಂತಹ ಒಂದು ಗೊಂಬೆಯಾಟ. ಯಕ್ಷಗಾನ ತಾಳಮದ್ದಳೆಯಲ್ಲಿ ರಾವಣನು 'ಎಸೆವ ಓಲಗವ ಬೀಳ್ಗೊಂಡನು' ಎಂಬ ಹಾಡಿನ ಸಾಲಿಗೆ, 'ಇದು ಪರಿತ್ಯಜಿಸಬೇಕಾದ ಆಸ್ಥಾನದ ವೈಭವ, ಎಂದೆಂದೂ ಶಾಶ್ವತವಲ್ಲ. ನಾನು ಆದಷ್ಟು ಬೇಗ ಸೇರಬೇಕಾದುದು ವೈಕುಂಠ ಪದವಿ' ಎಂದು ಹೇಳಿದಾಗ ಎಸೆಯುವ ಓಲಗ ಧ್ವನಿಶಕ್ತಿಯಿಂದ ಕಂಗೊಳಿಸುತ್ತದೆ. 'ಅಲ್ಲಿದೆ ನಮ್ಮ ಮನೆ, ಇಲ್ಲಿರುವುದು ಸುಮ್ಮನೆ' ಎಂಬ ವೈರಾಗ್ಯಭಾವ. ನಮ್ಮ ಸಂಗೀತ, ನಾಟಕ, ಯಕ್ಷಗಾನ, ಭರತನಾಟ್ಯಾದಿ ಕಲೆಗಳು ಯಾವುದೇ ಕಥನವನ್ನು ಅಭಿವ್ಯಕ್ತಗೊಳಿಸಿದರೂ ಅಲ್ಲಿ ಭಾರತೀಯ ಅಧ್ಯಾತ್ಮದ ಮಿಂಚು ಮಿನುಗುತ್ತದೆ. ಅದನ್ನು ಪರಿಣಾಮಕಾರಿಯಾಗಿ ಸಂವಹನಮಾಡುವ ಹೊಣೆಗಾರಿಕೆ ಕಲಾವಿದರದು ಎನ್ನುವುದು ಮಹತ್ವದ ಸಂಗತಿ. ಸಂಗೀತದ ಪ್ರಾಥಮಿಕ ಶಿಕ್ಷಣದಲ್ಲಿ ನಾವು ಅಭ್ಯಾಸಮಾಡುವ ಒಂದು ಗೀತದ ಪಲ್ಲವಿಯನ್ನು ಮನಸ್ಸಿಗೆ ತಂದುಕೊಂಡರೆ ಕಲಾಮೀಮಾಂಸೆಯ ಉದ್ದೇಶ ಸ್ಪಷ್ಟವಾಗುತ್ತದೆ. ಮನುಷ್ಯಜೀವನದ ಸಾರ್ಥಕತೆಯ ಬಗ್ಗೆ ತಿಳಿಯಹೇಳುವ ಈ ಪಲ್ಲವಿಯ ಅಂತರಾರ್ಥ ಸಮಸ್ತ ಕಲಾಕಾರರಿಗೆ ದಾರಿದೀಪವಿದ್ದಂತೆ! ಭಾರತೀಯ ಅಧ್ಯಾತ್ಮದ ಅನುಸಂಧಾನಕ್ಕೆ ಇದು ದಿಕ್ಸೂಚಿ ಎನ್ನಬಹುದು.

**ಕೆರೆಯ ನೀರನು ಕರೆಗೆ ಚೆಲ್ಲಿ**
**ವರವ ಪಡೆದವರಂತೆ ಕಾಣಿರೊ ।**
**ಹರಿಯ ಕರುಣದೊಳಾದ ಭಾಗ್ಯವ**
**ಹರಿಸಮರ್ಪಣೆ ಮಾಡಿ ಬದುಕಿರೊ ॥**

❋

### ಹವೇಲಿ ಸಂಗೀತ

ಇದು ಹಿಂದೂಸ್ತಾನೀ ಸಂಗೀತದ ಒಂದು ಪ್ರಕಾರ; ಲಘು ಸಂಗೀತ ಎಂದೇ ಪರಿಗಣಿಸಲಾಗುತ್ತದೆ. ಉತ್ತರ ಪ್ರದೇಶದಲ್ಲಿ ಈ ಸಂಗೀತ ಹುಟ್ಟಿಕೊಂಡಿತು ಎನ್ನುತ್ತಾರೆ. 'ಹವೇಲಿ' ಎಂದರೆ ಪ್ರಾಚೀನ ಕಾಲದಲ್ಲಿ ದೇವದೇವತೆಗಳಿಗಾಗಿ ಕಟ್ಟಿಸಿರುತ್ತಿದ್ದ ಭವ್ಯ ವಾಸ್ತುವೈಭವಗಳಿಂದ ಕೂಡಿದ್ದ ಮಂದಿರಗಳು. ಹೆಚ್ಚಾಗಿ ಗುಜರಾತ್, ರಾಜಸ್ಥಾನಗಳ ಗ್ರಾಮೀಣ ಪ್ರದೇಶಗಳಲ್ಲಿ ಹವೇಲಿಗಳಿರುತ್ತಿದ್ದವು. ಕ್ರಮೇಣ ಇವು ನಗರಗಳಲ್ಲಿ ವ್ಯಾಪಾರೀ ವರ್ಗಗಳ ನಿವಾಸ ಎಂಬುದಾಗಿಯೂ ಪರಿಗಣಿತವಾಯಿತು. ಹವೇಲಿಗಳಲ್ಲಿ ದೇವತೆಗಳ ಪೂಜೆಯ ಅಂಗವಾಗಿ ನಡೆಯುತ್ತಿದ್ದ ಸಂಗೀತ ಸೇವೆಯೇ 'ಹವೇಲಿ' ಸಂಗೀತ. ಪ್ರಧಾನವಾಗಿ ವೈಷ್ಣವರು ಈ ಬಗೆಯ ಆರಾಧನೆಯನ್ನು ಆಚರಿಸಿಕೊಂಡು ಬಂದರು. ಧ್ರುಪದ್ ಶೈಲಿಯ ಶಾಸ್ತ್ರೀಯ ಸಂಗೀತದಿಂದ ರೂಪುಗೊಂಡ ಈ ಪದ್ಧತಿ, ಮೊಗಲರ ಆಳ್ವಿಕೆಯ ಕಾಲ ಘಟ್ಟದಲ್ಲಿ ಹಲವು ಬಗೆಯ ಕಟ್ಟುಪಾಡುಗಳಿಗೆ ಒಳಗಾದ್ದರಿಂದ ಕೇವಲ ಹವೇಲಿಗಳಲ್ಲಿ ಮಾತ್ರ ನಿಯತವಾಗಿ ಪೂಜಾಸಂದರ್ಭಗಳಲ್ಲೂ, ವಿಶೇಷ ಸಂದರ್ಭಗಳಲ್ಲೂ ಹಾಡಲ್ಪಡುತ್ತಿತ್ತು. ಈಚೆಗೆ ಇದರ ಪ್ರಾಮುಖ್ಯತೆ ಕುಗ್ಗಿದೆ.



# ಆಧ್ಯಾತ್ಮಿಕತೆಯೇ ಭಾರತೀಯ ಸಂಗೀತದ ಪರಮಲಕ್ಷ್ಯ

**ಪ್ರೊ. ಡಾ. ವಿಶ್ವೇಶ್ವರನ್**

ಭಾರತೀಯ ಸಂಗೀತದಲ್ಲಿ ಗಾಯನ-ವಾದನಗಳ ಪರಮಗುರಿ ಆಧ್ಯಾತ್ಮಿಕತೆಯೇ ಆಗಿದೆ ಎಂಬ ವಿಚಾರವನ್ನು ಇಲ್ಲಿ ವಿವರಿಸಿರುವ ಲೇಖಕರು ಹಲವು ರಾಷ್ಟ್ರಮಟ್ಟದ ಪ್ರಶಸ್ತಿಗಳಿಗೆ ಭಾಜನರಾದ ಪ್ರಸಿದ್ಧ ವೈಣಿಕರು ಹಾಗೂ ವಾಗ್ಗೇಯಕಾರರು. ನೂರಕ್ಕೂ ಮಿಕ್ಕು ಸಂಗೀತ ಕೃತಿಗಳನ್ನು ರಚಿಸಿರುವ ಅವರು ಮೈಸೂರು ವಿಶ್ವವಿದ್ಯಾನಿಲಯದ ಲಲಿತಕಲಾ ಕಾಲೇಜಿನ ಸಂಗೀತ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಸಂಗೀತ ಶಾಸ್ತ್ರವನ್ನು ಕುರಿತಂತೆ ಅಪಾರ ಜ್ಞಾನಸಂಪನ್ನತೆಯನ್ನು ಹೊಂದಿರುವ ಅವರು ಅನೇಕ ಅಮೂಲ್ಯ ಗ್ರಂಥಗಳನ್ನು ರಚಿಸಿದ್ದಾರೆ.

**ಭಾ**ರತೀಯ ಸಂಗೀತದಲ್ಲಿ ಉಚ್ಚ ಕಲಾಮೌಲ್ಯಗಳಿಗಿರುವಷ್ಟೇ ಉನ್ನತವಾದ ಸ್ಥಾನ ಅವಿನಾಭಾವದಲ್ಲಿ ಆಧ್ಯಾತ್ಮಿಕತೆಗೂ ಉಂಟು. ಆಧ್ಯಾತ್ಮಿಕತೆ ಭಾರತೀಯ ಸಂಸ್ಕೃತಿಯ ಆಧಾರ ಸ್ವರವೇ ಆಗಿದೆ; ಪವಿತ್ರ, ಭವ್ಯ, ಆರ್ಷೇಯ ಹಿನ್ನೆಲೆ ಇರುವ ಭಾರತೀಯ ಸಂಗೀತದ ಆಧಾರಸ್ವರವೂ ಆಧ್ಯಾತ್ಮಿಕತೆಯೇ. ಈ ಮಹಾ ಸಂಸ್ಕೃತಿಯ ಆವಿಷ್ಕಾರವಾದುದೇ ವೇದಮೂಲವಾಗಿ. ಎಂದೇ, ಈ ಸಂಸ್ಕೃತಿಯ ಅಭಿವ್ಯಕ್ತಿಯ ಸಮರ್ಥ ಸಂವಹನ ಮಾಧ್ಯಮವಾದ ಭಾರತೀಯ ಸಂಗೀತವೂ ವೇದಮೂಲವೇ. ಸಾಮವೇದವೇ ಭಾರತೀಯ ಸಂಗೀತಕಲೆಯ ಮೂಲ ಎಂಬುದು ಆರ್ಷೋಕ್ತಿ — **'ಸಾಮವೇದಾದಿದಂ ಗೀತಂ ಸಂಜಗ್ರಾಹ ಪಿತಾಮಹಃ** (ಭರತ)'. ಭುಕ್ತಿ ಮುಕ್ತಿಗಳೆರಡನ್ನು ಒಂದರಿಂದಲೇ ಸಾಧಿಸಬಹುದಾದ ಏಕೈಕ ಸಾಧನವು ಸಂಗೀತವೇ ಎಂದು **ಸಂಗೀತರತ್ನಾಕರದ** ಖ್ಯಾತಿಯ ಶ್ರೀ ಶಾರ್ಙ್ಗದೇವನ ಘೋಷಣೆಯು ಆತನಿಗೆ ಹಿಂದಿನ ಮತ್ತು ನಂತರದ ನಮ್ಮ ಎಲ್ಲ ಲಾಕ್ಷಣಿಕರ ದೃಷ್ಟಿಯನ್ನೂ ನಿಲುವನ್ನೂ ಪ್ರತಿನಿಧಿಸುವಂತಹದು:

**'ಧರ್ಮಾರ್ಥಕಾಮಮೋಕ್ಷಾಣಾಂ ಇದಮೇವೈಕಸಾಧನಮ್'**

ಈ ಬೃಹತ್ ಸಂಗೀತ ಪದ್ಧತಿಯ ಪ್ರಾಚೀನ ಪ್ರಬಂಧಪ್ರಕಾರಗಳೂ, ಮಧ್ಯಕಾಲೀನ ದಾಸರ ಪದಗಳೂ, ಸಂಗೀತ ತ್ರಿಮೂರ್ತಿಗಳ, ಅವರ ಹಿಂದಿನ ಮತ್ತು ನಂತರದ ಎಲ್ಲ ಮಹಾವಾಗ್ಗೇಯಕಾರರ ರಚನೆಗಳೂ ಸಂಗೀತಕಲೆಯಲ್ಲಿ ಆಧ್ಯಾತ್ಮಿಕತೆಯ ಅವಿನಾಸಂಬಂಧವನ್ನು ಸಮರ್ಥಿಸಿ ಸಾರುತ್ತವೆ, ಮತ್ತು ಭಾರತೀಯ ಸಂಗೀತ ಸಂಸ್ಕೃತಿ, ಸಂಗೀತಪದ್ಧತಿ ಗಾಯನಪ್ರಧಾನವಾಗಿಯೇ ಆವಿಷ್ಕರಿಸಲು ಕಾರಣವಾದರೂ ಆಧ್ಯಾತ್ಮಿಕ 'ಮಾತು' ವಸ್ತುವೇ (ಸಾಹಿತ್ಯಭಾಗವೇ) ಎಂಬಂಶವನ್ನು ಸ್ಥಿರಪಡಿಸುತ್ತದೆ. ಆಧ್ಯಾತ್ಮಿಕತೆಯೇ ಈ ಸಂಗೀತ ರಚನೆಗಳ ಅಂತಃಸತ್ವ. ಆಧ್ಯಾತ್ಮಿಕತೆಯ ಸ್ಪರ್ಶವಿಲ್ಲದ ಸಂಗೀತ ಕಲೆಗಾರಿಕೆ ದೈನಂದಿನ ಬಳಕೆಯ ಅದೆಷ್ಟೋ ಕೌಶಲಗಳಂತೆ ಒಂದು ಕೌಶಲವಾಗಷ್ಟೇ ಉಳಿಯುತ್ತದೆ.

'ಆಧ್ಯಾತ್ಮಿಕತೆ' ಎಂದರೆ ಆತ್ಮನಿಗೆ, ಅದುವೆ ಅಧಿ-ಆತ್ಮನಿಗೆ, ಅರ್ಥಾತ್ ಮೇಲಿನ ಆತ್ಮನಿಗೆ, ಅರ್ಥಾತ್ 'ಪರಮಾತ್ಮನಿಗೆ' ಸಂಬಂಧಿಸಿದುದು, ಬ್ರಹ್ಮಕ್ಕೆ ಅರ್ಥಾತ್ ಪರಬ್ರಹ್ಮಕ್ಕೆ, ಬ್ರಹ್ಮವಿದ್ಯೆಗೆ ಸಂಬಂಧಿಸಿದುದು ಎಂದೇ ಅಲ್ಲವೆ? ಈ ಪರಬ್ರಹ್ಮವನ್ನೇ ಸಗುಣೋಪಾಸನೆಯ ಸ್ತರದಲ್ಲಿ ವಿವಿಧ ನಾಮರೂಪ ಉಪಾಧಿ

ಗಳೊಡನೆ, ಸರಳವಾದ ಮಾತುಗಳಲ್ಲಿ, 'ದೇವರು' ಎಂದು, ನಾವು ನಂಬಿಕೆಯಾಗಿಯೂ ಗುರಿಯಾಗಿಯೂ ಅವಲಂಬನೆಯಾಗಿಯೂ ಆರಾಧಿಸುವುದು.

ಕಲೆಗೆ, ಪ್ರಕೃತ, ಸಂಗೀತಕಲೆಗೆ ಸಂಬಂಧಿಸಿದಂತೆ, ಈ ಆರಾಧನೆಯು ಎರಡು ಮಜಲುಗಳಲ್ಲಿ ಕ್ರಿಯಾಶೀಲವಾಗುತ್ತದೆ.

ಸಂಗೀತ ಕಲೆಯ ಜ್ಞಾನ ಮತ್ತು ಅಭಿವ್ಯಕ್ತಿಗಳನ್ನು, ಅವುಗಳನ್ನನುಗ್ರಹಿಸಿದ ದೈವಕ್ಕೆ, ಶ್ರೀ ಪುರಂದರದಾಸರೆಂದಂತೆ, 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತೆ' ಸಮರ್ಪಿಸುವುದು, ಗಾಯನ ವಾದ್ಯವಾದನಗಳೂ, ವಾಗ್ಗೇಯಗಳ, ಅರ್ಥಾತ್ ಸಂಗೀತರಚನೆಗಳ ಮಾತುಧಾತುಗಳೂ ದೈವಕ್ಕೆ ಸಮರ್ಪಿತವಾಗಬೇಕಾದುದೇ ನಮ್ಮ ಸಂಸ್ಕೃತಿಯ ಆದರ್ಶ. ಈ ಆದರ್ಶದ ಮನಃಪೂರ್ವಕವಾದ ಸಾಧನೆಯಲ್ಲಿ ಸಂಗೀತ ವಸ್ತುವನ್ನು ಸಮರ್ಪಿಸುವ ಕಲೆಗಾರರಿಗೂ ವಾಗ್ಗೇಯಕಾರರಿಗೂ ಅಲೌಕಿಕವಾದ, ಅನಿರ್ವಚನೀಯವಾದ ಆನಂದ, ತೃಪ್ತಿಗಳು ದೊರೆಯುವ ಹಾದಿಯಲ್ಲಿ ಸಾಮಾಜಿಕರಿಗೆ ಈ ಕ್ರಿಯೆಯಿಂದ ಅದೆಷ್ಟೋ ಮನರಂಜನೆ ದೊರೆಯುವುದು. ಈ ಸಮರ್ಪಣಾಪ್ರಕ್ರಿಯೆಯಲ್ಲಿ ಪ್ರಾಸಂಗಿಕವಾಗಷ್ಟೇ ಇರಬೇಕಾದುದು ನಮ್ಮ ಸಂಗೀತ ಸಂಸ್ಕೃತಿಯ ಹಿರಿಯ ಪ್ರವರ್ತಕರು ತಳೆದಿದ್ದ ಆದರ್ಶ. ಸಂಗೀತ ಕಲೆಯ ಅಭಿವ್ಯಕ್ತಿಯಾಗುತ್ತಿದ್ದುದು ಬಹುತೇಕ ಧಾರ್ಮಿಕ ಸಂದರ್ಭ ಪರಿಸರಗಳಲ್ಲಿ. ಪ್ರಬಂಧಗಳ, ನಂತರದ ಕಾಲದ ವಾಗ್ಗೇಯ ರಚನೆಗಳ ಪದ-ವಸ್ತುವೆಲ್ಲವೂ, ಅರ್ಥಾತ್ ಮಾತು, ದೈವಸ್ತುತಿಯೇ ಆಗಿರುತ್ತಿದ್ದಿತು. ರಾಜಾಶ್ರಯ ಸಂಗೀತ ಕಲೆಗೆ ದೊರೆತ ಸಂದರ್ಭದಲ್ಲೂ, ಅಂದಿನ ಕಲೆಗಾರರು ವಾಗ್ಗೇಯಗಳನ್ನು ರಾಜಾಪ್ರಶಂಸೆಯಾಗಿ ರಚಿಸಿದರೂ ಆ ಕೆಲಸ 'ನಾವಿಷ್ಣುಃ ಪೃಥಿವೀಪತಿಃ' ಎನ್ನುವ ಮಾತಿನಲ್ಲಿನ ಭಕ್ತಿದ್ಯೋತಕವಾಗಿರುತ್ತಿತ್ತು. ಈ ಹಂತವನ್ನೂ ದಾಟಿದ್ದು, ಕಲಾಭಿವ್ಯಕ್ತಿ ದೈವಸಮರ್ಪಣೆಗಾಗಿಯೇ ಹೊರತು ಯಾವುದೇ ಉನ್ನತ ಸ್ಥಾನದಲ್ಲೂ ಮಾನವನಿಗಾಗಿ ಅಲ್ಲ ಎಂಬ ಕಟ್ಟುನಿಟ್ಟಾದ, ದಿಟ್ಟವಾದ ನಿಲುವಿನೊಂದಿಗೆ ಮಾರ್ಗದರ್ಶಕರಾಗಿ, 'ನಿಧಿ ಚಾಲ ಸುಖಮಾ, ರಾಮುನಿ ಸನ್ನಿಧಿ ಸೇವ ಸುಖಮಾ?' ಎಂದು ರಚಿಸಿ ಹಾಡಿದವರು ಶ್ರೀ ತ್ಯಾಗರಾಜಸ್ವಾಮಿಗಳು, ಮತ್ತು 'ಹಿರಣ್ಮಯೀಂ ಲಕ್ಷ್ಮೀಂ ಸದಾ ಭಜಾಮಿ, ಹೀನ ಮಾನವಾಶ್ರಯಂ ತ್ಯಜಾಮಿ' ಎಂದು ರಚಿಸಿ ಹಾಡಿದವರು ಶ್ರೀ ಮುದ್ದುಸ್ವಾಮಿ ದೀಕ್ಷಿತರು. ಇದು ಆಧ್ಯಾತ್ಮಿ ಕತೆಯ ಒಂದು ಮಜಲು.

ಎರಡನೇ ಮಜಲಿನ ಆಧ್ಯಾತ್ಮಿಕತೆ ಎಂದು ಸಂಗೀತಕಲೆಯನ್ನೇ, ಅದೇ ದೈವವೆಂಬ ಭಕ್ತಿಯ ಭಾವನೆಯನ್ನು ಕಲೆಯಲ್ಲಿ ತಳೆದು ಕಲಾರಾಧನೆ ಮಾಡುವುದು ಎಂಬ ನಿಲುವಿನಲ್ಲಿ, ವಾದನವನ್ನೂ ಈ ನನ್ನ ಪ್ರಬಂಧದ ಶೀರ್ಷಿಕೆಯಲ್ಲಿ ಉಲ್ಲೇಖಿಸುವುದರ ಔಚಿತ್ಯ ನಿಮಗೆ ಸೂಚಿತವಾದೀತು!

ಆಧ್ಯಾತ್ಮಿಕತೆಯ ತೃಪ್ತಿಗೆ, ಆನಂದಕ್ಕೆ ದಾರಿಯನ್ನು ಸುಗಮಗೊಳಿಸುವ ನಮ್ಮ ಪ್ರಬಂಧಾದಿ ವಾಗ್ಗೇಯ ರಚನೆಗಳ ಸಾಹಿತ್ಯವೆಲ್ಲವೂ ದೈವಸ್ತುತಿ ನುತಿಗಳೇ ಆಗಿ ಎದ್ದು ಕಾಣುವ ಬೆಳಕಿನಲ್ಲಿ, ನಮ್ಮ ಸಂಗೀತವು ಗಾಯನ**ಪ್ರಧಾನ**ವಾಗಿ ಬೆಳೆದುದು ಎನ್ನುತ್ತೇನೆಯೇ ಹೊರತು **ಗಾಯನಮಾತ್ರ**ವಾಗಿಯೇ ಎನ್ನುವುದಿಲ್ಲವಲ್ಲ!? ಹೀಗೆ, ವೇದಗಳ ಕಾಲದಿಂದಲೂ ವಾದ್ಯಕ್ಕೂ ವಾದನಕಲೆಗೂ ಉತ್ತಮ ಸ್ಥಾನ ನಮ್ಮ ಸಂಗೀತದಲ್ಲಿ ಇದ್ದುದೇ. ಲಯಪ್ರತಿಪಾದನೆ ಪೋಷಣೆಗಳಿಗೆಂದೇ ವಿಕಸಿತವಾದ ಅವನದ್ಧ ಮತ್ತು ಘನವಾದ್ಯಗಳನ್ನು ತಾತ್ಕಾಲಿಕವಾಗಿ ಪಕ್ಕಕ್ಕಿಟ್ಟರೂ, ಸಂಗೀತ ಪ್ರತಿಪಾದನೆಯನ್ನೇ ಮಾಡುವ ತತ ಮತ್ತು ಸುಷಿರವಾದ್ಯಗಳಾದ ಸ್ವರವಾದ್ಯಗಳ ವಾದನಕ್ಕೆ ಕರ್ಣಾಟಕ ಸಂಗೀತದಲ್ಲಿ ಗಾಯನಕ್ಕಾಗಿ ಇರುವ ವಸ್ತುವಲ್ಲದೆ ಅದರಿಂದ ವಿಭಿನ್ನವಾದ ವಸ್ತು ಇಲ್ಲ, ಇದ್ದರೆ ಅದು ಅತ್ಯಲ್ಪ. ವಾದನಕ್ಕೆ ವಸ್ತುವು ಗಾಯನಕ್ಕಾಗಿ ಇರುವುದೇ. ವಾದ್ಯಗಳಲ್ಲಿ ರಚನೆಗಳ ಸಾಹಿತ್ಯಗಳು, ಅವುಗಳ ಭಾಷೆಗಳು ಸ್ಫುರಿಸುವುದಿಲ್ಲವೆಂಬ ಎಂಬ ಅಂಶವು ನಿಜವಾದರೂ, ರಚನೆಗಳ ಸಾಹಿತ್ಯದ, ಅವುಗಳ ಅರ್ಥದ, ವಾಗ್ಗೇಯಕಾರರ ಭಾವನೆಗಳ ವಿಷಯದಲ್ಲಿ ವಾದ್ಯವಾದಕರ ಪ್ರತಿಪಾದನಾ ಕರ್ತವ್ಯವೂ ಜವಾಬ್ದಾರಿಯೂ ಕಡಿಮೆಯಾಗುವುದಿಲ್ಲ. ಏಕೆಂದರೆ ವಾಗ್ಗೇಯಕಾರರು, ವಾದಕರು ನುಡಿಸುವ ಗೇಯದ ಮಟ್ಟನ್ನು ಮಾತ್ರವೇ ರಚಿಸಲಿಲ್ಲ. ಅತ್ಯಂತ ಶ್ರೇಷ್ಠವಾದ ಮಾರ್ಗವೆಂದರೆ, ಈ ಹಿಂದೆ ಹೇಳಿದಂತೆ ಆಧ್ಯಾತ್ಮಿಕ ತೃಪ್ತಿ, ಆಸ್ವಾದನ, ಆನಂದಗಳಿಗೆ ದಾರಿಯಾದ ಸಾಹಿತ್ಯಗಳ ಭಾವಗಳನ್ನು ಜೀರ್ಣಿಸಿಕೊಂಡು ಅವುಗಳನ್ನೇ ಮನಸ್ಸಿನಲ್ಲಿಟ್ಟು ವಾದನದಲ್ಲಿ ಪ್ರತಿಪಾದಿಸುವುದು, ಕನಿಷ್ಠವೆಂದರೆ ಶುದ್ಧ ಸಾಹಿತ್ಯಗಳನ್ನು ಅರಿತು ನುಡಿಸುವುದು.

ಆಧ್ಯಾತ್ಮಿಕತೆಗೂ ವಾದ್ಯವಾದನಕ್ಕೂ ಇರುವ ಗಹನವಾದ ಒಂದು ಸಂಬಂಧವಿದು, ಒಂದನೇ ಮಜಲಿನದು. ಆಧ್ಯಾತ್ಮಿಕತೆಯ ಎರಡನೇ ಮಜಲಿನಲ್ಲಿ ಅನುಭವಕ್ಕೆ ಬರುವ ವಾದನದ ಸಂಬಂಧವೂ ಅಷ್ಟೇ ಗಹನವಾದುದು. ಇದೇ ನಾದಾನುಸಂಧಾನವೆಂಬ ಮಾರ್ಗ. ದೇವಗಾಂಧಾರಿ ರಾಗದಲ್ಲಿನ ಸಂಗೀತಸ್ತುತಿಯಾದ ನನ್ನ ಕೃತಿ ಹೇಳುವುದು ಈ ನಾದಾನುಸಂಧಾನವನ್ನೇ. '**ಅನುಸಂಧಾನ**'



ಪದಕ್ಕೆ ನಿಘಂಟುಗಳು ಕೊಡುವ ಅರ್ಥಗಳಲ್ಲಿ, 'ಯುಕ್ತವಾಗುವುದು, ಯೋಗ್ಯಸಂಬಂಧ, ಗುರಿ ಇಡುವುದು, ಲಕ್ಷ್ಯವಾಗಿ ಹೊಂದುವುದು' ಎಂಬ ಅರ್ಥಗಳು ನಾದದ ಸಂದರ್ಭಕ್ಕೆ ಪ್ರಸಕ್ತವಾದವು. ಅರ್ಥಾತ್, ನಾದದ ಜತೆಯಲ್ಲಿ ಯೋಗ ಅಥವಾ ಯುಕ್ತವಾಗುವುದು ಅಥವಾ ನಾದದ ಜತೆ ಸೇರಿಹೋಗುವುದು, ನಾದವನ್ನು 'ನಾದಬ್ರಹ್ಮ'ವಾಗಿಯೇ ತಿಳಿದು, ಅನುಭವಿಸುವುದು – experiencing naada or 'Naadabramha', ನಾದದ ಜೊತೆಯಲ್ಲಿ ಏಕೀಭವಿಸುವುದು. ಇದೇ ವಾದಕನ ಆ ಅನಿರ್ವಚನೀಯವಾದ ಆಧ್ಯಾತ್ಮಿಕ ಅನುಭವ (ಆಧ್ಯಾತ್ಮಿಕ ಶ್ರೀಮಂತಿಕೆ ಎಂದೇ ಹೇಳುತ್ತೇನೆ!). ಇಂಥ ಅಲೌಕಿಕ ಅನುಭವ ವಾದಕನಿಗಾಗುವುದು ಯಾವಾಗ, ಯಾವ ಸ್ತರದಲ್ಲಿ? ಇದು ಸಾಧ್ಯವಾಗುವುದು ಹೊರಗಣ್ಣು ಶ್ರೋತೃಗಳತ್ತ ನೋಡುವಂತಿದ್ದರೂ, ದೃಷ್ಟಿ ತನ್ನೊಳಕ್ಕೆ ಹೋಗಿರಬೇಕು, ಆವಾಗ! ನಾದವನ್ನು ನೋಡುವುದು ಸಾಧ್ಯವಾದಾಗ! ನಾದವನ್ನೆ? ನೋಡುವುದೆ?? ಹೌದು, ನೋಡುವುದೇ! ವೇದಗಳನ್ನು ಲೋಕಕ್ಕೆ ಗುರುಶಿಷ್ಯ ಪರಂಪರೆಯಲ್ಲಿ ಸಂವಹನ ಮಾಡಿ ಉಪಕರಿಸಿ, ಈ ಅದ್ಭುತ ಭಾರತೀಯ ಸಂಸ್ಕೃತಿಯನ್ನು ಸೃಷ್ಟಿಸಿದ ಆ ಮಹಾ ಋಷಿಗಳನ್ನು 'ಮಂತ್ರದ್ರಷ್ಟಾರರು' ಎಂದಿದ್ದಾರೆ — ಕೇಳಬೇಕಾದ ವಸ್ತುವಾದ ಮಂತ್ರಗಳನ್ನು 'ನೋಡಿದರು' ಎಂದರ್ಥ. ಹಾಗೆ, ವಾದ್ಯವಾದಕರು ನಾದದ್ರಷ್ಟಾರರಾಗುವ ಹಂತಕ್ಕೆ ತಮ್ಮನ್ನು ಬೆಳೆಸಿಕೊಳ್ಳಬೇಕು, 'ನಾದಯೋಗಿ' ಆಗಬೇಕು. ಗಾಯನದ ಫಲಶ್ರುತಿಯೂ ಇದೇ. ಆಗಬೇಕಾಗಿರುವ ಫಲಶ್ರುತಿಯ ಆದರ್ಶವೂ ಇದೇ. ಆದುದರಿಂದ, ತತ್ತ್ವಶಃ ಈ ಎಲ್ಲ ಮಾತುಗಳೂ ಗಾಯಕರ ಆದರ್ಶವಾಗಿಯೂ ಇರಬೇಕಾದುದೇ. ಒಟ್ಟಿನಲ್ಲಿ, ಸಂಗೀತಕಲೆಯ ಅಭಿವ್ಯಕ್ತಿ ಪ್ರಕ್ರಿಯೆ ಎಂಬುದು ಆಧ್ಯಾತ್ಮಿಕ ಅನುಭವವಾಗುವುದು, ಆಧ್ಯಾತ್ಮಿಕ ತೃಪ್ತಿ–ಆನಂದಗಳನ್ನು ಕಲೆಗಾರನಿಗೆ, ವಾಗ್ಗೇಯಕಾರನಿಗೆ, ನೀಡುವುದು ಎಂದರೆ, ದೈವದ ಕಡೆಗೆ ಅವನನ್ನು ಎತ್ತಿ, ಕೈಹಿಡಿದು ನಡೆಸುವುದು ಎಂದರ್ಥ. ನನ್ನ ಅನುಭವದಲ್ಲಿ ಇದು ಹೀಗೆ, ಹಿಂದೆ ಹೇಳಿದ ಎರಡು ಮಜಲುಗಳಲ್ಲೂ ಕ್ರಿಯಾಶೀಲವಾಗುವ ಪ್ರಕ್ರಿಯೆ. ನನ್ನ ಹಲವು ಕೃತಿಗಳಲ್ಲಿ ಪ್ರತಿಧ್ವನಿಸುವ ಈ ಧ್ಯೇಯ, ಆದರ್ಶ, ದೇವಗಾಂಧಾರಿ ರಾಗದ ಈ ಕೃತಿಯಲ್ಲಿ ಹೆಚ್ಚು ಒತ್ತಿನಿಂದ ವ್ಯಕ್ತವಾಗಿದೆ:

ಅಂತರಂಗಮುನು, ರಾಗಾತರಂಗಮುನು ದೆಲಿಸಿ ಪಾಡಿನ ಸಂಗೀತಮುನಕು ಮಾತ್ರಮೇ ಪೂರ್ಣಾರ್ಥಮು। ಚಿಂತನ, ಮನನ, ಸಾಧನ ಜತಗೂರ್ಚಿ ಮನಕೆಂತೋ ಚಕ್ಕನಿ ಮಾರ್ಗಮುನು ಚೂಪಿನ ಪೆದ್ದಲಯಂತರಂಗಮುನು ದೆಲಿಸಿ ಪಾಡಿನ...।

ನಾದಾನುಸಂಧಾನಮುತೋ, ಸ್ವರಶುದ್ಧಮುತೋ, ದೇವಗಾಂಧಾರಿವಲೆ ರಾಗಮುಲನಭ್ಯಸಿಂಚಿ, ವೇದಾಂತುಲೈನ ಸಂಗೀತ ತ್ರಿಮೂರ್ತಿಲಲೋ ಸಂದೇಹಮುಲೇಕ, ಭಕ್ತಿತೋ ವಿಶ್ವೇಶ್ವರು ನಿಯಂತರಂಗಮುನು ದೆಲಿಸಿ ಪಾಡಿನ ಸಂಗೀತಮುನಕು ಮಾತ್ರಮೇ ಪೂರ್ಣಾರ್ಥಮು..

ಈ ಪೂರ್ಣಾರ್ಥ ದೊರೆಯುವುದೆಂದರೆ, ನಮ್ಮ ಸಂಗೀತ ಕಲೆಗಾರಿಕೆ ಆಧ್ಯಾತ್ಮಿಕವಾದಾಗಲೇ.

ಸಂಗೀತ ಕಲೆಯನ್ನೂ ಅದರ ಪರಿಕರಗಳನ್ನೂ ಅದೇ ದೈವವಾಗಿ ಕಂಡು, ಕಲೆಯನ್ನೇ ದೈವವೆಂದು ಭಾವಿಸಿ, ಎರಡರಲ್ಲೂ ಪೂರ್ಣ ಅಭೇದವನ್ನು ಕಂಡು ಕಲೆಯಲ್ಲಿ ದೈವವನ್ನೂ ದೈವದಲ್ಲಿ ಕಲೆಯನ್ನೂ ಅದರ ಪರಿಕರಗಳನ್ನೂ ಕಂಡುಕೊಂಡು ಆರಾಧಿಸುವುದು ಸಂಗೀತಕಲೆಯಲ್ಲಿ ಆಧ್ಯಾತ್ಮಿಕತೆಯನ್ನು ಕಾಣುವ ಇನ್ನೊಂದು ಮಜಲು. ಈ ಆಧ್ಯಾತ್ಮಿಕ ಚಿಂತನೆಭಾವನೆಗಳಿಗೂ ಮೂಲ ನಮ್ಮ ಸನಾತನ ಸಂಸ್ಕೃತಿಯಲ್ಲೇ ಕಾಣಲು ಸಿಗುತ್ತದೆ.

ಬ್ರಹ್ಮಕೃತ ಶ್ರೀರಾಮಸ್ತವವು ಶ್ರೀರಾಮಚಂದ್ರ ಮೂರ್ತಿಯನ್ನು ಸ್ತುತಿಸುವ ಸಂದರ್ಭದಲ್ಲಿ, ''ಈ ಸಮಸ್ತ ವಿಶ್ವವೇ ನಿನ್ನ ಶರೀರ; ಈ ಭೂಮಿಯೇ ನಿನ್ನ ಸ್ಥೈರ್ಯ; ಅಗ್ನಿಯೇ ನಿನ್ನ ಕೋಪ; ಚಂದ್ರನೇ ನಿನ್ನ ಪ್ರಸನ್ನತೆ; ಶ್ರೀವತ್ಸವೆಂಬ ಚಿಹ್ನೆಯನ್ನು ನೀನೇ ಧರಿಸಿರುವೆ'' —

ಜಗತ್ಸರ್ವಂ ಶರೀರಂ ತೇ ಸ್ಥೈರ್ಯಂ ತೇ ವಸುಧಾತಲಮ್ ।
ಅಗ್ನಿಃ ಕೋಪಃ ಪ್ರಸಾದಸ್ತೇ ಸೋಮಃ ಶ್ರೀವತ್ಸಲಕ್ಷಣಃ ॥

ಎಂಬ ಸಮನ್ವಯವನ್ನು ಮಾಡಿದರೆ,

**ಪ್ರಪಂಚಸಾರತಂತ್ರ**ವು ಮತ್ತೊಂದು ರೀತಿಯ ಆಧ್ಯಾತ್ಮಿಕ ಭಾವನೆಯನ್ನು ಪ್ರಕಟಿಸುತ್ತದೆ. ಸರಸ್ವತೀ ದೇವಿಯನ್ನು ಸ್ತುತಿಸುವಾಗ ಅದು ಹೇಳುತ್ತದೆ:

ಮನೋವೃತ್ತಿರಸ್ತು ಸ್ಮೃತಿಸ್ತೇ ಸಮಸ್ತಾ ।
ತಥಾ ವಾಕ್ಪ್ರವೃತ್ತಿಃ ಸ್ತುತಿಸ್ಯಾನ್ಮಹೇಶಿ ।
ಶರೀರಪ್ರವೃತ್ತಿಃ ಪ್ರಣಾಮಕ್ರಿಯಾ ಸ್ಯಾತ್ ।
ಪ್ರಸೀದ ಕ್ಷಮಸ್ವ ಪ್ರಭೋ ಸಂತತಂ ಮೇ ॥

'ಹೇ ಮಹೇಶಿ, ನನ್ನ ಮನೋವೃತ್ತಿಗಳೆಲ್ಲ ನಿನ್ನ ಸ್ಮೃತಿಯಾಗಲಿ; ನನ್ನ ವಾಕ್ಪ್ರವೃತ್ತಿಗಳೆಲ್ಲ ನಿನ್ನ ಸ್ತುತಿಯಾಗಲಿ; ನನ್ನ ಶರೀರಪ್ರವೃತ್ತಿಯೆಲ್ಲ ನಿನ್ನ ನಮಸ್ಕಾರವಾಗಲಿ; ಹೇ ಮಹೇಶ್ವರಿ, ಪ್ರಸನ್ನಳಾಗು ಮತ್ತು ಯಾವಾಗಲೂ ಕ್ಷಮಿಸು.'

ಹಲವಾರು ಸಂದರ್ಭಗಳಲ್ಲಿ, ಸ್ತುತಿಗಳಲ್ಲಿ ಭಕ್ತಶ್ರೇಷ್ಠರು ಇದೇ ಭಾವನೆಗಳನ್ನೇ ವ್ಯಕ್ತಪಡಿಸಿರುವುದರ ಪ್ರತಿಧ್ವನಿಯೊಂದನ್ನು ದಾಸಸಾಹಿತ್ಯದಲ್ಲಿ ಕಾಣುತ್ತೇವೆ. ದಾಸರು ಹೇಳುತ್ತಾರೆ, 'ನಡೆದದ್ದೆಲ್ಲವು ಲಕ್ಷಪ್ರದಕ್ಷಿಣೆ, ನುಡಿದದ್ದೆಲ್ಲವು ಗಾಯತ್ರೀ ಮಂತ್ರವು, ಭೂಮಂಡಲದಿ ಶಯನವೇ ನಮಸ್ಕಾರ.'

ತಂಬೂರಿ ಮೀಟಿದವ ಭವಾಬ್ಧಿ ದಾಟಿದವ ।
ತಾಳವ ತಟ್ಟಿದವ ಸುರರೊಳು ಸೇರಿದವ ॥

— ಎಂಬ ಮಾತುಗಳಲ್ಲಿ ಆಧ್ಯಾತ್ಮಿಕತೆಯ ಮಹತ್ವವನ್ನು ವಾದ್ಯಗಳಲ್ಲೂ ಕಾಣುತ್ತಾರೆ ಶ್ರೀ ಪುರಂದರದಾಸರು.


ಶ್ರೀ ತ್ಯಾಗರಾಜರು

ಸಂಗೀತಕಲೆಯ ಈ ಆಧ್ಯಾತ್ಮಿಕತೆಯ ಪ್ರವಾಹದಲ್ಲಿ ಮಿಂದ ಸಂಗೀತತ್ರಿಮೂರ್ತಿಗಳಲ್ಲಿ ಶ್ರೀ ಮುದ್ದುಸ್ವಾಮಿದೀಕ್ಷಿತರು ಗಮಕ ಕ್ರಿಯೆ ರಾಗದ **'ಮೀನಾಕ್ಷಿ ಮೇ ಮುದಂ ದೇಹಿ'** ಕೃತಿಯಲ್ಲಿ ದೇವಿಯನ್ನು **'ವೀಣಾಗಾನ ದಶಗಮಕಕ್ರಿಯೇ'** ಎಂದು ಸ್ತುತಿಸು ವಾಗಲೂ, ವಂಶವತಿ ಮೇಳರಾಗದ ಅವರ ಕೃತಿಯಲ್ಲಿ, **'ದ್ವಾವಿಂಶತ್ ಶ್ರುತಿ ಸ್ವರ ಸ್ವರೂಪಿಣಿ'** ಎಂದೂ, ೭೨ನೇ ಮೇಳರಾಗ ರಸಮಂಜರಿಯಲ್ಲಿನ **'ಶೃಂಗಾರ ರಸಮಂಜರೀಂ'** ಕೃತಿಯಲ್ಲಿ ದ್ವಿಸಪ್ತತಿ ರಾಗಾಂಗರಾಗಮೋದಿನೀಂ ಮತಂಗ ಭರತವೇದಿನೀಂ' ಎಂದೂ, ಜುಜಾವಂತಿ ರಾಗದ **'ಅಖಿಲಾಂಡೇಶ್ವರಿ ರಕ್ಷಮಾಂ'** ಕೃತಿಯಲ್ಲಿ 'ಝಲ್ಲೀ ಮರ್ದಲ ಝುರ್ಝುರವಾದ್ಯ ನಾದ ಮುದಿತೇ' ಎಂದೂ, 'ಜುಜಾವಂತಿರಾಗನುತೇ' ಎಂದೂ, ಅಭೇರಿ ರಾಗದ ಕೃತಿಯಲ್ಲಿ **'ವೀಣಾಭೇರಿ ವೇಣುವಾದ್ಯ ವಿನೋ ದಿನಿ ಮೋದಿನಿ'** ಎಂದು, ದೇವಿಯನ್ನು ವರ್ಣಿಸುವಾಗಲೂ, ಸಂಗೀತ ಕಲೆಗೂ ಕಲೆಯ ಪರಿಕರಗಳಿಗೂ ದೇವಿಯನ್ನು ದೇವಿಗೂ ಹೇಳುವ ಪೂರ್ಣ ಅಭೇದವನ್ನು ಎರಡನೆಯ ಮಜಲಿನ ಆಧ್ಯಾತ್ಮಿ ಕತೆಯಾಗಿ ಕಾಣಬಹುದಾಗಿದೆ. ಇಂಥ ಸಂಗೀತ ಕಲಾ ಸ್ವರೂ ಪಿಣಿಯೇ ದೇವಿ ಲಲಿತೆ, ಶ್ರೀ ಸರಸ್ವತಿ ಎಂದು ಸಾರುವ ಇತರ ಹಲವು ಕೃತಿಗಳೂ ಇವೆ.

ಶ್ರೀತ್ಯಾಗರಾಜರು ತಮ್ಮ ಹಲವಾರು ಕೃತಿಗಳಲ್ಲಿ, ಸಂಗೀತ ಕಲೆಯ ಮೂಲಕ ಮೂಡುವ ಆಧ್ಯಾತ್ಮಿಕತೆಯ ಈ ಮಜಲಿನ ನಿಕಟ ಸಂಬಂಧವನ್ನು ಸುಸ್ಪಷ್ಟವಾಗಿ ವ್ಯಕ್ತಗೊಳಿಸುತ್ತಾರೆ.

ಶಿವನನ್ನು 'ನಾದತನು ಶಂಕರ'ನೆಂದೇ ಚಿತ್ತರಂಜನಿ ರಾಗದ ಕೃತಿಯಲ್ಲಿ ಉಲ್ಲೇಖಿಸಿ ನಮಿಸುತ್ತಾರೆ: **'ನಾದ ತನುಂ ಅನಿಶಂ ಶಂಕರಂ ನಮಾಮಿ'** ಎನ್ನುತ್ತಾರೆ. ಅದೇ ಕೃತಿಯಲ್ಲಿ, 'ಸ ರಿ ಗ ಮ ಪ ದ ನೀ ವರ ಸಪ್ತಸ್ವರವಿದ್ಯಾಲೋಲಂ' ಎಂದು ಕೊಂಡಾಡುವುದೇ ಈ ಮಜಲಿನ ಆಧ್ಯಾತ್ಮಿಕತೆಯ ದ್ಯೋತಕ.

ಮಹಾಲಾಕ್ಷಣಿಕ ಶ್ರೀ ಶಾರ್ಙ್ಗದೇವನ 'ಸಂಗೀತ ರತ್ನಾಕರ' ಗ್ರಂಥದ ಪ್ರಾರಂಭದಲ್ಲೇ **'ಚೈತನ್ಯಂ ಸರ್ವಭೂತಾನಾಂ ನಿರ್ವೃತಂ ಜಗದಾತ್ಮನಾ । ನಾದಬ್ರಹ್ಮ ತದಾನಂದಂ ಅದ್ವಿತೀಯಂ ಉಪಾಸ್ಮಹೇ'** ಎನ್ನುವ ಶ್ಲೋಕವಿದೆ. 'ನಾದೋಪಾಸನಯಾ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ । ಭವನ್ತ್ಯುಪಾಸಿತಾನೂನಂ ಯಸ್ಮಾದೇತೇ ತದಾತ್ಮಕಾಃ।' ಎಂಬ ಶ್ಲೋಕದಲ್ಲೂ, ಶಾರ್ಙ್ಗದೇವನಿಗೆ ಈ ಶ್ಲೋಕಕ್ಕಾಗಿ ಸ್ಫೂರ್ತಿಯನ್ನೊದಗಿಸಿರಬಹುದಾದ,

ನಾದರೂಪಃಸ್ಮೃತೋ ಬ್ರಹ್ಮಾ ನಾದರೂಪೋ ಜನಾರ್ದನಃ ।<br>
ನಾದರೂಪಾ ಪರಾಶಕ್ತಿಃ ನಾದರೂಪೋ ಮಹೇಶ್ವರಃ ॥

–ಎಂಬ ಮತಂಗನ ಶ್ಲೋಕದಲ್ಲೂ ಈ ಭಾವನೆ ಕಾಣಸಿಗುತ್ತದೆ. ಹೀಗೆ, ಬ್ರಹ್ಮ ವಿಷ್ಣು ಮಹೇಶ್ವರರಾದ ತ್ರಿಮೂರ್ತಿಗಳೂ ನಾದ ರೂಪರೇ, ನಾದಬ್ರಹ್ಮದ ಬೇರೆ ಬೇರೆ ರೂಪಗಳಷ್ಟೇ ಎನ್ನುವುದನ್ನು ಶ್ರೀ ತ್ಯಾಗರಾಜರು ತಮ್ಮ, ಬೇಗಡೆ ರಾಗದ **'ನಾದೋಪಾಸನಚೇ ಶಂಕರ ನಾರಾಯಣ ವಿಧುಲು ವೆಲಸಿರಿ'** ಕೃತಿಯ ಸಾಹಿತ್ಯದಲ್ಲಿ ಸಾರುತ್ತಾರೆ. ಪೂಜ್ಯರು ಮುಖಾರಿ ರಾಗದ ಕೃತಿಯಲ್ಲಿ 'ಸಂಗೀತ ಶಾಸ್ತ್ರಜ್ಞಾನಮು ಸಾರೂಪ್ಯ ಸೌಖ್ಯದಮೇ' ಎಂದು ತಿಳಿಸಿ, ಶಂಕರಾಭರಣದಲ್ಲಿ **'ಸ್ವರರಾಗ ಸುಧಾರಸಯುತ ಭಕ್ತಿ'** ಸ್ವರ್ಗಾಪ ವರ್ಗಗಳೆರಡನ್ನೂ ಕೊಡುವಂಥದು ಎನ್ನುತ್ತಾರೆ.

ಸಂಗೀತದ ಪರಿಕರಗಳಿಗೆ ಆಧ್ಯಾತ್ಮಿಕ ಸಮನ್ವಯ ಮಾಡಿ, ಸಂಗೀತವೆಂಬುದು ಕಲೆಯಷ್ಟೇ ಅಲ್ಲ, ಭಗವಂತನನ್ನು ಕಂಡು ಕೊಳ್ಳುವ ಒಂದು ಸಮರ್ಥವಾದ, ಭರವಸೆ ಮೂಡಿಸುವ ಮಾರ್ಗವೆಂಬ ಸಂದೇಶವನ್ನು ಆರಭಿ ರಾಗದ 'ನಾದಸುಧಾ ರಸಂಬು ಇಲನು ನರಾಕೃತಿ ಆಯೆರಾ' ಎನ್ನುವ ಕೃತಿಯಲ್ಲಿ ಅದ್ಭುತ ರೀತಿಯಲ್ಲಿ ನೀಡಿದ್ದಾರೆ. ತಮ್ಮ ಆರಾಧ್ಯದೈವ ಶ್ರೀಮಹಾ ವಿಷ್ಣು ತೆಗೆದುಕೊಂಡ ಶ್ರೀರಾಮಾವತಾರದಲ್ಲಿ ಸಂಗೀತಕಲೆಯ ಪರಿಕರಗಳನ್ನು ಕಾಣುವ ಕಣ್ಣುಗಳು ತ್ಯಾಗರಾಜರದು. ಪೂಜ್ಯ ರೆನ್ನುತ್ತಾರೆ, 'ವೇದಾಗಮ ಶಾಸ್ತ್ರಪುರಾಣಾದಿಗಳಿಗೆ ಆಧಾರವಾದ ಪ್ರಣವನಾದವು, ನಾದಸುಧಾರಸವು ಶ್ರೀರಾಮಚಂದ್ರನೆಂಬ ನರಾಕೃತಿಯಾಯಿತು. ಸಂಗೀತದ ಮೂಲದ್ರವ್ಯವಾದ ಸಪ್ತಸ್ವರ ಗಳೇ ಕೋದಂಡವನ್ನಲಂಕರಿಸಿದ ಏಳು ಘಂಟೆಗಳು. ರಾಗ

ವೆಂಬುದೇ ಶ್ರೀರಾಮನ ಕೋದಂಡವೆಂಬ ಧನುಸ್ಸು; ಘನ ನಯ ದೇಶ್ಯಗಳೆಂಬ ರಾಗಗಳ ಮೂರುಗುಣಗಳೇ, ವಿಧಗಳೇ, ಈ ಕೋದಂಡದ ಮುಪ್ಪುರಿಯಾದ ಹಗ್ಗ; ನಿರತಿ ಗತಿ ಎಂಬುದೇ ಈ ಕೋದಂಡದಿಂದ ಹೋಗುವ ಬಾಣ. ಅಂದರೆ, ಈ ಕೋದಂಡ ದಿಂದ ಗುರಿಯನ್ನು ಅಥವಾ ಲಕ್ಷ್ಯವನ್ನು ಉದ್ದೇಶಿಸಿ ಮೇಲಿಂದ ಮೇಲೆ ಹೊರಟು ತೀವ್ರಗತಿಯಲ್ಲಿ ಗುರಿಯನ್ನು ಮುಟ್ಟುವ ಬಾಣಪರಂಪರೆ ಎಂದರ್ಥ. ಸಂಗೀತರಚನೆಯಲ್ಲಿನ ಸಂಗತಿ ಸಂದರ್ಭಗಳೆಂಬುವೇ ಶ್ರೀರಾಮನ ಮಧುರವಾದ ಮಾತುಗಳು. ಇಂಥ ನಾದಸುಧಾರೂಪಿ ಶ್ರೀರಾಮನನ್ನು ನಿರಂತರವಾಗಿ ಭಾವಿಸಿ ಭಜಿಸುವುದೇ ನಾದೋಪಾಸಕರಾದ ಸಂಗೀತಾಭ್ಯಾಸಿಗಳ ಪರಮ ಸೌಭಾಗ್ಯ' ಎನ್ನುತ್ತಾ ಕೃತಿಯನ್ನು ಮುಗಿಸುತ್ತಾರೆ.

ಇಂಥ ಸಂಗೀತ ಪರಿಕರಗಳಿಗೂ ದೈವಕ್ಕೂ ಸ್ವಾರಸ್ಯಪೂರ್ಣ ಸಮನ್ವಯಗಳನ್ನು ಸಂಗೀತರಚನೆಗಳಲ್ಲಿ ಸಾಧಿಸಿದ ಆಧ್ಯಾತ್ಮಿಕ ಕತೆಯ ಈ ಮಜಲಿನ ಭಾವನೆಗಳು ವಿರಳ. ಸಂಗೀತ ತ್ರಿಮೂರ್ತಿ ಗಳಲ್ಲಿ ಅತಿಶಯವಾದ ಭಕ್ತಿಗೌರವಗಳಿಂದ ಅವರ ಆಶೀರ್ವಾದ ಕ್ಕಾಗಿ ಎಂದೆಂದೂ ಕೋರುತ್ತೇನೆ. ನನ್ನ ಹಲವು ಕೃತಿಗಳಲ್ಲಿ ದೈವದ ಕಲೆಯ ಅಭೇದತ್ವದ ಮಜಲಿನ ಆಧ್ಯಾತ್ಮಿಕತೆ ಅಭಿವ್ಯಕ್ತವಾಗಿರುವು ದರ ಜತೆಗೆ, ಅದೇ ಅಭೇದತ್ವವನ್ನೂ, ಸ್ವಾರಸ್ಯಪೂರ್ಣ ಸಮನ್ವಯ ಸಾಧನೆಯ ಮಜಲಿನ ಆಧ್ಯಾತ್ಮಿಕತೆಯ ಅಭಿವ್ಯಕ್ತಿಯನ್ನೂ ಕಾಣ ಬಹುದು. ಹ್ರಸ್ವತೆಗಾಗಿ ರಚನೆಗಳ ತೆಲುಗಿನ ಅಥವಾ ಸಂಸ್ಕೃತದ ಮೂಲಪಾಠವನ್ನು ಕೈಬಿಟ್ಟು ಕನ್ನಡದ ಅನುವಾದ ಅಥವಾ ತಾತ್ಪರ್ಯಗಳನ್ನು ಮಾತ್ರ ಸಮರ್ಪಿಸುತ್ತೇನೆ.

ಸಂಗೀತ ಕಲೆಯ ಪೂಜಾ ಪರಿಕರಗಳಿಗೂ ದೈವದ ಪೂಜಾ ಪರಿಕರಗಳಿಗೂ ಇಲ್ಲಿದೆ ಒಂದು ಸಮನ್ವಯ. ಸಾರಮತಿ ರಾಗದ ಆದಿತಾಳದ ಕೃತಿ ಇದು:

'ರಾಗಸಾರ ಮತಿಮುಖ್ಯವೆಂದರಿತು ಚೆಂದದ ಕೃತಿಗಳ ರಚಿಸಿ ಪಾಡುವುವೇ ಲಲಿತೆಯ ಪೂಜೆ. ರಾಗಸುಧಾನಂದ ಸಾಗರದ ಲೀಜಿದವರು, ಮೂರು ತಾಯಂದಿರ ತಾಯಿ ಆದಿಶಕ್ತಿ ವಿಶ್ವೇ ಶ್ವರಿಯ ಕೃಪಾಸಾಗರದಲೀಜಿದವರೇ ನಿಜ.'

'ಪಂಚದಶಗಮಕಗಳೇ ಪಂಚದಶಾಕ್ಷರಿ ಮಂತ್ರದ ಬೀಜಗಳು. ರಾಗಗಳಲ್ಲಿನ ಸ್ವರಸಂಚಾರಗಳೇ ಲಲಿತೆಯ ಅಲಂಕಾರದ ಆಭ ರಣಗಳ ಬಂಗಾರ. ದೇವಿಯ ನಾಮವೈಭವವೇ ಕೃತಿಯ ಸಾಹಿತ್ಯ. ಮಂತ್ರದ ಜಪದ ಲಯವೂ ಆವೃತ್ತಿಗಳೇ ಕೃತಿಯ ಲಯ ತಾಳಗಳು. ತ್ರಿಶ್ರ ಚತುರಶ್ರಾದಿ ಲಘುಜಾತಿಗಳೇ ದೇವಿಯ ಪೂಜೆಗೆ ಅರ್ಪಿಸುವ ಐದು ಜಾತಿಗಳ ಪುಷ್ಪಗಳು. ಘನ-ನಯ-ದೇಶ್ಯಗಳೆಂಬ ರಾಗವಿಧಗಳೇ ಪೂಜೆಯಲ್ಲಿ ಬಳಸುವ ಅರಿಶಿನ-ಕುಂಕುಮ-ಚಂದ್ರ ಚೂರ್ಣಗಳು. ಅಂತರ್‌ಬಹಿಗಳ ಶುದ್ಧೀಕರಣ ಕ್ಕಾಗಿರುವ ಆಚಮನವೇ ಸಂಗೀತಭ್ಯಾಸ ವಿನಿಕೆಗಳಿಗೆ ಅತ್ಯಾವಶ್ಯಕ ವಾದ 'ಶ್ರುತಿ.' (ತಂಬೂರಿ ನೀಡುವುದು). ನಾದಯೋಗವೇ ದೀಪ ಸಮರ್ಪಣ. ಹೀಗೆ ಭಕ್ತಿಯಿಂದ ರಚಿಸಿ ಸಮರ್ಪಿಸಿದ ಕೃತಿಯೇ-ವಾಗ್ಗೇಯವೇ-ದೇವಿಗೆ ನೈವೇದ್ಯ' ಎನ್ನುವಾಗ ಸಂಗೀತ ಪೂಜೆ - ದೇವಿಪೂಜಾ ವಿಧಾನ, ಪರಿಕರಗಳಲ್ಲಿ ಸಮನ್ವಯ ಸಿದ್ಧಿ ಯಾಗಿ, ವಿಶೇಷವಾದ ಅಭೇದತತ್ವಪೂರ್ಣ ಆಧ್ಯಾತ್ಮಿಕತೆ ಸಾಧಿತ ವಾಯಿತು.

ಸುರಟಿ ರಾಗದ ಶ್ರೀ ವೇಂಕಟೇಶ್ವರನ ಸ್ತುತಿಯ ಸಂದರ್ಭದ ಈ ಕೃತಿಯಲ್ಲಿ ಮತ್ತೊಂದು ವಿಧದ ಆಧ್ಯಾತ್ಮಿಕ ಸಮನ್ವಯವಿದೆ:

'ಮೋದಾಚಲವನ್ನೇ, ಎಂದರೆ, ಬೆಟ್ಟದಷ್ಟು ಆನಂದವನ್ನೇ ಭಕ್ತರಿಗೆ ಅನುಗ್ರಹಿಸುವ ಶೇಷಾಚಲೇಶನನ್ನು 'ನಾದಾಚಲದೀಪ' ಎಂದು ಕರೆದರೆ ಮೆಚ್ಚುವವ ಶ್ರೀನಿವಾಸ. ಶ್ರೀನಿವಾಸನ ಆವಾಸ ವಾದ ಆ ನಾದಾಚಲಗಳೇ ಸಪ್ತಸ್ವರಗಳೆಂಬ ಏಳುಗಿರಿಗಳು. ದೇವ ದೇವನಾದ ಆ ವಿಶ್ವೇಶ ವೆಂಕಟೇಶ್ವರನೇ ಆ ಸಪ್ತಸ್ವರಾಚಲದ ಮೇಲಿನ ದೀಪ. ಆ ದೀಪರೂಪಿ, ಅರ್ಥಾತ್ ಪರಂಜ್ಯೋತಿಯು (ತನ್ನ ಸಾನ್ನಿಧ್ಯದಿಂದ) ಬೆಳಗಿಸುವ ವಿವಿಧ ದೇವಾಲಯಗಳೇ ರಾಗಗಳಲ್ಲಿನ ಗಮಕವಿಧಗಳು. ಶ್ರೀನಿವಾಸನಾದ ಆ ಮಹಾವಿಷ್ಣು ವಿನ ದ್ವಾದಶ ನಾಮಗಳೇ ಸ್ವರಾಷ್ಟಕದ ದ್ವಾದಶ ಸ್ವರಭೇದಗಳು. ಅವನ ಪಾದಗಳಿಗರ್ಪಿತವಾದ ಭಕ್ತರ ಸ್ತುತಿ ನುತಿಗಳೇ ಸಂಗೀತ ದಲ್ಲಿನ ಪ್ರಬಂಧಗಳು (ವಾಗ್ಗೇಯಗಳು). ಆ ಶ್ರೀಕರ ಶೇಷಾದ್ರಿ ಶೇಖರನ ಭೂಷಿಸುವ ಆಭರಣಗಳೇ ರಾಗಗಳು. ಬಹು ಬ್ರಹ್ಮೋ ತ್ಸವಗಳಿಂದ ವಿಜೃಂಭಿಸುವ ಗಾನಲೋಲನೀ ಏಳುಗಿರಿಗಳ ಒಡೆಯ. ವೇದಾಗಮಗಳಿಗೆಲ್ಲ ಲಕ್ಷ್ಯ ಈತನೇ, ಪದ್ಮಾವತೀ ವಲ್ಲಭನಾದ ಈ ಸುರಬೃಂದತಿಲಕ. ಈ ಶೇಷಗಿರಿವಾಸ ಭಕ್ತರಿಗೆ ನೀಡುವುದು ಆನಂದಗಿರಿಯನ್ನೇ.'

ನಾನೇ ಸೃಷ್ಟಿಸಿದ ರಾಗಗಳಲ್ಲೊಂದಾದ 'ಸ್ಮೃತಿ'ರಾಗದಲ್ಲಿನ ನನ್ನ ದೇವೀಸ್ತುತಿ 'ಸ್ಮೃತ್ಯೈ ನಮಸ್ತೇ' ಸಂಸ್ಕೃತ ಕೃತಿಯಲ್ಲಿ ಕಲೆಯ ಮತ್ತು ದೈವದ ಅಭೇದ ಭಾವದ ಆಧ್ಯಾತ್ಮಿಕತೆ ತುಳುಕುತ್ತದೆ:

**ಸ್ಮೃತ್ಯೈ ನಮಸ್ತೇ ಯೈ ಪರಾಶಕ್ತ್ಯೈ ।**
**ಶ್ರುತ್ಯೈ ಸುಕೃತಿರತ್ಯೈ ಬೃಹತ್ಯೈ ಭಗವತ್ಯೈ ।**
**ಸ್ಮೃತ್ಯೈ ನಮಸ್ತೇ ॥**

**ನಾದರೂಪಾಯೈ ಲಯಾತ್ಮಿಕಾಯೈ ಪ್ರಣವ**
**ನಾದಜನಿತ ಸ್ವರಸಪ್ತಮಾತೃಕಾರೂಪಾಯೈ ।**
**ದ್ವಾದಶಸ್ವರಸ್ಥಾನಾನ್ವಿತ ಗಮಕರೂಪಾಯೈ**
**ಪ್ರಬಂಧಾದಿಲಕ್ಷ್ಯಗರ್ಭಾಯೈ ಪ್ರಭಾಯೈ।**
**ಭೇದಾಜ್ಞಾನಪ್ರಭಂಜನಾಯೈ**
**ಭವರಂಜನಾಯೈ ನಿರಂಜನಾಯೈ।**
**ತ್ರಿಬಾಧಾಪಹಾಯೈ ನಿಜಸುಖಾವಹಾಯೈ**
**ತ್ರಿಪುರಸುಂದರ್ಯೈ ವಿಶ್ವೇಶ್ವರ್ಯೈ ॥**

**ಸ್ಮೃತ್ಯೈ ನಮಸ್ತೇ ॥**

ಸಂಗೀತಕಲೆಯ ಉನ್ನತ ಆದರ್ಶಗಳ ಹಾಗೂ ಮೌಲ್ಯಗಳ ಅನುಷ್ಠಾನಗಳಿಗೆಂದೇ ಸಂದೇಶರೂಪದಲ್ಲಿ ರಚಿತವಾದ ನನ್ನ ಅದೆಷ್ಟೋ ಕೃತಿಗಳಲ್ಲಿ ಆ ಆದರ್ಶಗಳೂ ಮೌಲ್ಯಗಳೂ ಪಡೆದುಕೊಳ್ಳುವುದು ಆಧ್ಯಾತ್ಮಿಕ ತಿರುವನ್ನೇ.

ಮೋಕ್ಷದಾಯಕವಾದುದು ಈ ಅದ್ಭುತ ಸುಂದರವಾದ ಭಾರತೀಯ ಸಂಗೀತ ಪದ್ಧತಿ. ಅಷ್ಟೇ ಅಲ್ಲ, ಇದರ ಪವಿತ್ರ ಪ್ರತಿನಿಧಿಯೂ, ವೇದಕಾಲದಿಂದ ಆಧ್ಯಾತ್ಮಿಕ ನೆಲೆಗಟ್ಟಿನಲ್ಲೇ ಉಲ್ಲೇಖಿತವಾದ, ವರ್ಣಿತವೂ ಆದ ವೀಣಾವಾದ್ಯವೂ ಮೋಕ್ಷದಾಯಕವೆಂಬ, ಮಹರ್ಷಿ ಯಾಜ್ಞವಲ್ಕ್ಯರ ಘೋಷಣೆಯನ್ನು ಒಂದು ಸಂಗೀತಕೃತಿಯಾಗಿಯೇ ಬಾಗೇಶ್ರೀ ರಾಗದಲ್ಲಿ ರಚಿಸಲಾಗಿದೆ. ತೆಲುಗಿನಲ್ಲಿರುವ ಈ ಕೃತಿಯ ಕನ್ನಡದಭಾವ ಹೀಗಿದೆ:

'ವೀಣಾವಾದನತತ್ತ್ವಜ್ಞನ್ ಶ್ರುತಿಜಾತಿವಿಶಾರದನ್ ತಾಲಜ್ಞನಾದವಂಗೆ ಮೋಕ್ಷಂ ಸುಲಭಸಾಧ್ಯವೆಂದು ಋಷಿವಾಕ್ಕು. ವೀಣಾವಾದನತತ್ತ್ವಜ್ಞನೆಂದು ಮಹತಿಯಂ ಪಿಡಿದ ನಾರದನಂ ಕೊಂಡಾಡಿ ಸಮರ್ಥನೆಗೈದುದು ತ್ಯಾಗರಾಜನ ವಾಕ್ಕು. ವೀಣಾವಾದನದೊಳ್ ಚೆಂದದ ಗಾತ್ರಧರ್ಮವೇ ತಕ್ಕುದೆಂದು ಚೆಲುವಿನಂ ಶ್ರೀವಾಣಿ ಪೇಳ್ದ ವಚನಮೇ ವೀಣಾಪಾಣಿ ವಿಶ್ವೇಶ್ವರನ ವಾಕ್ಕು.'

ಮೇಲಾಗಿ ವೇದಕಾಲದ ಯಜ್ಞಸಂದರ್ಭಗಳಲ್ಲಿ ಯಜ್ಞಕರ್ತನ ಧರ್ಮಪತ್ನಿ ಹಾಡಿಕೊಂಡು ವೀಣೆ ನುಡಿಸಬೇಕಾಗಿದ್ದ ಅಷ್ಟು ಪವಿತ್ರವಾದ ಸ್ಥಾನ ವೀಣೆಗಿದೆ. ವೀಣೆಯು ಮಂಗಳತೆಯ ಪ್ರತಿರೂಪವೇ ಎನ್ನುತ್ತದೆ ತೈತ್ತಿರೀಯ ಬ್ರಾಹ್ಮಣ. ಲಾಕ್ಷಣಿಕರ ಬರಹಗಳಲ್ಲಿ ಈ ಮಾತಿನ ಪ್ರತಿಧ್ವನಿಯನ್ನು ಕಾಣುತ್ತೇವೆ: ವೀಣೆಯ ದಂಡದಲ್ಲಿ ಶಂಭು, ತಂತಿಗಳಲ್ಲಿ ಉಮೆ, ಕಕುಭದಲ್ಲಿ ಲಕ್ಷ್ಮೀಪತಿ, ಕಕುಭದ ಮೇಲೆ ಅಂಟಿಕೊಂಡಿರುವ ಪತ್ರಿಕೆಯಲ್ಲಿ ಲಕ್ಷ್ಮೀ (ಇಂದಿರಾ), ನಾಗಪಾಶವೆನ್ನಲಾಗುವ 'ದೋರಕ'ದಲ್ಲಿ ವಾಸುಕಿ, ಪತ್ರಿಕೆಯಲ್ಲಿನ ಸೂಕ್ಷ್ಮಸ್ಥಾನದಲ್ಲಿ ಚಂದ್ರ, ಸಾರಿಕೆಗಳೆನ್ನಲಾದ ವೀಣೆಯ ಮೆಟ್ಟಿಲುಗಳಲ್ಲಿ ರವಿ, ತುಂಬದಲ್ಲಿ, ಅಂದರೆ ವೀಣೆಯ ಕೊಡದಲ್ಲಿ ಬ್ರಹ್ಮ, ಕೊಡದ ಮುಚ್ಚಳದ ಮಧ್ಯೆ ಸರಸ್ವತಿ—ಹೀಗೆ ಸಕಲ ದೇವದೇವತೆಗಳೂ ನೆಲೆಸಿರುವ ವೀಣಾವಾದ್ಯವು ಸರ್ವದೇವಮಯಿ. ಆದುದರಿಂದಲೇ ಸರ್ವಮಂಗಳೆಯಾಗಿ ದರ್ಶನ ಸ್ಪರ್ಶನ ಮಂತ್ರದಿಂದಲೇ ಭೋಗಸ್ವರ್ಗಾಪವರ್ಗಗಳನ್ನು ಅನುಗ್ರಹಿಸುತ್ತದೆಯಷ್ಟೇ ಅಲ್ಲ; ಬ್ರಹ್ಮಹತ್ಯಾದಿ ಘೋರ ಪಾಪಗಳಿಂದ ಪತಿತರಾದವರಿಗೆ ಬಿಡುಗಡೆ ದೊರೆಯುತ್ತದೆ. ಈ ಆಶ್ವಾಸನೆ ದೊರೆಯುವುದು ವೀಣಾವಾದ್ಯದ ಮತ್ತು ಅದು ಮಹತ್ವಪೂರ್ಣ ಪ್ರತೀಕವಾಗಿರುವ ನಮ್ಮ ಸಂಗೀತದ ಆಧ್ಯಾತ್ಮಿಕ ಮೌಲ್ಯದ ಪರಾಕಾಷ್ಠೆಯೇ ಅಲ್ಲವೆ? ಎಂದೇ, ಭಾರತೀಯರಾದ ನಮಗೆ, ವಿಶ್ವದಲ್ಲೇ ಸಾಟಿ ಇಲ್ಲದ ನಮ್ಮ ಸಂಗೀತ ಸಂಸ್ಕೃತಿಯ ಶುದ್ಧ, ಸಮರ್ಥ ಪ್ರತಿನಿಧಿ-ಪ್ರತೀಕಗಳಾದ ಕರ್ಣಾಟಕ ಸಂಗಿತದ ಸಂಕೀರ್ಣತೆಯಲ್ಲಿನ ಸೌಂದರ್ಯ ಮತ್ತು ಸಂಕೀರ್ಣತೆಗಳ, ಕಲಾಮೌಲ್ಯಗಳ ಔನ್ನತ್ಯದ ಬಗ್ಗೆ ನಮ್ಮ ಪೂಜ್ಯತೆಗೆ ಅಳತೆಯುಂಟೆ, ನಮ್ಮ ಹೆಮ್ಮೆಗೆ ಅಳತೆಯುಂಟೆ? ❇

# ಹಿಂದೂಸ್ತಾನಿ ಸಂಗೀತದಲ್ಲಿ ಭಕ್ತಿ

ಪ್ರೊ . ಕೆ.ಬಿ. ಪ್ರಭುಪ್ರಸಾದ್



ಭಾರತೀಯ ಸಂಗೀತ ಪರಂಪರೆಯಲ್ಲಿ ಹಿಂದುಸ್ತಾನೀ ಸಂಗೀತ ಹಲವು ಬದಲಾವಣೆ, ಬೆಳವಣಿಗೆ ಹಾಗೂ ವಿಸ್ತರಣೆಯನ್ನು ಕಂಡುಕೊಂಡು ಸಮೃದ್ಧಗೊಂಡರೂ ಅದರ ತಾಯಿಬೇರು ಭಾರತೀಯ ಆಧ್ಯಾತ್ಮಿಕ ನೆಲವನ್ನು ಇಂದಿಗೂ ಭದ್ರವಾಗಿ ಹಿಡಿದಿಟ್ಟು ಕೊಂಡಿರುವುದು ಸತ್ಯ . ಈ ಕುರಿತು ಬರೆದಿರುವ ಲೇಖಕರು ನಿವೃತ್ತ ಆಂಗ್ಲ ಪ್ರಾಧ್ಯಾಪಕರು. ಉತ್ತಮ ವಿದ್ವಾಂಸರೂ, ಲೇಖಕರೂ, ಗೀತರಚನಕಾರರೂ ಆಗಿರುವ ಅವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.

**ಭಾ**ರತೀಯ ಸಂಗೀತ ಪರಂಪರೆಯಲ್ಲಿ ಭಕ್ತಿಯೇ ಪ್ರಧಾನ. ಭಕ್ತಿ ಎಂಬುದು ಭಗವಂತನನ್ನು ಒಲಿಸಿಕೊಳ್ಳುವುದಕ್ಕೆ ಹಾಗೆಯೇ ಆತ್ಮ ಸಾಕ್ಷಾತ್ಕಾರಕ್ಕೊಂದು ಮಾರ್ಗ. 'ನಾದಪ್ರಿಯನೂ ಅಲ್ಲ , ವೇದ ಪ್ರಿಯನೂ ಅಲ್ಲ , ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ', ಎಂದು ಬಸವಣ್ಣ ಒಂದು ಸಂದರ್ಭದಲ್ಲಿ ಹೇಳಿದರೂ, 'ಬತ್ತೀಸ ರಾಗ ಹಾಡಯ್ಯಾ, ಉರದಲೊತ್ತಿ ಬಾರಿಸು ಕೂಡಲಸಂಗಮ ದೇವ' ಎಂದು ಹೇಳುವ ಬಸವಣ್ಣನವರು ಸಂಗೀತಪ್ರಿಯರೂ ಹೌದು. ತಮ್ಮ ದೇಹವೇ ದೇಗುಲ ಎಂದವರು ತಮ್ಮ ದೇಹವನ್ನೇ ಒಂದು ಸಂಗೀತ ವಾದ್ಯವನ್ನಾಗಿ ಮಾಡಿ ಮೂವತ್ತೆರಡು ರಾಗ ಗಳನ್ನು ಹಾಡು, ಮನಮುಟ್ಟುವ ಹಾಗೆ ಬಾಜಿಸು ಎಂದು ಶಿವ ನನ್ನು ಪ್ರಾರ್ಥಿಸುತ್ತಾರೆ, ಭಕ್ತಿ ಭಂಡಾರಿಯೇ ಆದ ಬಸವಣ್ಣನವರು.

ಮಧ್ಯಕಾಲೀನ ಭಾರತದಲ್ಲಿ ಭಕ್ತಿಯ ಮಹಾಪೂರವೇ ಪ್ರವ ಹಿಸಿತು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ; ಮೀರಾ, ಸೂರ ದಾಸ್, ಕಬೀರ್, ಚೈತನ್ಯಪ್ರಭು, ತುಳಸೀದಾಸ್; ಕರ್ನಾಟಕದಲ್ಲಿ ಪುರಂದರದಾಸರು, ಕನಕದಾಸರು, ಹೀಗೆಯೇ ತಮಿಳುನಾಡಿನಲ್ಲಿ, ತೆಲುಗುದೇಶದಲ್ಲಿ, ಕೇರಳದಲ್ಲಿ ಭಕ್ತಿಸಂಗೀತದ ಹೊಳೆ –ಅದಕ್ಕೂ ಮುನ್ನ ಶರಣರ ಭಕ್ತಿ ಚಳುವಳಿಯಲ್ಲಿ – ಅದರ ಮಾಧುರ್ಯ, ನಖ–ಶಿಖಾಂತ ತುಂಬಿತು.

ಓಂಕಾರದ ಝೇಂಕಾರದಿಂದ ಆರಂಭವಾದುದು ಮಾನವನ ಹುಟ್ಟಿನಿಂದ – ಸಂಸ್ಕೃತಿಯ ವಿಕಾಸದಿಂದ – ಒಂದಲ್ಲ ಒಂದು ರೀತಿ ಬದುಕಿಗೆ ಜೊತೆಯಾಗಿ ಜಾನಪದವಾಗಿ ಹೊಮ್ಮಿತು. ಜಾನ ಪದದಲ್ಲೂ ನಾನಾ ರಸಭಾವಗಳ ಹಾಡುಗಳು ಬೀಸುವಾಗ, ಕುಟ್ಟುವಾಗ, ಗಾಡಿ ಹೊಡೆಯುವಾಗ, ಮಗುವಿಗೆ ಲಾಲಿ ಹಾಡು ವಾಗ, ದೇವರನ್ನು ಕೊಂಡಾಡಲು ಸಾವಿರಾರು ಹಾಡುಗಳು ರೂಪುಗೊಂಡವು. ಹಾಡಿ ಹಾಡಿ ಕೇಳಿ ಕೇಳಿ ನೆನಪಿನಲ್ಲಿ ಉಳಿದವು. ಅಲ್ಲಿಯೂ ಭಕ್ತಿಯೇ ಜೀವಾಳ.

ನಾರದ–ತುಂಬುರರು, ಗಂಧರ್ವರು, ಭಗವನ್ನಾಮ ಸಂಕೀ ರ್ತನೆಗಳು ಕಲ್ಪನೆಯನ್ನು ತುಂಬಿದವು. ಕೇಳಿ ತಲೆ ತೂಗಿದ ಭಗವಂತ,

ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇಷು ವಾ ।
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥

— ಎಂದು ಉದ್ಗರಿಸಿದ. ಗಾನಪ್ರಿಯೆ-ನಾಟ್ಯಪ್ರಿಯೆ ದೇವಿ ಶಾರದೆಯ ಕೈಗೆ ವೀಣೆ, ಕೃಷ್ಣನ ಕೈಗೆ ಕೊಳಲು, ಶಿವನ ಕೈಗೆ ಡಮರುಗ ಬಂದವು. ಶಂಕರನಿಂದ ರಾಗರಾಗಿಣಿಯರು ಸೃಷ್ಟಿಯಾದರು. ಸಂಗೀತ ಒಂದು ಸಾಗರ, ಎಂಥೆಂಥ ಸಂಗೀತ ಸಾಮ್ರಾಟನೂ ತಾನು ಅದರಲ್ಲಿಯ ಒಂದು ಬಿಂದು ಮಾತ್ರ ಎಂಬ ವಿನಯ ವಿದ್ದರೆ ಮಾಧುರ್ಯ ಉಳಿಯಿತು. ಅಹಂಕಾರದಿಂದ ಬೀಗಿದಾಗ ರಾಗರಾಗಿಣಿಯರು ಅಂಗಾಂಗ ವಿಹೀನರಾಗಿ ನರಳಿದರು.

ಪ್ರಕೃತಿಯಿಂದ ಸಹಜವಾಗಿ ಹೊಮ್ಮಿದ ನಾದಗಳನ್ನು ಸ್ವರಗಳನ್ನಾಗಿ ಗುರುತಿಸಿ, ಅವುಗಳನ್ನು ವಿವಿಧ ಕ್ರಮಗಳಲ್ಲಿ ಜೋಡಿಸಿ ಅವುಗಳನ್ನು ಲಯಬದ್ಧವಾಗಿ ತಾಳ ಹಾಕಿಕೊಂಡು ಹಾಡಿದಾಗ ವಿವಿಧ ರಾಗಗಳು ಹುಟ್ಟಿಕೊಂಡವು: ಸ್ವರ-ಲಯ ಸಂಗೀತದ ಎರಡು ಮುಖ್ಯ ಅಂಗಗಳು. 'ಲಯ' ಗ್ರಹತಾರೆಗಳನ್ನು ಒಂದು ಶಿಸ್ತಿನಲ್ಲಿ ನಡೆಸುತ್ತಿರುವ ಋತ ಎನ್ನಬಹುದು. ಆ ಲಯ ಕೊಂಚ ತಪ್ಪಿದರೂ ವಿಶ್ವವಿನಾಶ. ಹೃದಯದ ಮಿಡಿತದಲ್ಲೂ ಒಂದು ಲಯವಿದೆ.

ಸ್ವರಗಳು ಏಳು. ತ್ರಿಸ್ಥಾಯಿಯಲ್ಲಿ (ಮಂದ್ರ-ಮಧ್ಯ-ತಾರ) ಇವೇ ಸ್ವರಗಳ ನೃತ್ಯ! ಜಾನಪದ ಸಂಗೀತ ಶಾಸ್ತ್ರೀಯವಾದಾಗ ಭಾರತದಲ್ಲಿ ಉತ್ತರಾದಿ, ದಕ್ಷಿಣಾದಿ ಶೈಲಿಗಳು ಹುಟ್ಟಿಕೊಂಡವು. ಉತ್ತರಾದಿ ಸಂಗೀತವನ್ನು ಈಗ 'ಹಿಂದೂಸ್ತಾನಿ' ಎಂದು ಕರೆಯುತ್ತೇವೆ. ದಕ್ಷಿಣಾದಿ ಸಂಗೀತವನ್ನು 'ಕರ್ನಾಟಕ ಸಂಗೀತ' ಎನ್ನುತ್ತೇವೆ. ಕರ್ನಾಟಕದ ಪುರಂದರದಾಸರೇ ಸಂಗೀತದ ಸರಳ ಪಾಠ ಪದ್ಧತಿಯನ್ನು ಆರಂಭಿಸಿದರು. ಅವರನ್ನು 'ಕರ್ನಾಟಕ ಸಂಗೀತದ ಪಿತಾಮಹ' ಎಂದು ಗೌರವಿಸುತ್ತೇವೆ.

ಉತ್ತರಾದಿ ಶಾಸ್ತ್ರೀಯ ಸಂಗೀತ ಪದ್ಧತಿಯ ಮೇಲೆ ಹೊರಗಿನಿಂದ ಬಂದ ಪರ್ಶಿಯಾ, ಮತ್ತು ಕೊಲ್ಲಿ ದೇಶಗಳ ಸಂಗೀತದ ಪ್ರಭಾವ ಗಾಢವಾಯಿತು. ಮುಸಲ್ಮಾನ್ ಆಕ್ರಮಣಕಾರರು ಕಾಲಕ್ರಮದಲ್ಲಿ ಇಲ್ಲೇ ನೆಲೆಸಿ, ರಾಜ್ಯಗಳನ್ನು ಕಟ್ಟಿದ ಮೇಲೆ ಭಾರತೀಯ ಕಲೆ-ಸಂಸ್ಕೃತಿಗಳಲ್ಲಿ ಅನೇಕ ಬದಲಾವಣೆಗಳಾಗಿ ಕಿವಿಗೆ ಇಂಪು ಮನಸ್ಸಿಗೆ ಆಹ್ಲಾದ ಹೆಚ್ಚುವಂತಹ ರೀತಿಯಲ್ಲಿ ಬೆಳವಣಿಗೆ ಆಯಿತು. ಸಂಗೀತದಲ್ಲೂ ಈ ಬೆಳವಣಿಗೆ ವಿಶೇಷವಾಗಿ ಕಂಡು ಬಂತು. ಸಂಗೀತ ಭಕ್ತಿಭಾವದಿಂದ ಕೂಡಿರಬೇಕು- ಅದೊಂದು ತಪಸ್ಸಾಗಿ, ನಾದಾನುಸಂಧಾನ - ಮೋಕ್ಷಕ್ಕೆ ಮಾರ್ಗ ಎಂಬ ದೃಢ ನಂಬಿಕೆ ಉಂಟಾಯಿತು. ಹಾಡುವ ದ್ರುಪದ್, ತಪ್ಪಾ, ಧಮಾರ್, ಖ್ಯಾಲ್, ಠುಮ್ರಿ, ತರಾನ, ಘಜಲ್, ಖವ್ವಾಲಿ ಲೌಕಿಕವಾಗಿ ಪ್ರೇಮ-ಶೃಂಗಾರಭಾವದಲ್ಲಿದ್ದರೂ ಅಲ್ಲೂ ರಾಮ, ಕೃಷ್ಣ, ಶಿವ, ದೇವಿ, ಇವರನ್ನು ಕುರಿತೇ ಇರುತ್ತವೆ. ಖಿಲ್ಜಿ ವಂಶದವರ ಕಾಲದ ಅಮೀರ್‌ಖುಸ್ರುವಿನ ಹೊಸ ಹೊಸ ಪ್ರಯೋಗಗಳಲ್ಲೂ ಭಕ್ತಿಯದೇ ಮೇಲುಗೈ. ರಾಧಾ-ಕೃಷ್ಣರ ಪ್ರೇಮವೂ ಆದರ್ಶಭಕ್ತಿಯ ಪ್ರತೀಕ. ಮುಂದೆ ಸೂಫೀ ಸಂಗೀತವಾಗಲಿ, ಬಾವುಲ್‌ರ ಹಾಡುಗಳಾಗಲಿ, ರವೀಂದ್ರ ಸಂಗೀತವಾಗಲಿ, ಭಕ್ತಿ ಭರಿತವೇ ಆಗಿವೆ. ಅಲ್ಲಿ ನಿರಾಕಾರ ಪರಮಾತ್ಮನ ಸ್ತುತಿಯನ್ನು ಕಾಣುತ್ತೇವೆ.

ಭಜನೆಗಳಲ್ಲಿ ಭಕ್ತಿಭಾವದ ನಾದಸಂಕೀರ್ತನೆ, ಸ್ತುತಿ ತುಂಬಿರುತ್ತವೆ. ಮೀರಾ ಸೂರದಾಸ್, ತುಳಸೀದಾಸ್‌ರ ಬಾಯಿಂದ ಸಹಜವಾಗಿ ಭಕ್ತಿಭಾವ ಲೋಕದಿಂದ ಹೊಮ್ಮಿದ ಭಜನೆಗಳಿಗೆ ಗಾಯಕರು ಸೂಕ್ತ ರಾಗಸಂಯೋಜನೆ ಮಾಡಿ, ಈಗ ಎಲ್ಲೆಲ್ಲೂ ಅವು ಜನಪ್ರಿಯವಾಗಿವೆ.

ಉತ್ತರದ ಹರಿ ಇಲ್ಲವೆ ರಾಮಭಕ್ತರ ಭಜನೆಗಳು, ಹಿಂದೂಸ್ಥಾನಿ ರಾಗಗಳಲ್ಲಿ ಹಾಗೂ ಶೈಲಿಯಲ್ಲಿ ಇವೆ. ವಚನಗಳಾಗಲಿ, ದಾಸರ ಪದಗಳಾಗಲಿ, ಹಿಂದೂಸ್ತಾನಿ ರಾಗ ಹಾಗೂ ಶೈಲಿಗಳಲ್ಲೇ ಹೆಚ್ಚಾಗಿ ಮನಸ್ಸನ್ನು ಸೆಳೆಯುತ್ತವೆ. ಭೀಮಸೇನ ಜೋಷಿ, ಕುಮಾರ ಗಂಧರ್ವ, ನಾಗರಾಜ ಹವಾಲ್ದಾರ್ ದಾಸರ ಕೀರ್ತನೆಗಳನ್ನು ಅತ್ಯಂತ ಭಾವಪೂರ್ಣವಾಗಿ ಭಕ್ತಿರಸ ಹೊಮ್ಮುವಂತೆ ಹಾಡಿದ್ದಾರೆ. ಹಾಗೆಯೆ ಮಲ್ಲಿಕಾರ್ಜುನ ಮನಸೂರ್, ಬಸವರಾಜ ರಾಜಗುರು, ಸೋಮನಾಥ ಮರಡೂರ್, ಸಿದ್ಧರಾಮೇಶ್ವರ ಜಂಬಲದಿನ್ನಿ ಶರಣರ ವಚನಗಳನ್ನು ಕೇಳುಗರ ಹೃದಯಗಳಲ್ಲಿ ನಿನದಿಸುವಂತೆ ಹಾಡಿದ್ದಾರೆ.

ವೆಂಕಟೇಶ ಕುಮಾರರಂತೂ ದಾಸರ ಕೀರ್ತನೆಗಳನ್ನು ವಚನಗಳನ್ನು ಅತ್ಯಂತ ಸೊಗಸಾಗಿ ಎಲ್ಲರನ್ನೂ ತನ್ಮಯಗೊಳಿಸುವಂತೆ ಹಾಡಿದ್ದಾರೆ.

ಮೀರಾಬಾಯಿಯ ಅನನ್ಯ ಕೃಷ್ಣಭಕ್ತಿ ಅವರ ಎಲ್ಲ ಹಾಡುಗಳಲ್ಲಿ ವ್ಯಕ್ತವಾಗುತ್ತದೆ. ರಾಜಮನೆತನದ ರಾಣಿ ಎಂಬ ಅಹಂಭಾವವಿಲ್ಲದೆ ಭಕ್ತಿತನ್ಮಯಳಾಗಿ ಅರಮನೆಯ ಹೊರಗೆ ರಸ್ತೆಗಳಲ್ಲಿ ಹಾಡುತ್ತ ನರ್ತಿಸುತ್ತ ಹೇಳುವ ಆಶುಭಜನೆ:

'ಪಗಘುಂಘುರ ಬಾಂಧಕರ ನಾಚೀರೇ...' ಎಂದು ಆರಂಭವಾಗುತ್ತದೆ. ಜನರೆಲ್ಲ 'ಮೀರಾ ಹುಚ್ಚಿಯಾಗಿ ಹೋಗಿದ್ದಾಳೆ ಗೆಜ್ಜೆ ಕಟ್ಟಿ ಬೀದಿಯಲ್ಲೆ ನರ್ತಿಸುತ್ತಿದ್ದಾಳೆ' ಎಂದರೆ, ಅರಮನೆಯ ಬಂಧುಗಳು, 'ಈಕೆ ನಮ್ಮ ಶ್ರೇಷ್ಠಕುಲವನ್ನು ನಾಶಮಾಡುತ್ತಿದ್ದಾಳೆ' ಎಂದು ಬೈಯುತ್ತಿದ್ದಾರೆ. ರಾಣಾ ವಿಷ ಕಳಿಸುತ್ತಾನೆ, ಮೀರಾ ನಗುತ್ತಾ ಅದನ್ನು ತೀರ್ಥವೆಂದು ಕುಡಿದುಬಿಡುತ್ತಾಳೆ. 'ನಾನೋ ಶ್ರೀಮನ್ನಾರಾಯಣನ ದಾಸಿಯಾಗಿ ಶಾಶ್ವತ ಆನಂದದಲ್ಲಿದ್ದೇನೆ.' – ಇದು ಈ ಹಾಡಿನ ಅರ್ಥ. ಸೂರದಾಸರ ಹಾಡಿದು:

**ಪ್ರಭೂ ಮೇರೆ ಅವಗುಣ ಚಿತ ನ ಧರೊ**
**ಸಮದರಸೀ ಹೈ ನಾಮ ತಿಹಾರೊ**
**ಇಕ ಲೋಹಾ ಪ್ರಜಾ ಮೇ ರಾಖತ**
**ಇಕ ರಹತ ವ್ಯಾಧ ಘರಪರ...**
**ಇಕ ಜೀವ ಇಕ ಬ್ರಹ್ಮ ಕಹಾವತ**
**ಸೂರದಾಸ ಝುಗರೋ**
**ಅಜ್ಞಾನಸೇ ಭೇದ ಹೋವೇ**
**ಜ್ಞಾನಿ ಕಾಹೇ ಭೇದ ಕರೊ..**



ಪರಿವ್ರಾಜಕರಾಗಿ ಸಂಚರಿಸುತ್ತ ಸ್ವಾಮಿ ವಿವೇಕಾನಂದರು ಖೇತ್ರಿ ಸಂಸ್ಥಾನದ ಮಹಾರಾಜ ಅಜಿತ್‌ಸಿಂಗನ ಅತಿಥಿಯಾಗಿದ್ದಾಗ ಮನ ಕರಗುವಂತಹ ಒಂದು ಘಟನೆ ನಡೆಯಿತು. ಒಂದು ಸಂಜೆ ಮಹಾರಾಜನ ಆಸ್ಥಾನದಲ್ಲಿ ಗಾಯಕಿಯೊಬ್ಬಳ ಸಂಗೀತ ಏರ್ಪಾಟಾಗಿತ್ತು. ಆಕೆ ಒಬ್ಬ ವೇಶ್ಯೆ. ಮಧುರವಾಗಿ ಹಾಡುತ್ತಿದ್ದಳು. ಸಂಗೀತ ನಡೆಯುತ್ತಿದ್ದಂತೆ ಮಹಾರಾಜ ಗಾಯನ ಕೇಳಲು ಬರುವಂತೆ ಸ್ವಾಮೀಜಿಯವರಿಗೆ ಹೇಳಿ ಕಳಿಸಿದ. ಸ್ವಾಮೀಜಿ ಅಲ್ಲೇ ಸಮೀಪದಲ್ಲಿದ್ದ ತಮ್ಮ ಕೋಣೆಯಲ್ಲಿದ್ದರು. ಸಂನ್ಯಾಸಿಯಾಗಿ ತಾವು ಅಲ್ಲಿಗೆ ಬರುವಂತಿಲ್ಲ ಎಂದು ಉತ್ತರಿಸಿದರು. ಹಾಡುತ್ತಿದ್ದ ಗಾಯಕಿಗೆ ಅದು ತಿಳಿಯಿತು. ಆಕೆಗ ತೀವ್ರವಾದ ನಿರಾಶೆಯಾಗಿ ದುಃಖ ಉಮ್ಮಳಿಸಿತು. ತನ್ನ ಅಂತರಂಗವನ್ನೇ ತೆರೆದಿಟ್ಟ ಹಾಗೆ ಸೂರದಾಸರ ಈ ಹಾಡನ್ನು ಹಾಡಿದಳು. ನರ್ತಕಿಯ ಮಧುರ ಕಂಠದ ಮೂಲಕ ಹಾಡು ಗಾಳಿಯಲ್ಲಿ ತೇಲಿ ಸಾಗಿ ಸ್ವಾಮೀಜಿಯ ಕಿವಿಗೆ ಕೇಳಿಸಿತು. ಸ್ವಾಮೀಜಿ ಕೇಳುತ್ತ ಬೆಚ್ಚಿದರು. 'ಪ್ರಭು, ಸಮದರ್ಶಿ ಎಂಬ ಹೆಸರು ನಿನ್ನದು. ನನ್ನ ಅವಗುಣವನ್ನು ಚಿತ್ತದಲ್ಲಿಟ್ಟುಕೊಳ್ಳಬೇಡ. ಒಂದನ್ನು ಜೀವ ಎಂದು ಮತ್ತೊಂದನ್ನು ಬ್ರಹ್ಮ ಎಂದು ಕರೆಯುತ್ತಾರೆ. ಅಜ್ಞಾನದಿಂದ ಭೇದವುಂಟಾಗಿದೆ. ಜ್ಞಾನಿಗಳು ಭೇದವೆಣಿಸುವುದಿಲ್ಲ. ಒಂದು ಕಡೆ ಲೋಹದ ವಿಗ್ರಹವನ್ನು ಪೂಜಿಸುತ್ತಾರೆ. ಅದೇ ಲೋಹ ವ್ಯಾಧನ ಮನೆಯಲ್ಲಿ ಕತ್ತಿಯಾಗಿದೆ...' ಇತ್ಯಾದಿ.

ಸ್ವಾಮೀಜಿ ಅಂದುಕೊಂಡರು — 'ತಾನು ಸಂನ್ಯಾಸಿ ಪವಿತ್ರ, ಈಕೆ ವೇಶ್ಯೆ, ಪಾಪಿ ಎಂಬ ಭಾವನೆ ನನಗೇಕೆ ಬಂತು?!' ಪಶ್ಚಾತ್ತಾಪದಿಂದ ಬೆಂದು ತಕ್ಷಣ ಸಭೆಗೆ ಹೋಗಿ ಕುಳಿತರು. ನರ್ತಕಿಗೆ ಆನಂದವಾಯಿತು. ಅಂದಿನಿಂದ ಆಕೆಯನ್ನು ತಾಯಿ ಎಂದು ಕರೆಯತೊಡಗಿದರು.

ಭಕ್ತಿ ಇಲ್ಲಿ ಮಧುರವಾದ ಗೀತೆಯ ರೂಪದಲ್ಲಿ ಪ್ರಕಟವಾಗಿ, ನಿಜವಾದ ವೈರಾಗ್ಯವನ್ನು ದೃಢಗೊಳಿಸಿತು. ವೈರಾಗ್ಯ ಶುಷ್ಕವಾದುದಲ್ಲ. ಭಕ್ತಿರಸಭರಿತ ಹೃದಯದಿಂದ ಕೂಡಿದುದು.

ಸಂತ ಕಬೀರರ ದೋಹೆಗಳದೇ ಹಿಂದೂಸ್ತಾನಿ ಸಂಗೀತದ ಒಂದು ಮುಕ್ತರೂಪ. ಅವರ ಭಜನೆಗಳಲ್ಲಂತೂ ಭಕ್ತಿ, ಭಾವ ನಾನಾ ರೂಪದಲ್ಲಿ ಅಭಿವ್ಯಕ್ತವಾಗುತ್ತದೆ:

**ಮತ್‌ಕರ್ ಮೋಹ ತೂ**
**ಹರಿಭಜನ ತೊ ಮಾನ್ ರೇ ॥**
**ನಯನ ದಿಯೆ ಹರಿ ದರಶನ ಕರನೇ ಕೊ**
**ಶ್ರವಣ್ ದಿಯೇ ಸುನ ಜ್ಞಾನ ರೇ॥**

ಹೀಗೆ ಕಣ್ಣು, ಕಿವಿ, ಬಾಯಿ ಕೊಟ್ಟಿರುವುದೇ ಭಕ್ತಿಯಿಂದ ಹರಿಯನ್ನು ಕೊಂಡಾಡುವುದಕ್ಕೆ. ಗಾಯಕರು ಇದನ್ನು ಹಿಂದೂಸ್ತಾನಿ ಭೈರವಿ ರಾಗದಲ್ಲಿ ಹಾಡುತ್ತಾರೆ.

೧೨ನೇ ಶತಮಾನದ ಭಕ್ತಿ ಭಂಡಾರಿ ಬಸವಣ್ಣನ ವಚನವೂ ಈ ಅರ್ಥವನ್ನೇ ಕೊಡುವುದು.

**ವಚನದಲ್ಲಿ ನಾಮಾಮೃತ ತುಂಬಿ**
**ನಯನದಲ್ಲಿ ನಿಮ್ಮ ಮೂರುತಿ ತುಂಬಿ**
**ಮನದಲ್ಲಿ ನಿಮ್ಮ ನೆನಹು ತುಂಬಿ**
**ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ**
**ಕೂಡಲಸಂಗಮದೇವಾ ನಿಮ್ಮ**
**ಚರಣಕಮಲದೊಳಗಾನು ತುಂಬಿ.**

ಹಿಂದೂಸ್ತಾನಿ ಭೀಮಪಲಾಸ್ ರಾಗ ಇದರ ಭಾವಕ್ಕೆ ಬಹಳ ಹೊಂದುತ್ತದೆ.

ಹಾಗೆಯೇ ಸರ್ಪಭೂಷಣ ಶಿವಯೋಗಿಯವರ,

**ಬಿಡುಬಿಡು ಬಾಹ್ಯದೊಳು ಡಂಭವ**
**ಮಾನಸದೊಳು ಎಡೆಬಿಡದಿರು ಶಂಭುವ ।**

ಎಂಬ ಅರ್ಥವತ್ತಾದ ಹಾಡು ಹಿಂದೂಸ್ತಾನಿ ರಾಗಮಾಲಿಕೆಯಲ್ಲಿ ಹಾಡಿದಾಗ ಮನಮುಟ್ಟುತ್ತದೆ. 'ಮನದಲ್ಲೆ ಮನೆ ಮಾಡಿಕೊಂಡಿರುವ ಮನದಾಣ್ಮ ಶಿವ ನಿರಹಂಭಾವದ, ಅರಿತು ಮಾಡುವ ಭಕ್ತಿಯನ್ನು ಮೆಚ್ಚುತ್ತಾನೆ' ಎಂಬುದು ಹೃದ್ಗತವಾಗುತ್ತದೆ.

ಭಕ್ತೆ ಮೀರಾಬಾಯಿಯ 'ಬಸ ಮೇರೆ ನೈನನಮೇ ನಂದಲಾಲಾ' ಹಾಗೂ ಖಾಲಸಾ ಭಜನೆ 'ನಾಮಜಪನ ಕ್ಯೋಂ ಛೋಡ

ದಿಯಾ; ಕ್ರೋಧ ನ ಛೋಡಾ, ಝೂಠ ನ ಛೋಡ, ಸತ್ಯವಚನ ಕ್ಯೋಂ ಛೋಡದಿಯಾ' – ಇವು ಭಕ್ತಿಯನ್ನೇ ಪ್ರತಿಪಾದಿಸುವ ಹಾಡು. ಕಾಮ ಕ್ರೋಧ, ಅಸತ್ಯ, ಅಧರ್ಮ ಬಿಡಲಿಲ್ಲ – ಭಕ್ತಿಯನ್ನು ಬೆಳೆಸುವ ಹರಿನಾಮ ಜಪವನ್ನೇಕೆ ಬಿಟ್ಟುಬಿಟ್ಟೆ? ಎಂದು ಎಚ್ಚರಿಸುತ್ತದೆ, ಹಿಂದೂಸ್ತಾನಿ ಬೇಹಾಗ್ ರಾಗದ ಈ ಹಾಡು.

ಸಾವಿರ ಉಪನ್ಯಾಸಗಳಿಗಿಂತ ಒಂದು ಸೂಕ್ತ ರಾಗಸಂಯೋಜಿತ ವಾದ ಶರಣರ ವಚನವೊ, ದಾಸರ ಪದವೊ, ಹಿಂದಿ ಭಜನೆಯೊ, ಮನಸ್ಸಿನ ಮೇಲೆ ಅಗಾಧ ಪರಿಣಾಮವನ್ನುಂಟು ಮಾಡುತ್ತದೆ – ಭಕ್ತಿಭಾವವನ್ನು ಉದ್ದೀಪಿಸುತ್ತದೆ. ಇರುವ ಭಕ್ತಿಯನ್ನು ಪುಷ್ಟೀಕರಿಸಿ ದೃಢಗೊಳಿಸುತ್ತದೆ.

ಸಂಗೀತ ಶೈಲಿ ಉತ್ತರಾದಿಯಾಗಲಿ, ದಕ್ಷಿಣಾದಿಯಾಗಲಿ, ಅರ್ಥಸ್ಫುಟವಾಗುವ ಹಾಗೆ ಭಾವಪೂರ್ಣವಾಗಿ ಹಾಡಿದಾಗ ಮತ್ತೆ ಮತ್ತೆ ಕೇಳಬೇಕು, ಮೆಲುಕು ಹಾಕಬೇಕು ಎಂದೆನಿಸುತ್ತದೆ. ಸಾಮಾನ್ಯವಾಗಿ ಹಿಂದೂಸ್ತಾನಿ ಶೈಲಿ ಭಾವಪೋಷಕವಾಗಿರುವುದರಿಂದ ಭಕ್ತಿಗೀತೆಗಳಿಗೆ ಹಿಂದೂಸ್ತಾನಿ ರಾಗ ಮತ್ತು ಶೈಲಿ ಬಹು ಚೆನ್ನಾಗಿ ಹೊಂದಿಕೊಳ್ಳುತ್ತದೆ. ಹೃನ್ಮನ ಸಿಂಚನಗೊಳಿಸುವ ಶಕ್ತಿ ಹಿಂದೂಸ್ತಾನಿ ಸಂಗೀತದಲ್ಲಿ ಸಹಜವಾಗಿದೆ.

ವಚನಗಳ ಹಾಗೆ, ದಾಸರ ಪದಗಳ ಹಾಗೆ, ಭಾಷೆ ಸರಳವಾಗಿದ್ದರೆ ಗಾಯನದ ಮಾಧುರ್ಯದ ಜೊತೆಗೆ ಭಾವಗೀತೆಯ ಅರ್ಥವೂ ಮನಮುಟ್ಟುತ್ತದೆ. ಇದು ಸುಗಮಸಂಗೀತದ ಮಾತಾಯಿತು. ಶುದ್ಧ ಶಾಸ್ತ್ರೀಯ ಸಂಗೀತದಲ್ಲೂ ಖ್ಯಾಲ್, ಠುಮ್ರಿ, ಘಜಲ್, ಖವ್ವಾಲಿಗಳ ಸಾಹಿತ್ಯ ಕಡಿಮೆ ಇದ್ದರೂ, ರಾಗದ ನಾನಾ ಸ್ವರ ವಿನ್ಯಾಸಗಳಲ್ಲಿ, ತಾನ್‌ಗಳಲ್ಲಿ ರಾಧಾಕೃಷ್ಣರ ಮಧುರ ಭಾವದ ಭಕ್ತಿಯನ್ನು ಗಾಯಕ-ಗಾಯಕಿಯರು ಕೇಳುಗರ ಹೃದಯಗಳಲ್ಲಿ ತುಂಬುತ್ತಾರೆ.

ಪಂ.ಭೀಮಸೇನ ಜೋಷಿಯವರು ಹಾಡಿರುವ 'ಯಾದವ ನೀ ಬಾ ಯದುಕುಲ ನಂದನ, ಮಾಧವ ಮಧುಸೂದನ ಬಾರೋ' ಎಂಬ ಹಾಡಾಗಲಿ, 'ಭಾಗ್ಯದಾ ಲಕ್ಷ್ಮೀ ಬಾರಮ್ಮ' ಎಂಬ ಹಾಡಾಗಲಿ, ಹಾಗೆಯೆ ಪಂ. ವೆಂಕಟೇಶ್ ಕುಮಾರ್ ಹಾಡಿರುವ 'ಒಂದು ಬಾರಿ ಸ್ಮರಣೆ ಸಾಲದೇ' ಎಂಬ ಹಾಡು, 'ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ' ಎಂಬ ಹಾಡು ಜನಮನವನ್ನು ಗೆದ್ದಿವೆ.

ಶ್ರೀರಾಮಕೃಷ್ಣ ಪರಮಹಂಸರು, ಶಿಷ್ಯ ನರೇಂದ್ರ ಮತ್ತು ಇತರ ಹಾಡಬಲ್ಲ ಶಿಷ್ಯರು ಹಾಡುತ್ತಿದ್ದ ಬಂಗಾಳಿ ಭಕ್ತಿ ಗೀತೆಗಳನ್ನು ಕನ್ನಡ **'ವಚನವೇದ'**ದಲ್ಲಿ ಜಿ.ಎಸ್.ಶಿವರುದ್ರಪ್ಪನವರು ಕನ್ನಡಕ್ಕೆ ಅನುವಾದಿಸಿರುವುದು ಅವುಗಳನ್ನು ಶ್ರೀರಾಮಕೃಷ್ಣ ಆಶ್ರಮವು 'ಕೀರ್ತನಸಂಗ್ರಹ' ಭಜನೆ ಪುಸ್ತಕದಲ್ಲಿ ಸೇರಿಸಿಕೊಂಡಿರುವುದು ಸರ್ವವಿದಿತವಾದ ಸಂಗತಿ.

**ಎಲ್ಲವೂ ನಿನ್ನಿಚ್ಛೆಯಂತೆ ನಡೆದಿರಲು**
**ನೀನೆ ಭವಸಾಗರವ ದಾಟಿಸುವ ಹಡಗು**
**ನಿನ್ನ ಇಚ್ಛೆಯ ನೀನು ಪೂರೈಸುತಿರಲು**
**ತಮ್ಮ ಗೆಯ್ಮೆಯಿದೆಂದು ತಿಳಿದರೀ ಜನರು ...**

ಎಂಬ ಹಾಡನ್ನು ಹಿಂದೂಸ್ತಾನಿ ರಾಗದಲ್ಲಿ ಹಾಡಿದಾಗ (ಮೂಲ ಬಂಗಾಳಿ ಹಾಡನ್ನು ಯಾವ ರಾಗದಲ್ಲಿ ಹಾಡುವರೋ ತಿಳಿಯದಾದರೂ) ಜಗನ್ಮಾತೆಯಲ್ಲಿ ಭಕ್ತಿ ಕೋಡಿವರಿಯುತ್ತದೆ.

ಹಾಗೆಯೆ, **'ತೋರಿರೊ ಎಲ್ಲಿದೆ ಬೃಂದಾವನ, ಎಲ್ಲಿ ಯಶೋದಾ ತಾಯಿ'** ಎಂಬ ಚೈತನ್ಯ ಮಹಾಪ್ರಭುವಿನ ಹಾಡನ್ನು ಭೀಮ್‌ಪಲಾಸ್ ರಾಗದಲ್ಲಿ ಹಾಡಿದಾಗಲೂ ಗೋಕುಲ – ಬೃಂದಾವನ ಯಶೋದೆ, ರಾಧೆ, ಶ್ಯಾಮನ ಕೊಳಲು ಕಣ್ಣಿಗೆ ಕಟ್ಟುತ್ತವೆ.

ಜಿ.ಎಸ್.ಶಿವರುದ್ರಪ್ಪನವರ 'ಯಾರವರು, ಯಾರವರು, ಯಾರವರು ಯಾರೊ, ಬಾಗಿಲಿಗೆ ಬಂದವರು, ನಿಂದವರು ಯಾರೋ; ಒಳಗೆಲ್ಲ ಬೆಳಕನ್ನು ಚೆಲ್ಲಿದವರಾರೊ, ತುಂಬಿದ್ದ ಕತ್ತಲನು ಕಳೆದವರು ಯಾರೊ' – ಎಂಬ ಹಾಡು ಒಂದು ಅನುಭಾವ ಗೀತೆ. ಬೇಹಾಗ್ ರಾಗ ಅದಕ್ಕೆ ತುಂಬಾ ಚೆನ್ನಾಗಿ ಹೊಂದುತ್ತದೆ.

ಕುವೆಂಪು ಅವರ ಅನೇಕ ಕವಿತೆಗಳು ಭಕ್ತಿಭರಿತ ಭಾವಗೀತೆಗಳಾಗಿವೆ.

**ಸೂತ್ರಧಾರಿಣಿ ನೀನು, ಪಾತ್ರಚಾರಿಯು ನಾನು**
**ಯಾವ ಪಾತ್ರವನಿತ್ತರೇನು ನೀನೆನಗೆ**
**ನಿನ್ನ ಅಧ್ಯಕ್ಷತೆಯ ಈ ನಿನ್ನ ಲೀಲೆಯಲಿ**
**ಪರಮ ಪುರುಷಾರ್ಥರೂಪಿಣಿ ನೀನೆ ಕೊನೆಗೆ**

ಹಿಂದೂಸ್ತಾನಿ ಸೋಹನಿ ರಾಗದಲ್ಲಿ ಹಾಡಿದಾಗ ಜಗನ್ಮಾತೆಯ ಬಗೆಗಿನ ಭಕ್ತಿ-ಬದುಕನ್ನು ನೋಡುವ ರೀತಿಯನ್ನು – ಸ್ಫುಟಗೊಳಿಸುತ್ತದೆ.

ಈ ಲೇಖಕನ **'ನಾ ನುಡಿಸುವೀ ವೀಣಾನಾದ ಮಾಧುರ್ಯವದು ನಿನ್ನೆದೆಯ ತಂತಿಗಳ ಮಿಡಿಯದಿರಬಹುದು'** ಎಂಬ ಗೀತೆ ಭೀಮಪಲಾಸ್ ರಾಗದಲ್ಲಿ ಶೋಭಿಸುತ್ತದೆ. ಅಂತಹ ಇನ್ನೂ ಅನೇಕ ಭಕ್ತಿಗೀತೆಗಳನ್ನು ಉದಾಹರಿಸಬಹುದು; ಅಲ್ಲೆಲ್ಲ ಹಿಂದೂಸ್ತಾನಿ ಸಂಗೀತದಲ್ಲಿ ಭಕ್ತಿ ತುಂಬಿ ತುಳುಕುವುದನ್ನು ಕಾಣಬಹುದು. ❉

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥**

ಯಾವಾಗಲೂ ನನ್ನನ್ನು ಕೀರ್ತಿಸುತ್ತಿರುವ, ಪ್ರಯತ್ನಿಸುತ್ತಿರುವ, ಭಕ್ತಿಯಿಂದ ನಮಸ್ಕರಿಸುತ್ತಿರುವ ದೃಢವ್ರತರೂ ನಿತ್ಯಯುಕ್ತರೂ ಆದ (ಮಹಾತ್ಮರು) ನನ್ನನ್ನು ಉಪಾಸನೆ ಮಾಡುತ್ತಾರೆ.

*(ಗೀತೆ, ೯.೧೪)*



# ಹಿಂದೂಸ್ತಾನಿ ಸಂಗೀತದಲ್ಲಿ ವಚನಗಳು ಮತ್ತು ದಾಸರ ಪದಗಳು: ಆಧ್ಯಾತ್ಮಿಕ ಅಭಿವ್ಯಕ್ತಿ ಆತ್ಮ ಸಾಕ್ಷಾತ್ಕಾರದ ವಿನೂತನ ವಿಧಾನ

**ಡಾ. ನಾಗರಾಜರಾವ್ ಹವಾಲ್ದಾರ್**

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ನಾದಾಭಿವ್ಯಕ್ತಿಗೆ ಸಾಹಿತ್ಯದ ಭಾವ ಶಕ್ತಿ, ಪುಷ್ಟಿ ಹಾಗೂ ಹೊಸ ಸೊಬಗನ್ನು ನೀಡಬಲ್ಲುದು ಹಾಗೂ ಅದು ಆಧ್ಯಾತ್ಮಿಕ ಭಾವವಾಗಿದ್ದಾಗ ಒಟ್ಟು ಸಂಗೀತಾನುಭವ ಅನುಭಾವವೂ ಆಗಬಲ್ಲುದು. ಈ ಆಶಯವನ್ನು ಇಲ್ಲಿ ಬಿಂಬಿಸಿರುವ ಲೇಖಕರು ಕಿರಾಣಾ ಘರಾನಕ್ಕೆ ಸೇರಿದ ಪ್ರಸಿದ್ಧ ಸಂಗೀತಗಾರರು. ಪಂ. ಮಾಧವ ಗುಡಿಯವರ ಶಿಷ್ಯರಾದ ಅವರು ಗಾಯನದಲ್ಲಿ ದಾಸರ, ಶರಣರ ಸಾಹಿತ್ಯವನ್ನು ಅಳವಡಿಸಿ, ಸಂಗೀತವನ್ನು ಶ್ರೋತೃಗಳ ಹೃದಯಕ್ಕೆ ಇನ್ನಷ್ಟು ಆಪ್ತವಾಗಿಸುವಲ್ಲಿ ಯಶಸ್ವಿಯಾಗಿದ್ದಾರೆ. ಸಂಗೀತ ಕಾರ್ಯಕ್ರಮಗಳಲ್ಲದೆ ಅಧ್ಯಯನ, ಅಧ್ಯಾಪನ, ಸಂಗೀತ ಸಂಯೋಜನೆ ಮೊದಲಾದ ಚಟುವಟಿಕೆಗಳಲ್ಲಿ ಅವರು ಸಕ್ರಿಯವಾಗಿ ತೊಡಗಿಕೊಂಡಿದ್ದಾರೆ.

ನನ್ನ ಅನುಭವಕ್ಕೆ ಬಂದಂತೆ, ಶಾಸ್ತ್ರೀಯ ಸಂಗೀತದ ಮೂಲ ಉದ್ದೇಶವೇ ಆತ್ಮನಿವೇದನೆ; ಭಗವಂತನಲ್ಲಿ ಆತ್ಮಸಮರ್ಪಣೆ. ಆದರೆ ಏಳು ಸ್ವರಗಳ ಮೂಸೆಯಿಂದಲೇ ಹೊರಬಂದ ಇನ್ನಿತರ ಗಾಯನ ಪ್ರಕಾರಗಳು ಚಾಲ್ತಿಯಲ್ಲಿವೆ, ಮತ್ತು ಅವುಗಳ ಉದ್ದೇಶ ಮನರಂಜನೆಯೂ ಹೌದು. ವಿಶ್ವ ಸಂಗೀತದ ಭೂಪಟದಲ್ಲಿ, ಎರಡು ಸಮೃದ್ಧ, ಸುಂದರ, ಪ್ರಬುದ್ಧ ಶಾಸ್ತ್ರೀಯ ಸಂಗೀತ ಪರಂಪರೆಯನ್ನು ಹೊಂದಿರುವ ಏಕಮಾತ್ರ ರಾಷ್ಟ್ರ ನಮ್ಮ ಭಾರತ. ಕರ್ನಾಟಕ ಸಂಗೀತದ ತ್ರಿಮೂರ್ತಿಗಳೂ, ವಾಗ್ಗೇಯಕಾರರೂ ಆದ ಶ್ರೀ ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು ಹಾಗೂ ಶ್ಯಾಮಾಶಾಸ್ತ್ರಿಗಳ ರಚನೆಗಳಲ್ಲಿ ಆಧ್ಯಾತ್ಮಿಕ ಹಾಗೂ ಭಗವನ್ನಾಮ ಸ್ಮರಣೆಯನ್ನೇ ಮೂಲ ಸಾಮಗ್ರಿಯಾಗಿಸಿಕೊಂಡಿರುವುದು ವಿಶ್ವ ವಿದಿತ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪದ್ಧತಿಯು ಉತ್ತರ ಭಾರತದಲ್ಲಿ ಬೆಳೆದು ಬಂದದ್ದು. ಅಲ್ಲಿಯ ಮುಸ್ಲಿಂ ದೊರೆಗಳ ಪ್ರಭಾವ, ಪ್ರೋತ್ಸಾಹ, ಆಶ್ರಯದಿಂದ ಆ ರಚನೆಗಳಲ್ಲಿ, ಸಾಹಿತ್ಯದ ದೃಷ್ಟಿಯಿಂದ ಒಂದು ತರಹದ ವೈವಿಧ್ಯತೆಯನ್ನು ಕಾಣಬಹುದು. ಇಲ್ಲಿರುವ ಕೆಲವು ಶೃಂಗಾರ ರಸ ಪ್ರಧಾನ ರಚನೆಗಳೂ ನಾಯಕ-ನಾಯಿಕಾ ಭಾವ; ಶರಣ ಸತಿ – ಲಿಂಗ ಪತಿ ಎನ್ನುವ ಭಾವದಿಂದ ಕೂಡಿದ್ದವು ಎಂಬುದು ಸತ್ಯವೇ. ಠುಮರಿ, ಕಜರಿ ಮತ್ತು ಚೈತಿಯಂತಹ ರಚನೆಗಳಲ್ಲಿ ಸಾಹಿತ್ಯವು ಭಗವನ್ನಾಮ ಸಂಕೀರ್ತನೆಯಿಂದ ಬೇರೆಡೆ ಹೊರಳಿರುವುದನ್ನೂ ಗಮನಿಸಬಹುದು. ಆದರೂ ಹಿಂದೂಸ್ತಾನಿ ಪದ್ಧತಿಯ ಕೆಲವು ರಾಗಗಳ ಸಾಹಿತ್ಯ ರಚನೆಯನ್ನು ವಿಶ್ಲೇಷಿಸೋಣ.

ಭೈರವ ರಾಗದ '**ನಾಮ ಕರೀ ಮೈತೋ ಲೇತಮನ ಭೋರಿ ತಬ ಹೋವೆ ನಿಸ್ತಾರ ದೋವು ಜಗತಮೇ**' ನೋಡೋಣ. ಇದರ ಭಾವಾರ್ಥ, 'ಮುಂಜಾನೆಯಲ್ಲಿ ನಾನು ನಿನ್ನ ನಾಮಸ್ಮರಣೆ ಮಾಡಿದೆ. ಇದರಿಂದ ಇಹದಲ್ಲೂ-ಪರದಲ್ಲೂ ಬೆಳಕಾಯಿತು' ಎಂದು.

ವರ್ಷ ಋತು, ಮಳೆಗಾಲದ ವೈಭವವನ್ನೂ ಸಾಂಕೇತಿಕವಾಗಿ ಸಾರಿ ಹೇಳುವ 'ಮಿಯಾ ಮಲ್ಹಾರ್' ರಾಗದ ರಚನೆಯನ್ನು ಗಮನಿಸೋಣ.

**ಕರೀಮ ನಾಮ ತೇರೋ, ತೂ ಸಾಹೇಬ, ಕರತಾರ ಸತಾರ**
**ದುಃಖ ಜಲದ ದೂರ ಕೀಜೇ, ಸುಖ ದೇವ್ರೋ ಸಬನ ಕೋ**
**ಸದಾರಂಗ ಬಿನತಿ ಕರತಾರ, ಸುರತೀ ಲೇಹೋ ಸತಾರ**

ಈ ರಾಗದಲ್ಲಿ ಬಳಸುವ ಆಂದೋಳಿತ ಕೋಮಲ ಗಂಧಾರ ಸ್ವರ, ಎರಡೂ ನಿಷಾದಗಳ ಸುಂದರ ಜೋಡಣೆ, ಗುಡುಗು – ಸಿಡಿಲನ್ನು ಪ್ರತಿಧ್ವನಿಸುವ ಗಮಕಯುಕ್ತ ತಾನುಗಳು ಒಂದೆಡೆ ಯಾದರೆ, ರಚನೆಕಾರ ಸದಾರಂಗನ ಆಂತರ್ಯ ''ಓ ಕರೀಮ (ದೇವನೊಬ್ಬ ನಾಮ ಹಲವು) ದುಃಖವನ್ನು ಬೇಗ ದೂರ ಗೊಳಿಸು. ಸರ್ವರಿಗೂ ಸುಖವನ್ನು ನೀಡು. **ಸರ್ವೇ ಜನಾಃ ಸುಖಿನೋ ಭವಂತು ಅಂದಂತೆ**; ನಾನು **ಬಿನತಿ,** ವಿನಂತಿಸಿ ಕೊಳ್ಳುತ್ತೇನೆ'' ಎಂದಿದ್ದಾನೆ. ಮಳೆ ಮೂಲತಃ ಸಮೃದ್ಧಿ, ಸುಖದ ಪ್ರಕೃತಿಯ ಒಕ್ಕೊರಲಿನ ಸಂಕೇತ. ಹೀಗಾಗಿ ನಮ್ಮ ರಾಗಗಳು, ರಚನೆಗಳು ಮೂಲತಃ ಮಾನವ ಸಮಾಜದ ಸಮೃದ್ಧಿಯ ಅಭಿವೃದ್ಧಿಯ ಕಡೆಗೇ ಇವೆ. ಇದು ಕೇವಲ ಗಾಯಕ, ವಾದಕ, ಕಲಾವಿದರ ಪಾಂಡಿತ್ಯ ಪ್ರದರ್ಶನಕ್ಕಲ್ಲ.

ರಾಗ ದರಬಾರಿ ಕಾನಡಾ ಮಧ್ಯರಾತ್ರಿಯಲ್ಲಿ ಹಾಡುವ ಗಂಭೀರವಾದ ಅಂತರ್ಮುಖೀ ರಾಗ:

**ಔರ ನಹೀ ಕಛು ಕಾಮ ಕೀ, ಮೈ ಭರೋಸೌ ಅಪನೆ ರಾಮಕೀ**

ಅಂತರಾ : '**ಜೋ ಚಾಹೂಂಸೋ ದೇತ, ಪದಾರತ ಅಂತ ಲೇತ್ ಸುಖ ಧಾಮಕೀ ಮೇ ಭರೋಸೆ ಅಪನೆ ರಾಮಕೀ**' ಎನ್ನುವುದು ಸಾಹಿತ್ಯ. 'ನನ್ನೆಲ್ಲಾ ಭಕ್ತಿ, ಶ್ರದ್ಧೆ, ನಂಬಿಕೆ ರಾಮನಲ್ಲೇ. ಅವನು ನನಗೆ ಬೇಕಾದ ಎಲ್ಲವನ್ನೂ ಕರುಣಿಸಿ, ಕೊನೆಗೆ ಸುಖ ಧಾಮಕ್ಕೆ ಕರೆದೊಯ್ಯುತ್ತಾನೆ' ಎನ್ನುವುದು ಭಾವಾರ್ಥ.

ನಮ್ಮ ನಾಡು ಕರ್ನಾಟಕ, ಎರಡೂ ಪದ್ಧತಿಯ ಸಂಗೀತದಲ್ಲಿ ಮೇರು ಕಲಾವಿದರನ್ನು ನೀಡಿದೆ. ಮೈಸೂರಿನ ವೀಣೆ ಶೇಷಣ್ಣ, ಸುಬ್ಬಣ್ಣ, ಬಿಡಾರಂ ಕೃಷ್ಣಪ್ಪ, ವಾಸುದೇವಾಚಾರ್ ಮುಂತಾದವರೆಲ್ಲಾ ಕರ್ನಾಟಕ ಸಂಗೀತಕ್ಕೆ. ಪಂ. ಪಂಚಾಕ್ಷರ ಗವಾಯಿ, ಪಂ. ಮಲ್ಲಿಕಾರ್ಜುನ್ ಮನಸೂರ್, ಭಾರತರತ್ನ ಪಂ. ಭೀಮಸೇನ ಜೋಶಿ, ಶ್ರೀಮತಿ ಗಂಗೂಬಾಯಿ ಹಾನಗಲ್, ಪಂ. ಪುಟ್ಟರಾಜ ಗವಾಯಿ, ಪಂ. ಬಸವರಾಜ ರಾಜಗುರು, ಪಂ. ಮಾಧವ ಗುಡಿ, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ಇವರೆಲ್ಲಾ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹಿಂದೂಸ್ತಾನಿ ಪದ್ಧತಿಯನ್ನು ಪ್ರಚಾರ ಮಾಡಿದರು.

ನಮ್ಮ ಯಾವುದೇ ಸಂಗೀತ ಶಾಸ್ತ್ರ ಗಂಥದಲ್ಲಿ ಇಂತಹುದೇ ಭಾಷೆಯಲ್ಲಿ ಸಾಹಿತ್ಯ ರಚನೆಯಿರಬೇಕು ಎನ್ನುವ ಉಲ್ಲೇಖ, ನಿರ್ಬಂಧ ಎರಡೂ ಇಲ್ಲ. ಹೀಗಾಗಿ ಕರ್ನಾಟಕದಿಂದ ಬೆಳೆದು ಬಂದ ಸಂಗೀತಗಾರರು ತಮ್ಮ ಆತ್ಮನಿವೇದನೆಗೆ, ಆಧ್ಯಾತ್ಮಿಕ ಅಭಿವ್ಯಕ್ತಿಗೆ ಕನ್ನಡದ ವಚನಗಳನ್ನು ದಾಸರ ಪದಗಳನ್ನು ಬಳಸಿ ಕೊಂಡಿದ್ದು ಸಂಗೀತ–ಸಾಹಿತ್ಯ ಅಧ್ಯಾತ್ಮದ ಸುಂದರ ಸಮನ್ವಯ.

**ಎನ್ನ ಕಾಯವ ದಂಡಿಗೆಯ ಮಾಡಯ್ಯ**
**ಎನ್ನ ನರವ ತಂತಿಯ ಮಾಡಯ್ಯ**

— ಎಂದರು ಬಸವಣ್ಣನವರು.

ಇಲ್ಲಿ ಆತ್ಮ ನಿವೇದನೆಗೆ, ಆಧ್ಯಾತ್ಮಿಕ ಅಭಿವ್ಯಕ್ತಿಗೆ ಸಂಗೀತವೇ ಮೂಲ ಸಾಧನ. 'ನನ್ನ ಇಡೀ ದೇಹವನ್ನು ವೀಣೆಯಾಗಿ ಮಾಡಿ ಅಲೌಕಿಕ ಸಂಗೀತವನ್ನು ಹೊಮ್ಮಿಸು' ಎಂದು ತನ್ನ ಆರಾಧ್ಯ ದೈವದಲ್ಲಿ ಮೊರೆಹೋಗಿದ್ದಾರೆ ಬಸವೇಶ್ವರರು. ಈ ರಚನೆಯನ್ನು ಕನ್ನಡದ ಮೂಲದ ಹಲವಾರು ಕಲಾವಿದರು ಹಾಡುತ್ತಾ ಬಂದಿದ್ದಾರೆ.

ಪಂ. ಮಲ್ಲಿಕಾರ್ಜುನ ಮನಸೂರರು ಹಾಡುತ್ತಿದ್ದ '**ಅಕ್ಕ ಕೇಳವ್ವ ನಾನೊಂದು ಕನಸ ಕಂಡೆ**' ಅಕ್ಕಮಹಾದೇವಿ–ಶ್ರೀಶೈಲ ಮಲ್ಲಿಕಾರ್ಜುನನ ಮಧ್ಯೆ ನಡೆದ ಸುಂದರ ಕನಸಿನ ಸಂವಾದವನ್ನು ಅಜರಾಮರಗೊಳಿಸಿದೆ. ಮನಸೂರರು ಹಾಡಿದ ಇನ್ನೊಂದು ವಚನ '**ಎನಗೆ ನಿಮ್ಮ ನೆನಹಾದಾಗಲೇ ಉದಯ, ಎನಗೆ ನಿಮ್ಮ ಮರಹಾದಾಗಲೇ ಅಸ್ತಮಾನ**' ಎನ್ನುವಲ್ಲಿ ದೇವರ ನಾಮಸ್ಮರಣೆಯೇ ಬೆಳಕಿನ ಸಂಕೇತ. ನಿಮ್ಮನ್ನು ಮರೆತ ಕೂಡಲೇ ನನ್ನ ಅಸ್ತಮಾನ ಎಂಬ ಸುಂದರ ಆಧ್ಯಾತ್ಮಿಕ ಸಮರ್ಪಣಾ ಅಭಿವ್ಯಕ್ತಿ ಮೂಡಿ ಬಂದಿದೆ. ಭೈರವ್ ರಾಗದ ಸಾಂಪ್ರದಾಯಿಕ ರಚನೆಯೂ ಇದೇ ತತ್ತ್ವವನ್ನು ಸಾರಿದ್ದನ್ನು ನಾವು ನೋಡಿದ್ದೇವೆ **(ನಾಮ ಕರೀ ಮೈ ತೋ)**.

ಪಂ. ಬಸವರಾಜ ರಾಜಗುರು ಅವರು ಹಾಡುತ್ತಿದ್ದ '**ಮಾಡಿ ಮಾಡಿ ಕೆಟ್ಟರೋ ಮನವಿಲ್ಲದೆ**' ಎನ್ನುವ ಬಸವೇಶ್ವರರ ವಚನ ತೋಡಿ ರಾಗದ ಆರ್ದ್ರತೆ, ಆರ್ತತೆ, ಕಳಕಳಿ, ಮನವಿಲ್ಲದೇ ಮಾಡಿದ, ನಿಜವಿಲ್ಲದೇ ನೀಡಿದ ಆಷಾಢಭೂತಿಗಳ ತ್ರಿಶಂಕು ಸ್ಥಿತಿಗೆ ಸುಂದರ ಕನ್ನಡಿಯಂತಿದೆ.

ಪಂ. ಸಂಗಮೇಶ್ವರ ಗುರವ್ ಅವರು ಸ್ವರ ಸಂಯೋಜಿಸಿ ಹಾಡುತ್ತಿದ್ದ ಮತ್ತೊಂದು ಅಕ್ಕನವರ ವಚನ '**ಹಸಿವಾದೊಡೆ ಭಿಕ್ಷಾನ್ನಗಳುಂಟು, ತೃಷೆಯಾದೊಡೆ ಕೆರೆ ಭಾವಿಗಳುಂಟು, ಶಯನಕೆ ಹಾಳು ದೇಗುಲಗಳುಂಟು, ಆತ್ಮ ಸಂಗಾತಕೆ ಚೆನ್ನಮಲ್ಲಿಕಾರ್ಜುನ ನೀ ಎನಗುಂಟು**' ಮತ್ತೊಂದು ಅಪೂರ್ವ ಆಧ್ಯಾತ್ಮಿಕ ಅಭಿವ್ಯಕ್ತಿಯ ಅನುಭವ.

ವಕ್ರ ಸ್ವರ ಸಂಚಾರ, ಕೋಮಲ ರಿಷಭ ಸ್ವರದ ಅಳಲು, ಎರಡೂ ಮಧ್ಯಮ ಸ್ವರದ ಸೂಕ್ಷ್ಮ ಬಳಕೆಯಿಂದ ಈ ಸಾಹಿತ್ಯ ಇನ್ನೂ ಸ್ಫುಟವಾಗುತ್ತದೆ. ಎಲ್ಲ ಲೌಕಿಕ ಆವಶ್ಯಕತೆಗಳಾದ ಹಸಿವು–ಬಾಯಾರಿಕೆಗಳಿಗೆ ಹೇಗಾದರೂ, ಏನಾದರೂ ರಾಜೀ ಮಾಡಿ

ಕೊಳ್ಳುವ ಅಕ್ಕನವರು ಆತ್ಮ ಸಂಗಾತಕ್ಕೆ ಚೆನ್ನಮಲ್ಲಿಕಾರ್ಜುನನನ್ನು ಮಾತ್ರ ಆಯ್ಕೆ ಮಾಡಿಕೊಳ್ಳುತ್ತಾರೆ. ಈ ಪ್ರಬುದ್ಧ ಸಾಲುಗಳನ್ನು ಭಟಿಯಾರ್ ರಾಗದ ಸ್ವರಗಳಲ್ಲಿ ಕೇಳುವುದೇ ಒಂದು ಅಪೂರ್ವ ಅನುಭವ.

ಮಣೆಯನೆಣಿಸಿ ದಿನವ ಕಳೆಯಬೇಡ
ಮಣೆಯ ಪೂಜಿಸಿ ದಿನವ ಕಳೆಯಬೇಡ
ಕ್ಷಣವಾದರು ನಿಜದ ನೆನಹೆ ಸಾಕು
ಕ್ಷಣದೊಳಗಿನ ಅರ್ಧವಾದರು ನಿಜದ ನೆನಹೆ ಸಾಕು
ಬೆಂಕಿಯೊಳಗುಳ್ಳಾ ಬಿಸಿ ನೀರೊಳಗುಂಟೆ ಗುಹೇಶ್ವರಾ।

—ಅಲ್ಲಮರ ಈ ವಚನವನ್ನು ನಾನು ರಾಗೇಶ್ರೀ ರಾಗದ ಸ್ವರಗಳಲ್ಲಿ, ದಾದರಾ ತಾಳದಲ್ಲಿ ಹಾಡುವ ಪ್ರಯತ್ನ ಮಾಡುತ್ತಾ ಬಂದಿದ್ದೇನೆ. ಪ್ರತಿಸಾರಿ ಹಾಡುವುದೂ ಒಂದು ವಿಶಿಷ್ಟ ಅನುಭವ. 'ಕೇವಲ ತೋರಿಕೆಗೆ ಧ್ಯಾನವ ಮಾಡಿ ಫಲವಿಲ್ಲ. ಅರ್ಧ ಕ್ಷಣ ವಾದರೂ ನಿಜವನ್ನೇ ಅರಸು' ಎನ್ನುವ ಆಧ್ಯಾತ್ಮಿಕ ಅಭಿವ್ಯಕ್ತಿ ಇಲ್ಲಿ ಸುಂದರವಾಗಿ ಮೂಡಿ ಬರುತ್ತದೆ.

ಹನ್ನೆರಡನೇ ಶತಮಾನದ ವಚನಕಾರರ ನಂತರ ಬೆಳೆದು ಬಂದ ಮತ್ತೊಂದು ಪರಂಪರೆಯೆಂದರೆ ಹರಿದಾಸರದ್ದು. ಮೊದಲು ನರಹರಿ ತೀರ್ಥರಿಂದ ಆರಂಭವಾದ ಈ ಯಾನ, ಪುರಂದರ, ಕನಕ, ಜಗನ್ನಾಥ, ವಿಜಯ ಮತ್ತು ಗೋಪಾಲದಾಸರು ಮೊದಲಾದವರಿಂದ ಭಕ್ತಿಪಂಥವಾಗಿ ಬೆಳೆದು, ಪ್ರವಾಹವಾಗಿಯೇ ಹರಿಯಿತು. ದಾಸರ ಪದಗಳು ಎಂದೇ ಪ್ರಸಿದ್ಧಿಯಾದ ಇವರೆಲ್ಲರ ರಚನೆಗಳು ತಮ್ಮನ್ನು ತಾವೇ ಹಾಡಿಸಿಕೊಳ್ಳುತ್ತವೆ.

**'ಶ್ರವಣ ಮನಕಾನಂದವೀವುದು'** ಎಂದರು 'ಹರಿಕಥಾಮೃತ ಸಾರ'ದಲ್ಲಿ ಜಗನ್ನಾಥದಾಸರು. ಉತ್ತಮ ನಾಮಸಂಕೀರ್ತನೆ ಕೇಳುವುದೇ ಒಂದು ಆನಂದ ಎಂದಿದ್ದಾರೆ ಹರಿದಾಸರು.

**'ಕಲಿಯುಗದಲ್ಲಿ ಹರಿನಾಮವ ನೆನೆದರೆ ಕುಲಕೋಟಿಗಳು ದ್ಧರಿಸುವವೋ ರಂಗಾ'**, **'ಸುಲಭ ಪೂಜೆಯ ಮಾಡಿ ಬಲವಿಲ್ಲ ದವರು'**, **'ಕೇಳನೋ ಹರಿ ತಾಳನೋ, ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ'** — ಇದೇ ಮುಂತಾದ ಪುರಂದರರ ರಚನೆಗಳು ಸಂಗೀತ ಅಧ್ಯಾತ್ಮ ಅಭಿವ್ಯಕ್ತಿಗೆ ಸುಂದರ ಕೊಂಡಿ ಯಾಗಿವೆ. ತಾಳ-ಮೇಳ ಏನೇ ಇದ್ದರೂ ನಾನಾ ಬಗೆಯ ರಾಗ ಭಾವ ತಿಳಿದರೂ, ಸ್ವರ ಜ್ಞಾನ ಮನೋಧರ್ಮವಿದ್ದರೂ ಪ್ರೇಮ ವಿಲ್ಲದಿದ್ದರೆ ದೇವರು ನಮ್ಮ ಗಾಯನವನ್ನು ಆಸ್ವಾದಿಸುವುದಿಲ್ಲ, ಸ್ವೀಕರಿಸುವುದಿಲ್ಲ ಎಂದಿದ್ದಾರೆ ದಾಸರು. ಇದನ್ನು ಕರ್ನಾಟಕಿ – ಹಿಂದೂಸ್ತಾನಿ ಎರಡೂ ಪದ್ಧತಿಯ ಸಂಗೀತಗಾರರು ಹಾಡುತ್ತಾರೆ. ಪುರಂದರದಾಸರನ್ನು ಕರ್ನಾಟಕ ಸಂಗೀತ ಪಿತಾಮಹ ಎನ್ನುವು ದನ್ನು ಇಲ್ಲಿ ಸ್ಮರಿಸಬಹುದು. ಅವರ ರಚನೆಗಳು ಎಲ್ಲ ಶೈಲಿ ಗಳಲ್ಲೂ ಹಾಡಬಹುದಾದದ್ದು ಇನ್ನೊಂದು ವಿಶೇಷ.

**'ಸ್ಮರಣೆಯೊಂದೆ ಸಾಲದೇ ಗೋವಿಂದನ'** ರಚನೆಯಲ್ಲಿ 'ಬಡವನಾದರೇನು-ವಿಜಾತಿಯಾದರೇನು, ಒಡನೆ ಪ್ರಹ್ಲಾದನ ಉದ್ಧರಿಸಿದ ಹರಿಯ' ಎಂಬ ಸಾಲುಗಳು ಸೂಚಿಸುವಂತೆ, ಪುರಂ ದರರು ೧೬ನೇ ಶತಮಾನದಲ್ಲೇ ಬಡವ – ಬಲ್ಲಿದ ಜಾತಿ ಭೇದ ಗಳನ್ನು ದೂರಗೊಳಿಸುವ ಸಂದೇಶವನ್ನು ಸಾರಿದ್ದಾರೆ. ಈ ರಚನೆ ಯನ್ನು ದೇಶ್ ರಾಗದಲ್ಲಿ ದೀಪಚಂದಿ ತಾಳದಲ್ಲಿ ಹಾಡುತ್ತಾ ಬಂದಿದ್ದೇನೆ. ಆಧ್ಯಾತ್ಮಿಕ, ಸಾಮಾಜಿಕ ಕಳಕಳಿಯ ಅಭಿವ್ಯಕ್ತಿಗೆ ಈ ಹಾಡೊಂದು ಸುಂದರ ಸಾಧನ. ಸಮಕಾಲೀನ ಕನಕದಾಸರ **'ಕುಲ ಕುಲ ಕುಲವೆಂದು ಹೊಡೆದಾಡದಿರಿ'** ಎಂಬ ಕೀರ್ತನೆಯು ಇದೇ ಸಂದೇಶವನ್ನು ಸಾರುತ್ತದೆ.

ನನ್ನ ಪರಮ ಗುರುಗಳಾದ ಪಂ. ಭೀಮಸೇನ ಜೋಶಿ, ಗುರುಗಳಾದ ಪಂ. ಮಾಧವ ಗುಡಿ **'ದಾಸವಾಣಿ'** ಎನ್ನುವ ಪೂರ್ಣ ಪ್ರಮಾಣದ ೩-೪ ಗಂಟೆಗಳ ಕಾರ್ಯಕ್ರಮವನ್ನೇ ರೂಪಿಸಿ, ಪ್ರಸ್ತುತಪಡಿಸಿ ಶ್ರೋತೃಗಳಿಗೆಲ್ಲಾ ಸಭಾಂಗಣದಲ್ಲೇ ಪಂಢರಾಪುರ ವಿಠಲನ ದರ್ಶನ ಮಾಡಿಸುತ್ತಿದ್ದರು. ಪಂ. ಭೀಮ ಸೇನ ಜೋಶಿಯವರು ಹಾಡಿದ **'ಕರುಣಿಸೋ ರಂಗಾ'** (ರಾಗ ಜೋಗಿಯಾ) ಆತ್ಮ ನಿವೇದನೆಗೆ ಸಂಕೇತವಾದರೆ, **'ನೀನ್ಯಾಕೋ ನಿನ್ನ ಹಂಗ್ಯಾಕೋ'** (ರಾಗ ಜೌನಪುರಿ) ನಿಂದಾಸ್ತುತಿಯ ಉತ್ತಮ ನಿದರ್ಶನವಾಗಿ ಮೂಡಿಬಂದಿದೆ.

ಪಂ. ಮಾಧವ ಗುಡಿಯವರು ದುರ್ಗಾ ರಾಗದಲ್ಲಿ **'ಆಡ ಪೋಗೋಣ ಬಾರೋ ರಂಗಾ'** ಶ್ರೀಪಾದರಾಜರ ರಚನೆಯನ್ನು ಹಾಡಿದಾಗ ಬಾಲಕೃಷ್ಣ ಬಂದು ಕಣ್ಮುಂದೆ ನಿಲ್ಲುತ್ತಿದ್ದ.

ಕನಕದಾಸರ **'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ'**, ಮುಲ್ತಾನಿ ರಾಗದಲ್ಲಿ, **'ನಾನು ನೀನು ಎನ್ನದಿರು ಹೀನ ಮಾನವ'** ದರಬಾರಿ ರಾಗದಲ್ಲಿ ಹಾಡುತ್ತಾ ಬಂದಿರುವ ನನಗೆ ನಮ್ಮ ಹರಿದಾಸರು ನಮ್ಮ ಆತ್ಮಶುದ್ಧಿಗೆ, ಆತ್ಮಾನುಭವದ ಅಭಿವ್ಯಕ್ತಿಗೆ ನೀಡಿರುವ ಕೊಡುಗೆಯನ್ನು ಎಷ್ಟು ಸ್ಮರಿಸಿದರೂ ಸಾಲದೆನಿಸುತ್ತದೆ. ಗೋಪಾಲದಾಸರ **'ಆವ ರೋಗವೊ ಎನಗೆ ದೇವ ಧನ್ವಂತ್ರಿ'** ಅಹಿರ್ ಭೈರವ್ ರಾಗದಲ್ಲಿ ಸುಂದರವಾಗಿ ಮೂಡಿಬರುತ್ತದೆ.

ಇಡೀ ವಚನಕಾರರ ಹಾಗೂ ಹರಿದಾಸರ ಪರಂಪರೆ ಕನಿಷ್ಠ ಸಾವಿರ ವರ್ಷಗಳಷ್ಟು ಪುರಾತನ. ಅವುಗಳು ಆನಂದ, ಅಧ್ಯಾತ್ಮ ಅಭಿವ್ಯಕ್ತಿ, ಲೋಕನೀತಿ, ಭಕ್ತಿ ಪರವಶತೆ ಹಾಗೂ ಸಂಗೀತಲೋಕಕ್ಕೆ ಹೊಂದಿಕೊಳ್ಳುವ ರೀತಿ, ನಮ್ಮೆಲ್ಲರ ಆನಂದ ರಸಾನುಭವವನ್ನು ಅವರು ಶ್ರೀಮಂತಗೊಳಿಸುವ ಪ್ರಕ್ರಿಯೆಯನ್ನು ಕೆಲವೇ ಪುಟ ಗಳಲ್ಲಿ ಹಿಡಿದಿಡುವುದು ದುಸ್ಸಾಹಸದ ಕೆಲಸವೇ ಸರಿ. ಆದ್ದರಿಂದ ಇಲ್ಲಿರುವುದು ಒಂದು ಪಕ್ಷಿನೋಟ ಮಾತ್ರ. ❇



# ಹರಿಕಥಾ ಪರಂಪರೆ : ಸಂಗೀತ-ಭಕ್ತಿಗಳ ಸಮಾಗಮ

**ದತ್ತಾತ್ರೇಯ ವೇಲಣಕರ್**

ಭಾರತದ ವಿವಿಧ ಪ್ರಾಂತ್ಯಗಳಲ್ಲಿ ಧರ್ಮ, ಅಧ್ಯಾತ್ಮ, ಭಕ್ತಿ, ನೀತಿ ಹಾಗೂ ಸಂಸ್ಕೃತಿಯನ್ನು ಜನಸಾಮಾನ್ಯರತ್ತ ಕೊಂಡೊಯ್ಯುವ ಸಮರ್ಥ ಮಾಧ್ಯಮವೇ ಹರಿಕಥೆ. ಸಂಗೀತ, ಸಾಹಿತ್ಯಗಳೆರಡರ ಪರಿಪಕ್ವವಾದ ಸಮ್ಮಿಲನ ಇಲ್ಲಿದೆ. ಲೇಖಕರು ಪ್ರಸಿದ್ಧ ಹಿಂದೂಸ್ತಾನಿ ಸಂಗೀತಗಾರರೂ, ಪರಂಪರಾಗತ ಹರಿಕಥೆಯ ಕಲಾವಿದರೂ ಆಗಿದ್ದಾರೆ. ಶ್ರೀರಾಮಕೃಷ್ಣರ, ಹಾಗೂ ಇನ್ನಿತರ ಸಂತರ ಮೇಲೆ ಅವರು ನೀಡಿರುವ ಹರಿಕಥಾ ಕಾರ್ಯಕ್ರಮಗಳು ಅತ್ಯಂತ ಜನಪ್ರಿಯವಾಗಿವೆ. ಸಂಗೀತ ಅಧ್ಯಯನ-ಅಧ್ಯಾಪನಗಳಲ್ಲಿ ಸದಾ ನಿರತರಾಗಿರುವ ಅವರು ಇಂಗ್ಲಿಷಿನಲ್ಲಿ 'Swami Vivekananda's Contribution to Indian Classical Music' ಎಂಬ ಒಂದು ಗ್ರಂಥವನ್ನೂ ರಚಿಸಿದ್ದಾರೆ.

**ಚೈತನ್ಯಂ ಸರ್ವಭೂತಾನಾಂ ವಿವೃತಂ ಜಗದಾತ್ಮನಾ ।**
**ನಾದಬ್ರಹ್ಮತದಾನಂದಮದ್ವಿತೀಯಮುಪಾಸ್ಮಹೇ ॥**

*(ಸಂಗೀತ ರತ್ನಾಕರ ೧.೩.೧)*

'ಯಾವುದು ಸರ್ವಭೂತಗಳ ಚೈತನ್ಯವಾಗಿದೆಯೋ ಮತ್ತು ಯಾವುದನ್ನು ಜಗದಾತ್ಮನು ವ್ಯಾಪಿಸಿರುವನೋ ಅಂಥ ಆ ಅದ್ವಿತೀಯ ಆನಂದಮಯ ನಾದಬ್ರಹ್ಮನ ಉಪಾಸನೆ ಮಾಡುತ್ತೇನೆ.'

ಸಂಗೀತದ ಮೂಲಕ ಭಕ್ತಿಸಾಧನೆಯನ್ನು ಶತಮಾನಗಳಿಂದ ಅನೇಕ ಮಂದಿ ಸಾಧು-ಸಂತರು ನಮಗೆ ತೋರಿಸಿಕೊಟ್ಟಿರುವರು. 'ಕಲೌ ಸಂಕೀರ್ತ್ಯ ಕೇಶವಮ್' ಎಂದು ಭಾಗವತ ಸಾರುತ್ತದೆ. ಕಲಿಯುಗದಲ್ಲಿ ಭಗವಂತನ ಸಾಕ್ಷಾತ್ಕಾರಕ್ಕೆ ಭಕ್ತಿಯುಕ್ತ ಸಂಗೀತವು ಬಹಳ ಸುಲಭ ಸರಳ ಉಪಾಯವಾಗಿದೆ. ಸಂಗೀತದಲ್ಲಿ ಭಕ್ತಿಯು ಆವಶ್ಯಕ. ಭಾರತೀಯ ಸಂಗೀತ ಪರಂಪರೆಯಲ್ಲಿ **ಮಾರ್ಗೀ** ಮತ್ತು **ದೇಶೀ** ಎಂಬ ಪ್ರಭೇದಗಳಿದ್ದವು. ಮಾರ್ಗೀ ಆತ್ಮರಂಜನೆಗಾಗಿ ಮತ್ತು ದೇಶೀ ಮನೋರಂಜನೆಗಾಗಿ. ಇಂದಿನ ಆಧುನಿಕ ಕಾಲದಲ್ಲೂ ಮಾರ್ಗೀ ಸಂಗೀತದ ಮೂಲಕ ಭಕ್ತಿಯ ಪ್ರಾಕಟ್ಯದೊಂದಿಗೆ ಭಗವಂತನ ಅನುಸಂಧಾನ ಮಾಡಿದ ಹಲವು ಮಹಾಪುರುಷರನ್ನು ನಾವು ಕಾಣಬಹುದು. ಸ್ವಾಮಿ ವಿವೇಕಾನಂದರು ತಮ್ಮ ಇಪ್ಪತ್ತಮೂರನೇ ವಯಸ್ಸಿನಲ್ಲಿಯೇ ಸಂಗೀತದ ಬಗ್ಗೆ ಪ್ರಬಂಧಗಳನ್ನು, ಸಂಗೀತ ರಚನೆಗಳನ್ನು ರಚಿಸಿದ್ದಾರೆ. ಶಾಸ್ತ್ರೀಯ ಸಂಗೀತದ ಬಗ್ಗೆ ಸ್ವಾಮೀಜಿ ಹೇಳುವಾಗ, 'ಸಂಗೀತವು ಭಕ್ತಿ ಪ್ರಧಾನವಾಗಿರಬೇಕು. ಧ್ರುಪದ್ ಗಾಯನದ ಗಾಂಭೀರ್ಯ, ಖಯಾಲ್ ಗಾಯನದ ರಂಜಕತೆ ಮತ್ತು ಚಾಂಚಲ್ಯದ ಜೊತೆಗೆ ಭಕ್ತಿಯ ಸಮಾಗಮವಾದರೆ ಅದು ಅತ್ಯುತ್ತಮ ಸಂಗೀತವಾಗುತ್ತದೆ' ಎನ್ನುತ್ತಾರೆ.

ಕಥಾಕೀರ್ತನ ಅಥವಾ ಹರಿಕಥಾ ಪರಂಪರೆಯು ಭಕ್ತಿಪ್ರಧಾನ ಸಂಗೀತಯುಕ್ತ ಕಲಾಪ್ರಕಾರವಾಗಿದೆ. ಭಕ್ತಿ ಮತ್ತು ಸಂಗೀತ ಕಥಾಕೀರ್ತನೆಯ ಎರಡು ಕಣ್ಣುಗಳಿದ್ದಂತೆ. ಇವೆರಡರ ಅವಿನಾಭಾವ ಸಂಬಂಧದ ತಳಹದಿಯಲ್ಲಿ ಹರಿಕಥೆ ನಿಂತಿದೆ. ಹರಿಕಥೆಯ ಮುಖ್ಯ ಉದ್ದೇಶವೇ ಭಕ್ತಿಪ್ರಚಾರ. ಕೇವಲ ಭಗವಂತನ ಗುಣಗಾನವನ್ನು ಮಾಡಿ ಜನಸಾಮಾನ್ಯರಲ್ಲಿ ಭಕ್ತಿಯ ಸಂಚಲನ

ಮಾಡಿಸುವುದು ಅದರ ಚರಮ, ಪರಮ ಧ್ಯೇಯ. ಸಂಗೀತ, ಭಕ್ತಿಯ ಪ್ರಾಕಟ್ಯಕ್ಕೆ; ಭಕ್ತಿ, ಸಂಗೀತದ ಸಫಲತೆಗೆ. ಭಕ್ತಿ ಮತ್ತು ಸಂಗೀತದ ಸಮೀಕರಣವೇ ಹರಿಕಥೆ.

ಕಥಾಕೀರ್ತನವು ಶಾಸ್ತ್ರೀಯ ಸಂಗೀತ, ಜಾನಪದ, ನೃತ್ಯ, ಅಭಿನಯ, ಗಮಕ, ವಕ್ತೃತ್ವ – ಇಂತಹ ಅನೇಕ ಕಲೆಗಳ ಸಮ್ಮಿಶ್ರ ವಾದ ವಿಶಿಷ್ಟವಾದ ಕಲಾಪ್ರಕಾರವಾಗಿದೆ. ಕಥಾ-ಕೀರ್ತನವು ಹರಿಕಥೆ, ಕಥಾ ಕಾಲಕ್ಷೇಪ, ಕಥಾಪ್ರಸಂಗಂ, ಕೀರ್ತನ, ಸಂಗೀತೋ ಪಾಖ್ಯಾನ ಎಂಬಿತ್ಯಾದಿ ಹಲವು ಹೆಸರುಗಳಿಂದ ದೇಶದ ನಾನಾ ಭಾಗಗಳಲ್ಲಿ ಜನಜನಿತವಾಗಿದೆ. ಹೆಸರು ಬೇರೆಯಾಗಿದ್ದರೂ ಕಲೆಯ ಮೂಲ ಸ್ವರೂಪ-ಹೇತು ಒಂದೇ ಆಗಿದೆ. ಈ ಹರಿಕಥಾ ಪ್ರಕಾರಕ್ಕೆ ಪ್ರಾಚೀನತೆ ಇದೆ. ಸೋಮೇಶ್ವರನ **'ಮಾನಸೋಲ್ಲಾಸ'** ಎಂಬ ವಿಶ್ವಕೋಶದಲ್ಲಿ ಕಥಾ-ವಿನೋದವೆಂಬ ಪ್ರಕರಣದಲ್ಲಿ ಈ ಕಲೆಯ ಹಳೆಯ ಬೇರುಗಳನ್ನು ಕಾಣಬಹುದು.

ಕಥಾ-ಕೀರ್ತನ ವಿಷಯದ ವ್ಯಾಪ್ತಿ ವಿಸ್ತಾರವಾದುದು. ಹಲವು ಕಲೆಗಳ ಸಮನ್ವಯದ ಕಲಾಪ್ರಕಾರವಾದ ಕಥಾ-ಕೀರ್ತ ನವು ಜನಪರವಾದ ನಿಲುವನ್ನು ಹೊಂದಿರುವ, ಆಧ್ಯಾತ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ, ಸಾಮಾಜಿಕ ಆಯಾಮಗಳನ್ನು ಹೊಂದಿ ರುವ, ಜನಮಾನಸವನ್ನು ಸುಲಭವಾಗಿ ಮುಟ್ಟುವ ಕಲಾಸಾಧನ ವಾಗಿದೆ. ಕಥಾ-ಕೀರ್ತನದಲ್ಲಿ ಪ್ರಸ್ತುತಪಡಿಸುವ ಪಾತ್ರಗಳ ಗುಣ -ಸ್ವಭಾವಗಳಿಗನುಗುಣವಾಗಿ ಧ್ವನಿಯ ಏರಿಳಿತ, ನವರಸಗಳ ಆವಿರ್ಭಾವವನ್ನು ಸಾಹಿತ್ಯ, ಸಂಗೀತ, ಅಭಿನಯಗಳ ಮೂಲಕ ಪ್ರದರ್ಶಿಸುವುದು ಕಥಾ-ಕೀರ್ತನೆಯ ಮೂಲ ಸ್ವರೂಪ. ಅನೇಕ ಕಲೆಗಳನ್ನು ಸಮ್ಮಿಲನಗೊಳಿಸಿ ಒಬ್ಬ ವ್ಯಕ್ತಿಯು ಪ್ರಸ್ತುತಪಡಿಸು ವುದು ಕಥಾ-ಕೀರ್ತನ ಕಲೆಯಾಗಿದೆ.

ಶಾಸ್ತ್ರೀಯ ಸಂಗೀತ, ಶಿಷ್ಟ ಸಾಹಿತ್ಯ, ಜಾನಪದ, ನವರಸಗಳ ಪೋಷಣೆ ಮುಂತಾದ ಗುಣವಿಶೇಷಗಳಿಂದ ಅದು ಸಾಮಾನ್ಯ ಪ್ರಜೆಯನ್ನು ಮುಟ್ಟುವಂಥದ್ದು ಮತ್ತು ತಟ್ಟುವಂಥದ್ದು. ಜಗತ್ತಿನ ಪ್ರಚಾರ ಮಾಧ್ಯಮಗಳಲ್ಲಿ ಬಲು ಅಪರೂಪ ಹಾಗೂ ವಿಶಿಷ್ಟ ವಾದುದು ಕೀರ್ತನ ಕಲೆ. ಧರ್ಮಪ್ರಚಾರ, ಸಂಸ್ಕೃತಿ, ಜ್ಞಾನ, ನೀತಿಬೋಧನೆ, ಜೀವನಾದರ್ಶ, ರಾಷ್ಟ್ರಪ್ರೇಮ ಮೊದಲಾದ ಉನ್ನತ ಮೌಲ್ಯಗಳನ್ನು ತಮ್ಮ ಕಥಾಕೀರ್ತನಗಳ ಮೂಲಕ ಜನರ ಮನಸ್ಸಿಗೆ ತಲುಪಿಸಿದ ಭಾರತೀಯ ಸಂಸ್ಕೃತಿಯ ಹರಿಕಾರರೇ ಕೀರ್ತನಕಾರರು.

ಹರಿಕಥೆಯಲ್ಲಿ ಸಂಗೀತದ ಪಾತ್ರ ಬಹಳ ಮಹತ್ವದ್ದು.

**ದೇವದತ್ತಾಮಿಮಾಂ ವೀಣಾಂ ಸ್ವರಬ್ರಹ್ಮವಿಭೂಷಿತಾಮ್ ।**
**ಮೂರ್ಛಯಿತ್ವಾ ಹರಿಕಥಾಂ ಗಾಯಮಾನಶ್ಚರಾಮ್ಯಹಮ್ ॥**

*(ಭಾಗವತ- ೧.೬.೩೩)*

ನಾರದರು ಹೇಳುತ್ತಾರೆ, ''ಭಗವಂತನು ದಯಪಾಲಿಸಿದ ಸ್ವರ ಬ್ರಹ್ಮಯೋಗದಿಂದ ವಿಭೂಷಿತವಾದ ಈ ವೀಣೆಯನ್ನು ಎತ್ತಿಕೊಂಡು ಅದನ್ನು ನುಡಿಸುತ್ತಾ ಅದರ ಜೊತೆಗೆ ಹರಿಕಥೆಯ ಗಾಯನ ಮಾಡುತ್ತಾ ನಾನು ತ್ರಿಲೋಕಗಳಲ್ಲಿ ಭ್ರಮಣ ಮಾಡು ತ್ತಿರುತ್ತೇನೆ.''

ಸಂಗೀತವು ಕಥಾ-ಕೀರ್ತನದ ಪ್ರಧಾನ ಅಂಗವಾಗಿದೆ. ನಾದ ಮಯವಾದ ಸಂಗೀತವು ಭಾವಪ್ರಧಾನವಾದರೆ ವೇದಮಯ ವಾದ ಸಾಹಿತ್ಯವು ಜ್ಞಾನ ಪ್ರಧಾನವಾದುದು. ಕಥಾ-ಕೀರ್ತನದಲ್ಲಿ ಸಾಹಿತ್ಯವು ಶ್ರುತಿಬದ್ಧವಾಗಿದ್ದು ಸಂಗೀತಮಯವಾಗಿರುತ್ತದೆ. ಇವರ ಮಾತು ಕೂಡ ಶ್ರುತಿಯಲ್ಲೇ ಇರುತ್ತದೆ. ಗಾಂಧಾರ, ಪಂಚಮದಲ್ಲಿ ಮಾತನಾಡುತ್ತಾರೆ. ಭಾವ ಬದಲಾದಂತೆ ಸ್ವರಗಳು ಕೂಡ ಬದಲಾಗುತ್ತವೆ.

ಮಾನವನಿಗೆ ಭಾವವು ಎಷ್ಟು ಶೀಘ್ರವಾಗಿ ಜಾಗೃತವಾಗಿ ಮುಟ್ಟಬಲ್ಲುದೋ, ವಿಚಾರವು ಅಷ್ಟು ಬೇಗ ತಲುಪಲಾರದು. ಭಾವಪ್ರಧಾನವಾದ್ದರಿಂದ ಶ್ರೋತೃಗಳಿಗೆ ನೇರವಾಗಿ ಅದರ ಅನುಭೂತಿ ಉಂಟಾಗುತ್ತದೆ. ಭಾವವು ಬೆಳೆದಾಗ ಮನುಷ್ಯನು ಕೋಮಲನಾಗುತ್ತಾನೆ, ವಿಚಾರ ಹೆಚ್ಚಾದಾಗ ಕಠಿಣನಾಗಿ ತಾರ್ಕಿಕ ನಾಗುತ್ತಾನೆ. ಹತ್ತು-ಹದಿನೈದು ನಿಮಿಷಗಳಲ್ಲಿ ವಿವರಿಸುವ ಭಾವ ವನ್ನು ಒಂದು ಹಾಡಿನ ಮೂಲಕ ಸುಲಭವಾಗಿ ಸ್ವಲ್ಪ ಸಮಯ ದಲ್ಲೇ ಜನರಿಗೆ ಮುಟ್ಟಿಸಬಹುದು. ಜಗತ್ತಿನಲ್ಲಿ ದೇವರು, ಭಕ್ತಿ ಇತ್ಯಾದಿಗಳು ಭಾವಪ್ರಧಾನವಾದ ವಿಷಯಗಳೇ ಆಗಿವೆ.



ಕಥಾಕೀರ್ತನೆಯು ಗೇಯಪ್ರಧಾನವಾದ ಕಲೆ. ಕಥಾಕೀರ್ತನೆಯಲ್ಲಿ ಶಾಸ್ತ್ರೀಯ ಸಂಗೀತ, ಲಘು ಶಾಸ್ತ್ರೀಯ, ಜಾನಪದ ಸಂಗೀತದ ಬಳಕೆಯನ್ನು ಕಾಣಬಹುದಾಗಿದೆ. ಶಾಸ್ತ್ರೀಯ ಸಂಗೀತದಲ್ಲಿ ಪರಿಣತಿ ಪಡೆದ ಕಲಾವಿದರ ಹರಿಕಥಾ ಪ್ರಸ್ತುತಿ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಶ್ರುತಿ ಶುದ್ಧತೆ, ಅನೇಕ ರಾಗಗಳ ಜ್ಞಾನ ಮತ್ತು ಸಂದರ್ಭೋಚಿತ ರಾಗಗಳ ಬಳಕೆ ಇವು ಕಥಾಕೀರ್ತನೆಗೆ ಸಹಕಾರಿಯಾಗಿರುತ್ತದೆ. ಕರುಣ, ವೀರ, ಶೃಂಗಾರಾದಿ ನವರಸಗಳ ಆವಿರ್ಭಾವವನ್ನು ಆಯಾಯಾ ರಾಗಗಳ ಮೂಲಕ ಪ್ರಕಟಪಡಿಸುವುದು ಸುಲಭವಾಗುತ್ತದೆ. ದೇವರ ಪ್ರಾರ್ಥನೆ ಮಾಡುವಾಗ ಮತ್ತು ಕರುಣಾರಸ ಪ್ರಧಾನವಾದ ಕಾಲದಲ್ಲಿ ಹಾಡುಗಳು ನಿಧಾನಗತಿ ಇದ್ದರೆ, ಆ ಭಾವಕ್ಕೆ ಹತ್ತಿರವಿರುವ ರಾಗಗಳ ಪ್ರಯೋಗದಿಂದ ಬೇಗನೆ ವಾತಾವರಣ ನಿರ್ಮಾಣ ಮಾಡಬಹುದು. ರಾಗಜ್ಞಾನ ಕಡಿಮೆ ಇರುವ ವ್ಯಕ್ತಿ ಅದೇ ಸಂದರ್ಭಕ್ಕೆ ವೀರರಸ ರಾಗವನ್ನು ಹಾಡಿದರೆ ಆಭಾಸವಾಗುತ್ತದೆ. ಹಾಗೆ ವೀರರಸ ಸಂದರ್ಭದಲ್ಲಿ ವಿಳಂಬವಾಗಿ ಹಾಡಿದರೆ ರಸವು ಕಸವಾಗುವ ಸಾಧ್ಯತೆಗಳೇ ಹೆಚ್ಚು. ನಿಖರವಾದ ಶ್ರುತಿ–ಲಯಗಳ ಜ್ಞಾನವನ್ನು ಶಾಸ್ತ್ರೀಯ ಗಾಯನ ಅಭ್ಯಾಸದ ಮೂಲಕ ಪಡೆಯಬಹುದು. ಕಥಾ–ಕೀರ್ತನದಲ್ಲಿ ರಾಗ ಸಂಯೋಜನೆ ತುಂಬಾ ಸೂಕ್ಷ್ಮವಾದ ಮತ್ತು ಮಹತ್ವದ ವಿಷಯವಾಗಿದೆ. ಸಂಗೀತಶಾಸ್ತ್ರದಲ್ಲಿ ಪ್ರತಿಯೊಂದು ರಾಗದ ಲಕ್ಷಣ, ಪ್ರಕೃತಿ, ಅದರಿಂದ ಹೊರಹೊಮ್ಮುವ ರಸಭಾವಗಳ ವಿಮರ್ಶೆ ಇದೆ. ಈ ಭಾಗವನ್ನು ಕೀರ್ತನಕಾರರು ಚೆನ್ನಾಗಿ ತಿಳಿದಿರಬೇಕು. ಆಗ ರಾಗ ತಾಳಗಳ ಜೋಡಣೆ ಚೆನ್ನಾಗಿರುತ್ತದೆ.

ಕಥಾ ಕೀರ್ತನದ ಪ್ರಮುಖ ಭಾಗ ಸಂಗೀತವಾಗಿದೆ. ಆದರೆ ಕಥಾ–ಕೀರ್ತನ ಶಾಸ್ತ್ರೀಯ ಸಂಗೀತ ಅಥವಾ ಕೇವಲ ಕಾರ್ಯಕ್ರಮವಾಗಬಾರದು. ಸಂಗೀತದ ಪ್ರಮಾಣ ಅತ್ಯಂತ ಮಹತ್ವದ ವಿಷಯವಾಗಿದೆ. ಭಕ್ತಿ ಮತ್ತು ಕಥೆಯ ಹಂದರವನ್ನು ಜಾಗ್ರತೆಯಾಗಿ ಸರಿದೂಗಿಸಿಕೊಂಡು ಹೋಗುವುದು ಕೀರ್ತನಕಾರರ ಜವಾಬ್ದಾರಿಯಾಗಿದೆ. ಭಕ್ತಿ ಮತ್ತು ಸಂಗೀತದ ಸರಿಯಾದ ಮಿಶ್ರಣ ಹರಿಕಥೆಯಲ್ಲಿ ಅತ್ಯಗತ್ಯ. ಭಗವತ್ ಪ್ರೇಮದ ಪ್ರಕಟೀಕರಣ ಕಥಾಕೀರ್ತನದಲ್ಲಿ ಕಾಣುತ್ತೇವೆ. ಶ್ರೀಪುರಂದರದಾಸರು ತಮ್ಮ ಒಂದು ದೇವರನಾಮದಲ್ಲಿ, **'ಕೇಳನೋ ಹರಿ ತಾಳನೋ । ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ'** ಎಂದು ಹಾಡಿದ್ದಾರೆ. ಭಗವತ್ ಪ್ರೇಮವೇ ಭಕ್ತಿ. ಅದನ್ನೇ ನಾರದರು ತಮ್ಮ ಭಕ್ತಿ ಸೂತ್ರದಲ್ಲಿ **'ಸಾ ತ್ವಸ್ಮಿನ್ ಪರಮಪ್ರೇಮರೂಪಾ'** ಎಂದಿದ್ದಾರೆ. ಭಕ್ತಿ ಇಲ್ಲದ ಸಂಗೀತವನ್ನು ದೇವರು ಕೇಳಲಾರ, ಜನರಿಗೂ ಬೇಸರ ತಂದೀತು. ಭಕ್ತಿ–ಪ್ರೇಮಯುಕ್ತವಾದ ಸಂಗೀತ ಪರಮಾತ್ಮನಿಗೆ ಪ್ರಿಯವಾದುದು. ಹರಿಕಥೆಯಲ್ಲಿ ಆ ರೀತಿಯ ಸಂಗೀತವಿದೆ ಮತ್ತು ಕೀರ್ತನಕಾರರ ಅಪೇಕ್ಷೆಯೂ ಅದೇ ಇರುತ್ತದೆ. ಭಾವ, ಭಕ್ತಿ, ಪ್ರೇಮಗಳ ಸಮ್ಮಿಲನ ಕಥಾ–ಕೀರ್ತನೆಯ ಸಂಗೀತದಲ್ಲಿ ಕಾಣಸಿಗುತ್ತದೆ. ಅಲ್ಲಿ ಭಕ್ತಿ ಮತ್ತು ಸಂಗೀತದ ಸಮಾಗಮ ಸರಿಯಾಗಿ ಸಮ್ಮಿಳಿತವಾಗಿರುತ್ತದೆ.

ಹರಿಕಥೆಯಲ್ಲಿ ಶಾಸ್ತ್ರೀಯ ಸಂಗೀತದ ಜೊತೆಗೆ ಜಾನಪದ ಶೈಲಿಯ ಸಂಗೀತವೂ ಇರುತ್ತದೆ. ಅನುಭವ ಪದಗಳನ್ನು ಜಾನಪದ ಸಂಗೀತದಲ್ಲಿ ಹಾಡಿದರೆ, ಅದರಲ್ಲೂ ನಿರಾಕಾರ ಭಕ್ತಿಯ ಸಿಂಚನವಿರುತ್ತದೆ. ದೇವರನಾಮಗಳನ್ನು, ಮರಾಠಿ ಅಭಂಗಗಳನ್ನು, ಭಜನಗಳನ್ನು, ಭಕ್ತಿಪ್ರಧಾನ ಶಾಸ್ತ್ರೀಯ ರಚನೆಗಳನ್ನು ಹರಿಕಥೆಯಲ್ಲಿ ಹಾಡುತ್ತಾರೆ. ಚಲನಚಿತ್ರಗೀತೆಗಳನ್ನು ಹಾಡುವುದಿಲ್ಲ. ಏಕೆಂದರೆ ಆ ಗೀತೆಗಳನ್ನು ಹಾಡುವಾಗ ನಮ್ಮ ಕಣ್ಣ ಮುಂದೆ ನಟ–ನಟಿಯರ ಚಿತ್ರ ಬರುತ್ತದೆ. ಭಕ್ತಿಗೀತೆಗಳನ್ನು ಹಾಡುವಾಗ ನಮ್ಮ ಕಲ್ಪನೆಯ ರಾಮನನ್ನೋ, ಕೃಷ್ಣನನ್ನೋ ನಮ್ಮ ಮುಂದೆ ಚಿತ್ರಿಸುತ್ತೇವೆ. ಅದುವೇ ಕಥಾ–ಕೀರ್ತನೆಯ ಮೂಲಧಾತು. ಸಂಗೀತದ ಶ್ರುತಿಯಿಂದ ಶ್ರುತಿ(ವೇದ)ಯ ಸಹಾಯದಿಂದ ಭಗವಂತನ ಸ್ತುತಿ ಮತ್ತು ಗುಣಗಾನ ಮಾಡುವುದು ಹರಿಕಥೆಯಲ್ಲಿದೆ. ಅದಕ್ಕೆ ಭಕ್ತಿಯೇ ಆಧಾರಸ್ತಂಭ.

ಹರಿಕಥೆ ಶಬ್ದದ ಅರ್ಥವೇ ಪರಮಾತ್ಮನ ಕಥೆ, ಅವನ ಕೀರ್ತಿಯನ್ನು ಹಾಡುವುದು. ಅಲ್ಲಿ ಸಂಗೀತವಿದ್ದು ಅದು ಭಕ್ತಿಯುಕ್ತವಾಗಿದೆ. ಈ ಹರಿಕಥಾ ಪರಂಪರೆ ಸಂಗೀತ ಮತ್ತು ಭಕ್ತಿಗಳ ಸಮಾಗಮವಾಗಿದೆ. ಕರ್ನಾಟಕದಲ್ಲಿ ಹರಿದಾಸ ಪರಂಪರೆ ಹದಿಮೂರನೆಯ ಶತಮಾನದಿಂದ ಹಿಡಿದು ಇಂದಿನವರೆಗೆ ಅವಿರತವಾಗಿ ನಡೆದುಕೊಂಡು ಬಂದಿದೆ. ಇಂದು ಕೂಡ ಹರಿಕಥಾ ಕಲೆ ಜನಪ್ರಿಯವಾಗಿ ಮನ್ನಣೆ ಪಡೆದಿದೆ. ❄

## ಹರಿಕಥಾ ಶ್ರವಣ ಮಾಡೋ

ಹರಿಕಥಾ ಶ್ರವಣ ಮಾಡೋ, ಪಾಡೋ<br>ಹರಿಕಥಾ ಶ್ರವಣ ಮಾಡೋ ॥ ಪ ॥

ಪಥಾ ವೈಕುಂಠಕಿದು ನೋಡೋ ॥ ಅ.ಪ. ॥

ಸರಸಿಜನಾಭನ ಸರ್ವದಾ ಹೊಗಳುತ<br>ದುರಿತ ದೊರಕೀಡ್ಯಾಡೋ ॥ ೧ ॥

ಜ್ಞಾನ ಭಕುತಿ ವೈರಾಗ್ಯವೀವ ನಮ್ಮ<br>ಆನಂದತೀರ್ಥರ ಪಾಡೋ ॥ ೨ ॥

ಪರಮ ಪುರುಷ ಶ್ರೀ ಪುರಂದರ ವಿಠಲನ<br>ಚರಣಕಮಲದಲಿ ಕೂಡೋ ॥ ೩ ॥

— ಪುರಂದರದಾಸರು

# ಹರಿದಾಸರ ನಾದಯೋಗ

**ಡಾ. ಎಚ್.ಎನ್.ಮುರಳೀಧರ**

**'ಕರ್ನಾಟಕ ಸಂಗೀತ ಪಿತಾಮಹ'**ರೆನಿಸಿಕೊಂಡ ಪುರಂದರದಾಸರೇ ಮೊದಲಾದ ದಾಸವರೇಣ್ಯರು ತಮ್ಮ ಆಧ್ಯಾತ್ಮಿಕತೆಯ ಮಾಧ್ಯಮವಾಗಿ ಆರಿಸಿಕೊಂಡ ಹಾಡುಗಳಲ್ಲಿ ಸಾಹಿತ್ಯ-ಸಂಗೀತಗಳ ಸಮಪ್ರಮಾಣದ ಸಮನ್ವಯವಿದೆ. ಅವರ ಅಪೂರ್ವ ಕೃತಿಗಳ ಹಿಂದಿರುವ ತಾತ್ತ್ವಿಕ ನೆಲೆಯನ್ನರಸುವ ಪ್ರಯತ್ನ ಮಾಡಿರುವ ಲೇಖಕರು ನಿವೃತ್ತ ಕನ್ನಡ ಪ್ರಾಧ್ಯಪಕರು. ಉತ್ತಮ ವಾಗ್ಮಿಗಳು ಹಾಗೂ ಲೇಖಕರಾಗಿರುವ ಅವರು ದಾಸಸಾಹಿತ್ಯದ ಮೇಲೆ ಸಂಶೋಧನ ಪ್ರಬಂಧವನ್ನು ಸಲ್ಲಿಸಿ ಡಾಕ್ಟರೇಟ್ ಪದವಿ ಪಡೆದಿದ್ದಾರೆ ಹಾಗೂ ಇನ್ನಿತರ ಹಲವು ಕನ್ನಡ ಕೃತಿಗಳನ್ನು ರಚಿಸಿದ್ದಾರೆ. ಅವರು ಬೆಂಗಳೂರು ರಾಮಕೃಷ್ಣ ಮಠದ ಭಕ್ತರು.



ಹಂಪಿಯಲ್ಲಿರುವ ಪುರಂದರದಾಸರ ವಿಗ್ರಹ

**ಶ**ಬ್ದವು ಶ್ರುತಿಗೊಂಡು ನಾದವಾಗುವಂತೆ ಅಭಿವ್ಯಕ್ತಿಯನ್ನು ಶ್ರುತಿಗೊಳಿಸುವುದು ಹರಿದಾಸರ ಅಭಿವ್ಯಕ್ತಿಯ ಲಕ್ಷಣ. ಇದಕ್ಕಾಗಿ ಅದು ಕಂಡುಕೊಳ್ಳುವ ಮಾರ್ಗಗಳು ಹಲವು. ಪ್ರತಿಯೊಂದು ಕೀರ್ತನೆಯೂ ಶ್ರುತಿಗೊಳ್ಳುವ ಹಲವು ಮಾರ್ಗಗಳಲ್ಲಿ ಕೆಲವೊಂದನ್ನು ಹುಡುಕುತ್ತಿರುತ್ತದೆ. ಹೀಗಾಗಿ ಕೀರ್ತನೆ ಹಾಡೆನ್ನುವುದು ಅದನ್ನು ಹಾಡಲಾಗುತ್ತದೆ ಎಂಬ ಕಾರಣಕ್ಕಾಗಿ ಮಾತ್ರವಲ್ಲ. ಹಾಡುವಿಕೆ ಕೀರ್ತನೆಯ ಒಂದು ಹಂತದ ಆಚರಣೆ ಹೌದು. ಆದರೆ ಕೇವಲ ಹಾಡುವುದರಿಂದಲೇ ಅದು ಕೀರ್ತನೆಯಾಗುವುದಿಲ್ಲ. ಹಲವು ಹಂತಗಳಲ್ಲಿ ಅದು ತನ್ನತನವನ್ನು ಸಿದ್ಧಿಸಿಕೊಳ್ಳುತ್ತ ಹೋಗಬೇಕಾಗುತ್ತದೆ. ಹಾಡುವಿಕೆಯೆನ್ನುವುದು ಕೀರ್ತನೆಯ 'ಕೇಳುವ' ನಾದದ ಆಯಾಮವಾದರೆ ಅದಕ್ಕೆ ಪೂರ್ವಭಾವಿಯಾಗಿ ಭಾಷಿಕ ನೆಲೆಯಲ್ಲಿ ಕೀರ್ತನೆ 'ಕೇಳದ' ನಾದದ ಆಯಾಮಗಳನ್ನೂ ಸಿದ್ಧಗೊಳಿಸುತ್ತಿರುತ್ತದೆ. 'ಕೇಳದ' ನಾದದ ಪ್ರತಿಯೊಂದು ಘಟಕವೂ 'ಕೇಳುವ' ನಾದವನ್ನು ಪುಷ್ಟಿಗೊಳಿಸುವುದಕ್ಕಾಗಿಯೇ ಎಂದು ಮತ್ತೆ ಹೇಳಬೇಕಾಗಿಲ್ಲ. ಇದು ಕೀರ್ತನೆ ಕುದಿದು ಪಾಕಗೊಳ್ಳುವ ಕ್ರಮವೂ ಹೌದು.

ಇಲ್ಲಿ ಕೀರ್ತನೆ ಎದುರಿಸಬೇಕಾದ ಮುಖ್ಯವಾದ ಸವಾಲೊಂದಿದೆ. ಅದು ಲೋಕ ವಿವರದ ಪಾಡುಗಳನ್ನು ಹಾಡಾಗಿಸುವ ಪ್ರಕ್ರಿಯೆ ; ಭಾಷಿಕ ವಿವರಗಳನ್ನು ಭಾಷಿಕ ನೆಲೆಯಿಂದಾಚೆಗೆ ಕೊಂಡೊಯ್ಯಬೇಕಾದ ಜವಾಬ್ದಾರಿ. ಶ್ರುತಿಗೊಳ್ಳದ ಮಾತು ನೂರಕ್ಕೆ ನೂರರಷ್ಟು ಅರ್ಥ. ಆದ್ದರಿಂದಲೇ ಅದು ವ್ಯಾವಹಾರಿಕ ಮತ್ತು ಲೌಕಿಕ. ಈ ಮಾತಿನ ವಿಕಸನದ ಇನ್ನೊಂದು ತುದಿ ನಾದ. ಹೀಗಾಗಿ ಅರ್ಥ ಮತ್ತು ನಾದಗಳ ನಡುವಿನ ಜಗ್ಗಾಟ ಕೀರ್ತನೆಯ ಬೆಳೆಯುವ ಪ್ರಕ್ರಿಯೆಯ ಪ್ರಧಾನ ಲಕ್ಷಣವಾಗುತ್ತದೆ. ಅಥವಾ ಕೀರ್ತನೆಯೇ ಈ ಜಗ್ಗಾಟವೆಂದರೂ ಸರಿಯೆ. ಇದಕ್ಕೊಂದು ಪ್ರಾರಂಭವಿರುವಂತೆ ಕಂಡರೂ ಅಂತ್ಯ ಮಾತ್ರ ಇಲ್ಲ . ಅಥವಾ ಅಂತ್ಯವನ್ನು ಕಾಣುವುದು ಕೀರ್ತನೆಯ ಸೋಲೆಂದರೂ ನಡೆದೀತು. ಅರ್ಥದ ಭಾರವನ್ನು ಹೊರುವುದನ್ನು ಅದು ಎಷ್ಟರ ಮಟ್ಟಿಗೆ ಆಟವನ್ನಾಗಿ ಮಾಡಿಕೊಳ್ಳುತ್ತದೆಯೋ ಅಷ್ಟರಮಟ್ಟಿಗೆ ಅದು ಅದರ ಯಶಸ್ಸು. ಅದು ಯಾವುದೇ ಹಂತದಲ್ಲೂ ಕುಸಿಯಲೂಬಹುದು. ಆಗ ಅದು ಅದರ ಬಳಲಿಕೆಯ ಸೂಚನೆಯಾಗುತ್ತದೆ.

ಇನ್ನೊಂದು ಕಡೆಯಿಂದ ನೋಡಿದಾಗ ಕೀರ್ತನೆ ಅರ್ಥದ ಜೊತೆಯಲ್ಲಿ ನಡೆಸುವ ಜಗ್ಗಾಟ ತಾತ್ತ್ವಿಕತೆಯೊಂದಿಗೆ ನಡೆಸುವ ಜಗ್ಗಾಟವೂ ಹೌದು. ಕೇವಲ ತತ್ತ್ವಬದ್ಧತೆ ಸಿದ್ಧಾಂತ ಮಂಡನೆಯಲ್ಲೋ ನೀತಿನಿರೂಪಣೆಯಲ್ಲೋ ಕೊನೆಗೊಂಡೀತು. ಆದರೆ ಅಭಿವ್ಯಕ್ತಿ ಆಟವಾಗಬೇಕಾದರೆ ಅದು ತನ್ನನ್ನು ತತ್ತ್ವದ ಭಾರದಿಂದ ಬಿಡಿಸಿಕೊಳ್ಳಬೇಕಾಗುತ್ತದೆ. ಈ ಬಗೆಯ ಸಿದ್ಧಿಗೆ ಅಸಂಖ್ಯ ನಿದರ್ಶನಗಳಿವೆಯೆನ್ನುವುದು ಕೀರ್ತನೆಗಳ ಯಶಸ್ಸಿನ ಅಥವಾ ಯಶಸ್ವೀ ಕೀರ್ತನೆಗಳ ಇನ್ನೊಂದು ಮುಖವೂ ಹೌದು.

ಶ್ರುತಿಗೊಳಿಸಲು ದಾಸರು ಅನುಸರಿಸುವ ವಿಧಾನಗಳಲ್ಲಿ ಒಂದೆಂದರೆ ದೇವರಿಗಾಗಿ ಹಾಡುವುದು. ಆದರೆ ದಾಸರ ದೇವರು ಏನನ್ನೂ ಉದ್ದೇಶಕ್ಕಾಗಿ ಮಾಡುವುದಿಲ್ಲ. ಉದ್ದೇಶವೆನ್ನುವುದು ಕೊರತೆಯ ಇನ್ನೊಂದು ಮುಖ. ಯಾವುದನ್ನೂ 'ಇನ್ನೊಂದಕ್ಕಾಗಿ' ಮಾಡದೆ, ಮಾಡುವಿಕೆಗಾಗಿಯೇ ಮಾಡುವುದು ಅವನ ರೀತಿ. ಇಲ್ಲಿ ಮಾಡಿದ್ದರಿಂದ ಲಾಭವಿಲ್ಲ ; ಮಾಡದುದರಿಂದ ನಷ್ಟವಿಲ್ಲ. ಆದ್ದರಿಂದಲೇ ಇಲ್ಲಿ ಕ್ರಿಯೆಯೆಲ್ಲವೂ ಆಟ. ಆದ್ದರಿಂದಲೇ ಈ ದೇವರು 'ಲೀಲಾಮಯ'. ದಾಸರೂ ತಮ್ಮ ದೇವರಂತೆ ಕರ್ತೃತ್ವದ ಭಾರದಿಂದ ಪಾರಾದವರು ; ತಮ್ಮ ದೇವರ ಪಾದಕ್ಕೆ ತಮ್ಮನ್ನು ಒಪ್ಪಿಸಿಕೊಂಡವರು. ಆದ್ದರಿಂದ ಅವರು ಮಾಡುವ ಸ್ವಾತಂತ್ರ್ಯವನ್ನು ಮಾತ್ರವಲ್ಲ, ಹಕ್ಕನ್ನೂ ಬಿಟ್ಟುಕೊಟ್ಟವರು. ಆದರೆ ಈ ಬಂಧನವನ್ನೇ ಬಿಡುಗಡೆಯೆಂದು ಕಂಡರು. ಇನ್ನೊಂದು ರೀತಿಯಲ್ಲಿ, ಬಂಧವನ್ನು ಬಿಡುಗಡೆಯಾಗಿಸುವುದು ದಾಸರ ರೀತಿಯೂ ಹೌದು. ಅದಕ್ಕಾಗಿ ಅವರು ಅಭಿವ್ಯಕ್ತಿಯನ್ನೂ ಆಟ ವಾಗಿಸಿದರು. ಮಾತನ್ನು ಅದರ ಅರ್ಥದ ಭಾರದೊಂದಿಗೆ ಸ್ವೀಕರಿ ಸಿಯೇ ಅರ್ಥದಾಚೆಗೆ ಕೊಂಡೊಯ್ಯಲು ಹವಣಿಸಿದರು. ಇದಕ್ಕಾಗಿ ಅವರು ಭಾಷಿಕ ನೆಲೆಯಲ್ಲಿ ಕಂಡುಕೊಂಡ ಉಪಾಯ ಗಳು ಹಲವು. ಅವರು ದೇವರನ್ನು ಕರೆಯುವ ವಿಧಾನವನ್ನು ಗಮನಿಸಬಹುದು (ಉದಾ : 'ಯಾದವ ನೀ ಬಾ'). ಆದರೆ ಕರೆಯುತ್ತಲೇ ಹೋಗುವುದು ಅಥವಾ ಕರೆಯುತ್ತಲೇ 'ಇರು ವುದು' ಇದರ ಲಕ್ಷಣ. ಆದ್ದರಿಂದ ಇಲ್ಲಿ ಮಾತು ಕೊನೆಯಾಗುವು ದಿಲ್ಲ. ಪ್ರಾರಂಭವಾಗಿದೆಯೆಂದು ಹೇಳುವುದೂ ಉಪಚಾರ ಕ್ಕಾಗಿ. ಹೀಗಾಗಿ ಇಲ್ಲಿ 'ಅರ್ಥ' ಕಳೆದುಕೊಂಡ 'ಸ್ಥಿತಿ'ಯೊಂದರ ನಿರ್ಮಾಣವಾಗುತ್ತದೆ.

ದಾಸತ್ವವೆನ್ನುವುದು ಕರ್ತೃತ್ವದ ನಿರಾಕರಣೆಯೆಂದು ಹೇಳ ಲಾಯಿತಷ್ಟೆ. ಆದ್ದರಿಂದ ಇಲ್ಲಿ 'ಮಾಡುವ' ನೆಲೆ ಇಲ್ಲ; 'ಮಾಡಿಸಿ' ಕೊಂಡರೆ ಮಾತ್ರ 'ಆಗು'ತ್ತದೆ ಎಂಬ ಭಾವ. ಆದ್ದರಿಂದಲೇ ಇಲ್ಲಿ ದಾಸನು ತಾನು ದಾಸನಾಗಿದ್ದೇನೆ ಎಂದಾಗಲಿ, ಆಗುತ್ತೇನೆ ಎಂದಾ ಗಲಿ ಹೇಳಿಕೊಳ್ಳುವುದಿಲ್ಲ. ಬದಲಾಗಿ ತನ್ನನ್ನು ದಾಸನನ್ನಾಗಿ 'ಮಾಡಿಕೊ' ಎನ್ನುತ್ತಾನೆ: 'ದಾಸನ ಮಾಡಿಕೊ ಎನ್ನ'. ದಾಸನೆನ್ನು ವುದು ಕೇವಲ ಹಣೆಪಟ್ಟಿಯಲ್ಲ. ಅದು ದೈನಂದಿನ ಎಲ್ಲ ವಿವರ ಗಳಲ್ಲಿ ವಾಸ್ತವವಾಗಬೇಕು. ಆದ್ದರಿಂದಲೇ 'ಇಸು'ಪ್ರತ್ಯಯಗಳ ದೊಡ್ಡದೊಂದು ಪಟ್ಟಿಯೇ ಈ ಕೀರ್ತನೆಯಲ್ಲಿದೆ:

**ದುರುಬುದ್ಧಿಗಳನ್ನೆಲ್ಲ ಬಿಡಿಸೊ ।**
**ನಿನ್ನ ಕರುಣಕವಚವನೆನ್ನ ಹರಣಕ್ಕೆ ತೊಡಿಸೊ ॥**
**ಚರಣಸೇವೆ ಎನಗೆ ಕೊಡಿಸೊ । ಅಭಯ**
**ಕರಪುಷ್ಪವನೆನ್ನ ಶಿರದಲ್ಲಿ ಮುಡಿಸೊ ॥**

ಹೀಗೆ ದಾಸತ್ವವೆನ್ನುವುದು 'ಅಹಂ'ನ ನಿರಾಕರಣೆ. ಇದು ದಾಸರ ಸಾಧನೆಯಾದದ್ದು ಹಲವು ವಿಧದಲ್ಲಿ. ತನ್ನನ್ನು ಹಲವು ಪಾತ್ರಗಳಾಗಿ ವಿಸ್ತರಿಸಿಕೊಳ್ಳುವಲ್ಲಿಯೂ ಇದರ ಒಂದು ಸಾಧ್ಯತೆ ಯನ್ನೇ ಕಾಣಬಹುದು. ಕರ್ತೃತ್ವವನ್ನು ಇಲ್ಲವಾಗಿಸುವುದು ದಾಸತ್ವದ ಪ್ರಧಾನ ನೆಲೆ. ವ್ಯಕ್ತಿ ತನ್ನನ್ನು ವಿಸ್ತರಿಸಿಕೊಂಡಂತೆ ಕರ್ತೃತ್ವವೂ ಕರಗುತ್ತ ಹೋಗಿ ಬಹುಕರ್ತೃತ್ವದ ಸಮುದಾಯ ದಲ್ಲಿ ಒಂದಾಗಿಬಿಡುತ್ತದೆ. ಈ ಅರ್ಥದಲ್ಲಿ ದಾಸರು ಸಮು ದಾಯದ ದನಿಯೂ ಆಗುತ್ತಾರೆ. ಅಲ್ಲದೆ ಅವರು ಆರಿಸಿಕೊಂಡ ಹಾಡಿನ ಮಾಧ್ಯಮವೇ ಕರ್ತೃತ್ವವನ್ನು ನಿರಾಕರಿಸಿಕೊಳ್ಳು ವಂಥದು. ಹಾಡು 'ತಿಳಿಸು'ವುದಿಲ್ಲ ; 'ಆಗು'ತ್ತದೆ. ಅರ್ಥವನ್ನು ಮೀರುವುದು ಅದರ ವಿಧಾನ. ಹಾಡಿನ ಹಲವು ವಿನ್ಯಾಸಗಳಲ್ಲಿ ದಾಸರು ಮಾಡಿದ್ದೂ ಇದನ್ನೇ. ಹೇಳಿದಂತಿರಬೇಕು, ಹೇಳದಂತಿರ ಬೇಕು – ಇದು ಹಾಡಿನ ಸ್ವರೂಪ. ಮಾಡಿದಂತಿರಬೇಕು, ಮಾಡ ದಂತಿರಬೇಕು — ಇದು ದಾಸರ ಆಶಯ. ಆದ್ದರಿಂದ ಅವರು ಎಲ್ಲವನ್ನೂ ಆಟವನ್ನಾಗಿಸಿದರು. ಆಟದಲ್ಲಿ ಕ್ರಿಯೆ ಇದ್ದರೂ ಅದು ಒಂದು ಉದ್ದೇಶಕ್ಕಾಗಿ ದುಡಿಯುವುದಿಲ್ಲ. ಹಾಗಾಗಿ ಅದು ತನ್ನಷ್ಟಕ್ಕೇ ಅಸಾಧ್ಯವಾಗುತ್ತದೆ. ಆಟಕ್ಕೆ 'ಕುಣಿತ'ವೆಂಬ ಅರ್ಥವೂ ಇದೆ. ದಾಸರು ಎಲ್ಲವನ್ನೂ ಕುಣಿಸಿದವರು ; ಭಾಷೆ ಮತ್ತು ಅಭಿ ವ್ಯಕ್ತಿ ಮಾತ್ರವಲ್ಲ , ಅವರಲ್ಲಿ ವಸ್ತುವೂ ಕುಣಿಯುತ್ತದೆ. ಅವರ ದೇವರೂ ಕುಣಿಯುವ ದೇವರು. ತಾವೂ ಕುಣಿದರು, ದೇವ ರನ್ನೂ ಕುಣಿಸಿದರು, ಸಮುದಾಯಕ್ಕೊಂದು ಕುಣಿತದ ಲಯ ವನ್ನು ಕೊಟ್ಟರು. ಈ ದೃಷ್ಟಿಯಿಂದ ದಾಸರ ಅಭಿವ್ಯಕ್ತಿಯೆಂದರೂ ಅದೇ, ಅನುಭಾವವೆಂದರೂ ಅದೇ.

ದಾಸರು ಮುರಿದು ಕಟ್ಟಿದವರು. ಅದು ಸಿದ್ಧಾಂತವಿರ ಬಹುದು, ಪುರಾಣವಿರಬಹುದು, ಭಾಷೆಯಿರಬಹುದು, ಛಂದೋ ರೂಪವಿರಬಹುದು ; ಎಲ್ಲವನ್ನೂ ಒಪ್ಪಿಕೊಳ್ಳುತ್ತಲೇ ಅದನ್ನೊಂದು ಬಿಡುಗಡೆಯ ಪರಿಧಿಗೆ ಒಯ್ದು ಮುಟ್ಟಿಸುವ ತಂತ್ರಗಾರಿಕೆಯ ಕೌಶಲವನ್ನು ಇಲ್ಲಿ ಕಾಣಬಹುದು. ದಾಸರು ನೀತಿ–ಸಿದ್ಧಾಂತ ಗಳನ್ನು ಬೋಧಿಸಿದರೆನ್ನುವುದು ಸರಳೀಕರಣಗೊಂಡ ಸತ್ಯ. ಅಲ್ಲಿ ಪ್ರಧಾನವಾಗಿ ಗುರುತಿಸಬೇಕಾದುದು ಆಗುವಿಕೆಯ ಪ್ರಕ್ರಿಯೆ ಯನ್ನೇ ಹೊರತು ಹೇಳಿಕೆಗಳ ಗುಡ್ಡೆಯನ್ನಲ್ಲ. ಈ ದೃಷ್ಟಿಯಿಂದ ನೋಡಿದಾಗ ಅವರ ಅಂತರಂಗದ ಬೇರೊಂದು ಜಗತ್ತು ನಮ್ಮ ಕಣ್ಮುಂದೆ ತೆರೆಯುತ್ತದೆ.

ಈ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳಬೇಕಾದ ಒಂದು ಸಂಗತಿ ಯೆಂದರೆ ಕೀರ್ತನೆಗಳು 'ತಿಳಿಸುವ' ಮಾಧ್ಯಮವಲ್ಲ ಎನ್ನುವುದು. ಇದರ ಅರ್ಥ ಅವು ತಿಳಿಸುವುದಿಲ್ಲ ಎಂದಲ್ಲ ; ಬದಲಾಗಿ ಅವು ತಿಳಿಸುವುದಕ್ಕಾಗಿಯೇ ರೂಪುಗೊಂಡವಲ್ಲ ಎನ್ನುವುದು. ಭಾಷೆ ಒಂದು ಸಾಮೂಹಿಕ ಮಾಧ್ಯಮವೂ ಆಗಿರುವುದರಿಂದ ಅರ್ಥ ವನ್ನು ತಿರಸ್ಕರಿಸಿ ಇಲ್ಲಿ ಯಾವ ಸೃಷ್ಟಿಯೂ ಸಾಧ್ಯವಿಲ್ಲ ಎನ್ನುವುದು ಸತ್ಯ. ಆದರೆ ಅರ್ಥದ ಸಂವಹನವನ್ನು ಮೀರುವ ವ್ಯಂಜಕಗಳನ್ನು ನಾನಾ ರೀತಿಯಲ್ಲಿ ಸಾಹಿತ್ಯಕೃತಿಗಳು ತಮ್ಮ ಸಂವಿಧಾನದ ಒಳ ಗಡೆಯೇ ನಿರ್ಮಿಸಿಕೊಳ್ಳುತ್ತಿರುತ್ತವೆ ಎನ್ನುವುದೂ ಸತ್ಯ. ಕೀರ್ತ ನೆಗೆ ಮುಖ್ಯವಾಗಿ ಎರಡು ಲಕ್ಷಣಗಳು : ಒಂದು – ಮೇಲ್ನೋಟಕ್ಕೆ

ತೋರುವ 'ಸ್ಥಗಿತ' ಲಕ್ಷಣ ; ಇನ್ನೊಂದು – ಅದರ ಹಾಡುವಿಕೆಯ ಸಂದರ್ಭದಲ್ಲಿ ಆಯಾ ಕ್ಷಣಗಳಲ್ಲಿ ಸಿದ್ಧವಾಗುವ ಚಲನಶೀಲ ಲಕ್ಷಣ. ಕೀರ್ತನೆಗಳ ಮುದ್ರಿತ ರೂಪ ಮೊದಲನೆಯದಕ್ಕೆ ಉದಾಹರಣೆಯಾಗುತ್ತದೆ. ಎರಡನೆಯದನ್ನು ಕೀರ್ತನೆಗಳ 'ಆಚರಣೆಯ' ನೆಲೆ ಎನ್ನಬಹುದು. ಈ ಆಚರಣೆಯ ಸಂದರ್ಭದಲ್ಲಿ ಕೀರ್ತನೆಗಳ 'ಸ್ಥಗಿತ' ಲಕ್ಷಣಗಳು ಹಲವು ಬಗೆಯ ಸ್ಥಿತ್ಯಂತರಗಳಿಗೆ ಒಳಗಾಗುತ್ತವೆ. ಎರಡನೆಯದು ಮೊದಲನೆಯದರ ವಿವರಣೆ–ವಿಸ್ತರಣೆ–ವ್ಯಾಖ್ಯಾನ–ವಿಶ್ಲೇಷಣೆಯಾಗಲು, ಅಷ್ಟೇಕೆ ವಿರೋಧವಾಗಲೂ ಸಾಧ್ಯವಿದೆ. ಹಲವು ನಿದರ್ಶನಗಳಿಂದ ಇದನ್ನು ಕಂಡುಕೊಳ್ಳಬಹುದು. ಕೀರ್ತನೆಗಳ ಸ್ಥಗಿತ ಲಕ್ಷಣಗಳನ್ನು ಮೀರುವ ಪ್ರಕ್ರಿಯೆಯನ್ನು ಮತ್ತೆ ಎರಡು ನೆಲೆಗಳಲ್ಲಿ ವಿಶ್ಲೇಷಿಸಬಹುದು. ಒಂದು ಈ ಕೀರ್ತನೆಗಳ ವಾಕ್ಯಾತ್ಮಕ ನೆಲೆ (level of syntax) ; ಇನ್ನೊಂದು ನಿರೂಪಣಾತ್ಮಕ ನೆಲೆ (level of narration) ; ಮೊದಲನೆಯ ನೆಲೆಗೆ ಸಂಬಂಧಿಸಿದಂತೆ ಪ್ರಾಥಮಿಕವಾಗಿ ಗುರುತಿಸಿಕೊಳ್ಳಬೇಕಾದ ಒಂದು ಸಂಗತಿಯೆಂದರೆ ಕೀರ್ತನೆಗಳು ಸ್ವರೂಪತಃ ಮಾಹಿತಿಯನ್ನು ರವಾನಿಸಲು ಬಳಕೆಯಾಗುವ ಮಾಧ್ಯಮವಲ್ಲ ಎನ್ನುವುದು. ಕೀರ್ತನೆಗೆ ಶಾಬ್ದಿಕ ಮತ್ತು ವಾಕ್ಯಾತ್ಮಕ ನೆಲೆಗಳಲ್ಲಿ ಅರ್ಥಭಾರವಿದ್ದರೂ ಅದರ ಚಲನೆ ಮಾತ್ರ ಭಾವ ಸನ್ನಿವೇಶದ ನಿರ್ಮಾಣದ ಕಡೆಗೆ. ವಸ್ತುವಿನ ಭಾರವನ್ನು ನಿಶ್ಚಲ ಹಾಗೂ ಚಲನಶೀಲ ಸ್ಥಿತಿಗಳಲ್ಲಿ ನಿರ್ಧರಿಸುವ ಸೂತ್ರಗಳು ಬೇರೆ ಬೇರೆಯಷ್ಟೆ. ಕೀರ್ತನೆ ಪ್ರಾಥಮಿಕವಾಗಿ ಶ್ರೋತೃವನ್ನು ಅರ್ಥದ ಕಡೆಗೆ ಸೆಳೆದರೂ ಕರೆದೊಯ್ಯುವುದು ಮಾತ್ರ ಭಾವದ ಕಡೆಗೆ. ಇದನ್ನು ಅದು ಸಾಧಿಸುವುದು ತನ್ನ ಸ್ವರೂಪದಲ್ಲೇ ಅಂತರ್ಗತವಾಗಿರುವ ಪುನರಾವರ್ತನೆಯ ಮೂಲಕ. ಈ ಸಂದರ್ಭದಲ್ಲಿ ಪಲ್ಲವಿ–ಅನುಪಲ್ಲವಿ ನುಡಿಗಳ ನಡುವೆ ಹಲವು ಬಗೆಯ ವಾಕ್ಯಾತ್ಮಕ ಸಂಬಂಧಗಳು ನಿರ್ಮಾಣವಾಗುತ್ತವೆ. ಮಾಹಿತಿಯನ್ನು ನೀಡುವ ಉದ್ದೇಶವೇ ಪ್ರಧಾನವಾಗಿರುವ ಅಭಿವ್ಯಕ್ತಿಯಲ್ಲಿ ಹಿಂದಿನ ವಾಕ್ಯಗಳಿಗೂ ಮುಂದಿನ ವಾಕ್ಯಗಳಿಗೂ ಸರಳರೇಖಾತ್ಮಕವಾದ ಚಲನೆಯ ಸಂಬಂಧ (linear movement) ನೆಲೆಗೊಂಡರೆ, ಕೀರ್ತನೆಗಳ ಸಂದರ್ಭದಲ್ಲಿ ಇದು ವೃತ್ತಾಕಾರವಾದ ಚಲನೆಯಾಗುತ್ತದೆ (Circular movement). ಹೊರಟಲ್ಲಿಗೇ ಹಿಂದಿರುಗುವುದು ಈ ಚಲನೆಯ ಸ್ವರೂಪ. 'ಯಾದವ ನೀ ಬಾ ಯದುಕುಲನಂದನ', 'ದೇವ ಬಂದಾ ನಮ್ಮ ಸ್ವಾಮಿ ಬಂದಾನೊ', 'ಭಾಗ್ಯದ ಲಕ್ಷ್ಮೀ ಬಾರಮ್ಮ' ಮೊದಲಾದ ಅಸಂಖ್ಯ ಕೀರ್ತನೆಗಳನ್ನು ಇದಕ್ಕೆ ನಿದರ್ಶನವಾಗಿ ಕೊಡಬಹುದು. ಈ ಹಿನ್ನೆಲೆಯಲ್ಲಿ ಇಲ್ಲಿನ ಅಭಿವ್ಯಕ್ತಿಯೂ 'ಅರ್ಥವಿಲ್ಲ ಸ್ವಾರ್ಥವಿಲ್ಲ'ದ 'ಆಟ'ವಾಗಿ ಪರಿಣಮಿಸುತ್ತದೆ. ಪಂಡಿತ ಕೂಟದವರ ಅರ್ಥಪ್ರಧಾನವಾದ ಶಾಸ್ತ್ರೀಯ ವ್ಯಾಖ್ಯಾನಕ್ರಮದೊಂದಿಗೆ ಎದುರುಬದುರಾಗಿಸಿ ಕೂಡ ಇದನ್ನು ನೋಡಬಹುದು. ಇದು ದಾಸರ ಸೈದ್ಧಾಂತಿಕ ನೆಲೆಗಟ್ಟಿಗೂ ಅಭಿವ್ಯಕ್ತಿಯ ಸ್ವರೂಪಕ್ಕೂ ಇರುವ ಸಂಬಂಧವನ್ನು ಗ್ರಹಿಸಲು ನೆರವಾಗುತ್ತದೆ.

ಇಷ್ಟು ಹೇಳಿದ ಮೇಲೆ ದಾಸರ ಕೀರ್ತನೆಗಳ 'ವಿನಿಕೆ'ಯ ಕ್ರಮದ ಬಗ್ಗೆ ಒಂದು ಸಂಗತಿಯನ್ನು ಇಲ್ಲಿ ಪ್ರಸ್ತಾವಿಸಬೇಕು. ಇದು ಇನ್ನೊಂದು ರೀತಿಯಲ್ಲಿ ಕೀರ್ತನೆಗಳ ಜಾನಪದೀಯ ನೆಲೆಯೂ ಹೌದು. ಕೀರ್ತನೆಗಳು ಸಂದರ್ಭದ ಅಗತ್ಯಕ್ಕೆ ಅನುಗುಣವಾಗಿ ಆಯಾ ಕ್ಷಣಗಳಲ್ಲಿ ಸೃಷ್ಟಿಯಾಗುವಂಥವು ಅಥವಾ ಸಂಭವಿಸುವಂಥವು. ಹೀಗಾಗಿ ಅವು ನಿರ್ಮಾಣವಾಗುವಾಗಲೇ ನಿರ್ದಿಷ್ಟ ಮಟ್ಟುಗಳಲ್ಲಿ ಮೈದಾಳುತ್ತವೆ. ಹಾಡಿನೊಂದಿಗೆ ಕೂಡಿಕೊಂಡೇ ಹುಟ್ಟುವುದು ಅವುಗಳ ಪಾಡು. ಹೀಗಾಗಿ ನಾದದ ನೆಲೆಯಲ್ಲಿ ಬಾಹ್ಯವಾದ ರಾಗಸಂಯೋಜನೆಯ ಪ್ರಕ್ರಿಯೆಗೆ ಅವು ಹೊರತಾಗುತ್ತವೆ. ಅಲ್ಲದೆ ಸನ್ನಿವೇಶದ ಭಾವಕ್ಕೆ ಪೋಷಕವಾಗುವಷ್ಟೇ ನಾದಾಂಶವನ್ನು ಮಾತು–ಧಾತುಗಳ ಹಿತವಾದ ಸಮನ್ವಯದಲ್ಲಿ ಅವು ಒಳಗೊಂಡಿರುವುದರಿಂದ, ಯಾವುದೇ ರಾಗಛಾಯೆಗಳನ್ನು ವಿಸ್ತರಿಸಲು ಸಹಾಯಕವಾಗುವ ಲಕ್ಷ್ಯಗಳೂ ಅವುಗಳಲ್ಲ. ನಾದದ ನೆಲೆಯಲ್ಲಿ ಕೀರ್ತನೆಗಳ ಈ ಜಾನಪದೀಯ ಆಯಾಮವನ್ನು ಅರಿಯದಿರುವುದು ಹಲವು ಬಗೆಯ ಅತಿರೇಕಗಳಿಗೆ ಎಡೆಮಾಡಿಕೊಟ್ಟಿರುವುದನ್ನು ಸಮಕಾಲೀನ ಉದಾಹರಣೆಗಳಿಂದಲೇ ಅರಿಯಬಹುದಾಗಿದೆ. ಇಂದು ದಾಸರ ಹಾಡುಗಳು ಹಲವು ಅವತಾರಗಳಲ್ಲಿ ನಮ್ಮ ನಡುವೆ ಚಾಲ್ತಿಗೊಳ್ಳುತ್ತಿವೆ. ಇವುಗಳಲ್ಲಿ ಕೆಲವು 'ಶಾಸ್ತ್ರೀಯ'ವಾದ ವಿನಿಕೆಯ ಕ್ರಮಗಳೆಂದು ಕರೆಯಿಸಿಕೊಳ್ಳುವುದೂ ಉಂಟು. ಇಲ್ಲೆಲ್ಲ ಗಮನಿಸಬೇಕಾದ ಒಂದು ಸಂಗತಿಯೆಂದರೆ ದಾಸರ ಪದಗಳು ಹೆಚ್ಚಿನ ಸಂದರ್ಭಗಳಲ್ಲಿ ರಾಗಸಂಯೋಜನೆಯ (ಅಥವಾ 'ನಾದಸಂಯೋಜನೆ'?) ಪ್ರಕ್ರಿಯೆಗೆ ಒಳಗಾಗುತ್ತಿರುವುದು. ಎಂದರೆ ಈ ಸಂದರ್ಭಗಳಲ್ಲಿ ಸಾಹಿತ್ಯ ಪಠ್ಯಕ್ಕೂ ಹಾಡುಗಾರಿಕೆಗೂ ಏರ್ಪಡುತ್ತಿರುವುದು 'ಬಾಹ್ಯ' ಸಂಬಂಧವೇ ಹೊರತು ಹಾಡಿನ ಆಂತರ್ಯದಲ್ಲೇ ಇರುವ ವಿನಿಕೆಯ ಕ್ರಮಗಳು ನಿರ್ಲಕ್ಷ್ಯಕ್ಕೆ, ಕೆಲವೊಮ್ಮೆ ಉಪೇಕ್ಷೆಗೂ, ಒಳಗಾಗುತ್ತಿವೆ. ಆದರೆ ಕೀರ್ತನೆಗಳಲ್ಲಿ ಅಂತಸ್ಥವಾಗಿರುವುದು 'ಧಾಟಿ'ಗಳೇ ಹೊರತು ಅವು ರಾಗಲಕ್ಷಣಗಳನ್ನು ಪ್ರಕಟಿಸುವ ಉದ್ದೇಶದಿಂದ ರಚಿತವಾದದ್ದಲ್ಲ. ದಾಸರ ಪದಗಳು ಹಾಡಲೆಂದು ಹುಟ್ಟಿದ್ದು ಮಾತ್ರವಲ್ಲ, ಹಾಡಿಕೊಂಡೇ ಹುಟ್ಟಿದ್ದು ಕೂಡ. ಆಧುನಿಕ ಪದ್ಧತಿಯಲ್ಲಿ ಕೀರ್ತನೆಗಳನ್ನು ಅಚ್ಚು ಮಾಡುವಾಗ ರಾಗ–ತಾಳಗಳನ್ನು ಸೂಚಿಸುವ ಪದ್ಧತಿಯಿದೆ. ಇವು ಕೆಲವು ಬಾರಿ ಕೀರ್ತನೆಗಳನ್ನು ಪ್ರಕಟಿಸುತ್ತಿರುವವರು 'ಸಂಯೋಜಿಸಿರುವ' ರಾಗ–ತಾಳಗಳೂ ಆಗಿರುತ್ತವೆ. ಆದರೆ ಕೀರ್ತನೆಗಳ ಕೆಲವು ಪ್ರಾಚೀನ ಹಸ್ತಪ್ರತಿಗಳಲ್ಲಿ ಆಯಾ ಕೀರ್ತನೆಗೆ ಮೊದಲು ''ಅಂಜಿಕಿನ್ಯಾತಕಯ್ಯಾ' ಎಂಬಂತೆ'' ಎಂತಲೋ, '' 'ಮಾನವ ಜನ್ಮ ದೊಡ್ಡದು' ಎಂಬಂತೆ'' ಎಂತಲೋ ಉಲ್ಲೇಖಿಸಿರುವುದನ್ನು ಗಮನಿಸಬೇಕು. ಮೇಲ್ನೋಟಕ್ಕೆ ಇದು ಕೀರ್ತನೆಗಳು ಸ್ವೀಕರಣಗೊಳ್ಳುವ ನೆಲೆ ಎಂದು ತೋರಿದರೂ ವಾಸ್ತವದಲ್ಲಿ ಇವು ಅವುಗಳ ನಿರ್ಮಾಣದ ನೆಲೆಯೂ ಆಗಿದೆ. ಹೀಗಾಗಿ ಕೀರ್ತನೆಗಳ ನಿರ್ಮಾಣದ ಆಂತರ್ಯದಲ್ಲಿರುವುದು ಕೆಲವು ಮೂಲಭೂತವಾದ

ಧಾಟಿಗಳ ಮಾದರಿಗಳು. ನಿರ್ಮಾಣಗೊಳ್ಳುವ ಪ್ರತಿಯೊಂದು ಕೀರ್ತನೆಯೂ ಆ ಮಾದರಿಗಳ ಸಾಧ್ಯತೆಗಳನ್ನು ಹಲವು ಬಗೆಗಳಲ್ಲಿ ಅನಾವರಣಗೊಳಿಸುತ್ತ ಹೋಗುತ್ತದೆ. ಈ ಅರ್ಥದಲ್ಲಿ ಅವು ತ್ಯಾಗರಾಜರಂಥ ವಾಗ್ಗೇಯಕಾರರ ರಚನೆಗಳಂತೆ 'ಕೃತಿ'ಗಳಲ್ಲ. ಸಂಗೀತದ ಪರಿಭಾಷೆಯನ್ನು ಬಳಸುವುದಾದರೆ ಅವು 'ಮಾತುಪ್ರಧಾನ'ವಾದವೇ ಹೊರತು 'ಧಾತುಪ್ರಧಾನ'ವಾದುವಲ್ಲ. ಕೃತಿಗಳಂತೆ ಅವು ರಾಗಗಳ ಲಕ್ಷಣಗಳನ್ನು, ವಿನ್ಯಾಸಗಳನ್ನು ಪ್ರಕಟಿಸುವ ಉದ್ದೇಶವನ್ನು ಹೊಂದಿರುವುದಿಲ್ಲ. ಈ ದೃಷ್ಟಿಯಿಂದ ದಾಸರ ಕೀರ್ತನೆಗಳು ಜಾನಪದೀಯ ನೆಲೆಗೆ ಸೇರುತ್ತವೆ. ಆದರೆ ಇಂದು ದಾಸರ ರಚನೆಗಳು ಒಂದೆಡೆ 'ಸಂಯೋಜನೆ'ಗಳಿಗೆ ಒಳಗಾಗುತ್ತಿದ್ದರೆ ಇನ್ನೊಂದೆಡೆ ಅವನ್ನು ಕಚೇರಿಯ ವಿನಿಕೆಯ ಕ್ರಮಗಳಿಗೆ ಸಿಲುಕಿಸುವ ಪ್ರಯತ್ನಗಳೂ ನಡೆಯುತ್ತಿವೆ. ಇಲ್ಲಿ ರಾಗಾಲಾಪನೆ – ಪಲ್ಲವಿಯ ವಿಸ್ತರಣೆ – ನೆರವಲ್ ಮಾದರಿಯ ವಿನಿಕೆಗಳು ನಮಗೆ ಕಾಣಸಿಗುತ್ತವೆ. ದಾಸರನ್ನು ಈ ಬಗೆಯ 'ತ್ಯಾಗರಾಜ ಮಾದರಿ'ಯ ವಿನಿಕೆಯ ಕ್ರಮದಿಂದ ಹೊರತರಬೇಕಾದ ಅಗತ್ಯದ ಬಗೆಗೆ ಡಿ.ವಿ. ಗುಂಡಪ್ಪನವರು ಬಹಳ ಹಿಂದೆಯೇ ಪ್ರಸ್ತಾವಿಸಿದ್ದರು ಎನ್ನುವುದು ಗಮನಿಸಬೇಕಾದ ಸಂಗತಿ.* ಅಲ್ಲದೆ ವಾಗ್ಗೇಯಕಾರರ ಕೃತಿಗಳಲ್ಲಿ ಪಠ್ಯದ ಶಾಬ್ದಿಕ ಲಯಕ್ಕಿಂತ ಭಿನ್ನವಾದ ಲಯವೊಂದು ವಿನಿಕೆಯ ಸಂದರ್ಭದಲ್ಲಿ ನಿರ್ಮಾಣವಾಗುತ್ತಿರುತ್ತದೆ. ಆದರೆ ದಾಸರ ಹಾಡುಗಳಲ್ಲಿ ಪಠ್ಯದಲ್ಲಿ ಅಂತಸ್ಥವಾಗಿರುವ ಶಾಬ್ದಿಕ ಲಯವೇ ಅದರ ವಿನಿಕೆಯ ಲಯವೂ ಆಗಿರುತ್ತದೆ. ಈ ವಾಸ್ತವವನ್ನು ಗಮನಿಸದೆ ಕೆಲವೊಮ್ಮೆ ಕಛೇರಿಯ ವಿನಿಕೆಗಳು ಪಠ್ಯದ ಆಂತರಿಕ ಲಯವನ್ನು ಮುರಿಯುವ, ಶಬ್ದಗಳನ್ನು ಹಿಗ್ಗಾಮುಗ್ಗಾ ಜಗ್ಗಾಡುವ ತಂತ್ರಗಳಲ್ಲಿ ತೊಡಗುವುದೂ ಉಂಟು. ಇವುಗಳಿಂದ ಪಾರಾಗಬೇಕಾದ ಎಚ್ಚರ ನಮ್ಮ ಇಂದಿನ ಅಗತ್ಯವಾಗಿದೆ.

ಒಂದು ದೃಷ್ಟಿಯಿಂದ ನೋಡಿದರೆ, ಕೀರ್ತನಪ್ರಕಾರದ ಅನನ್ಯತೆಯನ್ನು ಗುರುತಿಸುವಲ್ಲಿ ನಮ್ಮ ಸಾಹಿತ್ಯ ಪರಂಪರೆಯ ಅನುಸಂಧಾನದ ಕ್ರಮವೇ ಮರುಪರಿಶೀಲನೆಗೆ ಒಳಗಾಗಬೇಕಾದ ಅಗತ್ಯವಿರುವಂತೆ ತೋರುತ್ತದೆ. ಏಕೆಂದರೆ ಅರ್ಥಕೇಂದ್ರಿತವಾದ ಸಾಹಿತ್ಯಸೃಷ್ಟಿಯೊಂದಿಗಿನ ಒಡನಾಟದ ಭಾರ ನಮ್ಮ ಮೇಲೆ ಎಷ್ಟಿದೆಯೆಂದರೆ ಲಯ ಕೇಂದ್ರಿತವೋ ನಾದಕೇಂದ್ರಿತವೋ ಆಗಿರುವ ಸಾಹಿತ್ಯಸೃಷ್ಟಿ ನಮ್ಮ ಗಮನವನ್ನು ತಮ್ಮೆಡೆಗೆ ಸೆಳೆದುಕೊಳ್ಳುತ್ತಿಲ್ಲ. ಹೀಗಾಗಿ ಏಕರೂಪಿಯಾದ ಅನುಸಂಧಾನಕ್ರಮಗಳ ಮೂಲಕ ಏಕರೂಪಿಯಾದ ಪಠ್ಯದ ನೆಲೆಗಳನ್ನು ನಾವು ರಚಿಸಿಕೊಂಡು ಬರುತ್ತಿರುವಂತೆ ತೋರುತ್ತಿದೆ. ಈ ಹಿನ್ನೆಲೆಯಲ್ಲಿ ಕೀರ್ತನ ಸಾಹಿತ್ಯದ ಅನನ್ಯತೆಯನ್ನು ಅದರ ನಾದದ ಸಾಧ್ಯತೆಗಳನ್ನು ಗಮನದಲ್ಲಿರಿಸಿಕೊಂಡು ಗುರುತಿಸಲು ಪ್ರಯತ್ನಿಸಿರುವುದು ಈ ಬರಹದ ಮುಖ್ಯ ಉದ್ದೇಶವಾಗಿದೆ. ❇

* ನೋಡಿ: 'Purandara'. **Bhavan's Journal**, August 1965, p. 202-11


ಮುತ್ತುಸ್ವಾಮಿ ದೀಕ್ಷಿತರು


ತ್ಯಾಗರಾಜರು


ಶ್ಯಾಮಾಶಾಸ್ತ್ರಿಗಳು

# ಕರ್ನಾಟಕ ಸಂಗೀತ ತ್ರಿಮೂರ್ತಿಗಳ ಕೃತಿಗಳಲ್ಲಿ 'ಭಕ್ತಿ ಮತ್ತು ಅಧ್ಯಾತ್ಮ'

**ಪ್ರೊ. ಡಾ. ಸಿ.ಎ. ಶ್ರೀಧರ್**

ಕರ್ನಾಟಕ ಸಂಗೀತ ಪರಂಪರೆಯಲ್ಲಿ 'ತ್ರಿಮೂರ್ತಿ'ಗಳೆಂದೇ ಪ್ರಸಿದ್ಧರಾದ ಮೂರು ಮಂದಿ ವಾಗ್ಗೇಯಕಾರರು ಸಂಗೀತವನ್ನು ಅದರ ಉತ್ತುಂಗ ಶಿಖರಕ್ಕೇರಿಸಿದರು; ಸಂಗೀತಕ್ಕೂ ಆಧ್ಯಾತ್ಮಿಕತೆಗೂ ಇರುವ ಅನನ್ಯ ಸಂಬಂಧವನ್ನು ಇನ್ನಷ್ಟು ಬಲಪಡಿಸಿದರು. ಈ ಕುರಿತು ಇಲ್ಲಿ ವಿವರಿಸಿರುವ ಲೇಖಕರು ಪ್ರಸಿದ್ಧ ಗಾಯಕರೂ, ವೇಣುವಾದಕರೂ, ಸಂಗೀತ ಶಾಸ್ತ್ರಜ್ಞರೂ ಆಗಿದ್ದಾರೆ. ಸಂಗೀತವನ್ನು ಕುರಿತ ಸಂಶೋಧನೆಯಲ್ಲೂ ತಮ್ಮನ್ನು ತೊಡಗಿಸಿಕೊಂಡಿರುವ ಅವರು ಪ್ರಸ್ತುತ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಂಗೀತ ಪ್ರಾಧ್ಯಾಪಕರಾಗಿದ್ದಾರೆ.

ಭಾರತೀಯ ಸನಾತನ ಧರ್ಮ ಸಂಸ್ಕೃತಿಯಲ್ಲಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಸಿದ್ಧಿಗಾಗಿ ಹಲವು ಮಾರ್ಗಗಳಿವೆ. ಕಲಿಯುಗದಲ್ಲಿ ನಾಮಸಂಕೀರ್ತನೆ ಮತ್ತು ಭಕ್ತಿಮಾರ್ಗದ ಮೂಲಕ ಮೋಕ್ಷಸಾಧನೆ ಸುಲಭ ಸಾಧ್ಯವೆಂಬುದು ಜ್ಞಾನಿಗಳ ಮತ.

ಶಾಂಡಿಲ್ಯ ಮಹರ್ಷಿಗಳು ಹೇಳುವಂತೆ 'ಸಾ ಪರಾನುರಕ್ತಿರೀಶ್ವರೇ' ಎಂದರೆ ಈಶ್ವರನಲ್ಲಿ ಪರಮ ಅನುರಾಗ ಅರ್ಥಾತ್ ಪರಮಪ್ರೇಮವೇ ಭಕ್ತಿ. ದೇವರ್ಷಿ ನಾರದರು ತಮ್ಮ ಭಕ್ತಿ ಸೂತ್ರದಲ್ಲಿ 'ಸಾ ತ್ವಸ್ಮಿನ್ ಪರಮ ಪ್ರೇಮರೂಪಾ' ಎಂದಿದ್ದಾರೆ. ಇದರರ್ಥ ಆ ಪರಮೇಶ್ವರನಲ್ಲಿ ಅತಿಶಯ ಪ್ರೇಮರೂಪವೇ ಭಕ್ತಿ. 'ಅಮೃತ ಸ್ವರೂಪಾ ಚ' ಎಂದರೆ, ಅದು ಅಮೃತ ಸ್ವರೂಪ. ಈ ವಿಶಿಷ್ಟ ಭಕ್ತಿಮಾರ್ಗದಲ್ಲಿ ಪ್ರಾಚೀನ ಕಾಲದಿಂದಲೂ ಹಲವಾರು ಪುಣ್ಯಾತ್ಮರುಗಳು ಸಾಗಿಬಂದು ಜೀವನವನ್ನು ಸಾರ್ಥಕಪಡಿಸಿಕೊಂಡಿದ್ದಾರೆ. ಶ್ರೀಮದ್ಭಾಗವತದಲ್ಲಿ ಶ್ರೀ ಪ್ರಹ್ಲಾದರು ಹೇಳಿರುವಂತೆ,

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಮ್ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥

— ಎಂಬುದಾಗಿ ಭಕ್ತಿಯು ಒಂಬತ್ತು ಪ್ರಕಾರದಲ್ಲಿದೆ. ಭಕ್ತಿಯೋಗದ ಹಿರಿಮೆಯಿಂದ ಭಗವಂತನನ್ನು ಸುಲಭವಾಗಿ ಒಲಿಸಿಕೊಳ್ಳಲು ಸಾಧ್ಯ. 'ಯೋಗ' ಎಂದರೆ ಭಗವಂತನಲ್ಲಿ ಸೇರುವುದು ಎಂಬುದಾಗಿ ಅರ್ಥ. ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಜಯಿಸಿ, ಅಹಂಭಾವದಿಂದ ಮುಕ್ತನಾಗಿ ಸರ್ವಶಕ್ತ ಭಗವಂತನಲ್ಲಿ ಸಂಪೂರ್ಣವಾಗಿ ಶರಣಾಗತಿ ಹೊಂದುವವನೇ ನಿಜಭಕ್ತ. 'ಅಧ್ಯಾತ್ಮ ರಾಮಾಯಣ'ದಲ್ಲಿ ಹೇಳಿರುವಂತೆ 'ಭಕ್ತಿಯೇ ಮುಕ್ತಿಗೆ ಸಾಧನ'. ಸಂಗೀತ ಲಾಕ್ಷಣಿಕ ಶಾರ್ಙ್ಗದೇವ ಸಂಗೀತದ ವಿಶೇಷತೆ ಬಗ್ಗೆ ತಿಳಿಸುತ್ತಾ, 'ಧರ್ಮಾರ್ಥಕಾಮಮೋಕ್ಷಾಣಾಮಿದಮೇವೈಕ ಸಾಧನಂ'

ಎಂದಿದ್ದಾನೆ. ಅರ್ಥಾತ್ ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆ ಸಂಗೀತವೇ ಮುಖ್ಯಸಾಧನ. 'ಶಿವಸರ್ವಸ್ವ' ದಲ್ಲಿಯೂ ಇದೇ ಅಭಿಪ್ರಾಯವಿದೆ. 'ಏಕಂ ಸಂಗೀತ ವಿಜ್ಞಾನಂ ಚತುರ್ವರ್ಗ ಫಲಪ್ರದಂ.' ಒಟ್ಟಿನಲ್ಲಿ ಮೋಕ್ಷಪ್ರಾಪ್ತಿಯಲ್ಲಿ ಸಂಗೀತ ವಿದ್ಯೆ ಮಹಿಮಾತಿಶಯವುಳ್ಳದ್ದು.

ನಾದೋಪಾಸನಯಾ ದೇವಂ ಬ್ರಹ್ಮವಿಷ್ಣುಮಹೇಶ್ವರಾಃ।
ಭವಂತ್ಯುಪಾಸಿತಾ ನೂನಂ ಯಸ್ಮಾದೇತೇ ತದಾತ್ಮಕಾಃ ॥

ಎಂದರೆ, ನಾದಬ್ರಹ್ಮಸ್ವರೂಪರಾದ ಬ್ರಹ್ಮ, ವಿಷ್ಣು, ಮಹೇಶ್ವರರು ನಾದೋಪಾಸನೆಯಿಂದ ನಿಶ್ಚಯವಾಗಿ ಉಪಾಸನೆಗೊಳ್ಳುತ್ತಾರೆ. **ಪದ್ಮಪುರಾಣ**ದಲ್ಲಿ ಭಗವಂತನು ನಾರದನಿಗೆ ಹೇಳಿರುವಂತೆ,

ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ ।
ಮದ್ಭಕ್ತಾಃ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥

ಎಂದರೆ ಭಗವಂತನ ವಾಸಸ್ಥಾನ ವೈಕುಂಠದಲ್ಲಾಗಲೀ, ಯೋಗಿಗಳ ಹೃದಯದಲ್ಲಾಗಲೀ ಇಲ್ಲ. ಎಲ್ಲಿ ತನ್ನ ಭಕ್ತರು ಹಾಡುತ್ತಾರೋ, ಅಲ್ಲಿ ತಾನು ವಾಸಿಸುವುದಾಗಿ ನಾರದನಿಗೆ ಸಾಕ್ಷಾತ್ ಭಗವಂತನೇ ತಿಳಿಸಿದ್ದಾನೆ. **ವಿಷ್ಣುಪುರಾಣ** ರೀತ್ಯಾ ಸಂಗೀತವು ಭಗವದಂಶ. **ಯಾಜ್ಞವಲ್ಕ್ಯ ಸ್ಮೃತಿ**ಯಲ್ಲಿ ಹೇಳಿರುವಂತೆ,

ವೀಣಾವಾದನ-ತತ್ವಜ್ಞಃ ಶ್ರುತಿ- ಜಾತಿ-ವಿಶಾರದಃ ।
ತಾಳಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂ ಸ ಗಚ್ಛತಿ ॥

ಇದರಂತೆ, ವೀಣಾವಾದನ ತತ್ತ್ವ ಬಲ್ಲವನೂ, ಶ್ರುತಿ ಜಾತಿ ವಿವೇಚನೆಗಳನ್ನು ತಿಳಿದವನೂ, ತಾಳವನ್ನು ತಿಳಿದಾತನು ಯಾರೋ ಅವನು ಪ್ರಯಾಸವಿಲ್ಲದೆ ಮೋಕ್ಷವನ್ನು ಹೊಂದುತ್ತಾನೆ.

ಭಕ್ತಿಸಹಿತ ಸಂಗೀತವೇ ನಾದಯೋಗ. ಪರಮಾತ್ಮನ ಸಾಕ್ಷಾತ್ಕಾರ ಹೊಂದಲು ಇದು ಸುಲಭಮಾರ್ಗ. ಈ ಶ್ರೇಯೋಮಾರ್ಗದಲ್ಲಿ ಸಾಗಿಬಂದು ಮುಕ್ತಿಯನ್ನು ಸಾಧಿಸಿದ ನಾದಯೋಗಿಗಳ ಭವ್ಯ ಪರಂಪರೆಯೇ ಉಂಟು. ಕೆಲವು ಮಹಾನುಭಾವರನ್ನು ಉಲ್ಲೇಖಿಸುವುದಾದರೆ: ನಾರದ, ತುಂಬುರು, ಆಂಜನೇಯ, ಪ್ರಹ್ಲಾದ, ಭರತ, ಮತಂಗ, ತಮಿಳುನಾಡಿನ ತೇವಾರಂ ರಚನಕಾರರು, ದಿವ್ಯಪ್ರಬಂಧ ರಚನಕಾರರು, ಕರ್ನಾಟಕದ ಕೆಲವು ಶಿವಶರಣರು, ಹರಿದಾಸರು, ಅನ್ನಮಾಚಾರ್ಯರು, ತುಕಾರಾಂ, ಮೀರಾಬಾಯಿ, ಚೈತನ್ಯಪ್ರಭು, ಕಬೀರದಾಸರು, ತುಲಸೀದಾಸರು, ಶ್ರೀರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಶಾರದಾಮಾತೆ ಹಾಗೂ ಕರ್ನಾಟಕ ಸಂಗೀತ ತ್ರಿಮೂರ್ತಿಗಳೆನಿಸಿದ ಶ್ರೀತ್ಯಾಗರಾಜರು, ಶ್ರೀಮುತ್ತುಸ್ವಾಮಿ ದೀಕ್ಷಿತರು ಮತ್ತು ಶ್ಯಾಮಾಶಾಸ್ತ್ರಿಗಳು.

ಪ್ರಕೃತ ಲೇಖನದಲ್ಲಿ ಕರ್ನಾಟಕ ಸಂಗೀತ ತ್ರಿಮೂರ್ತಿಗಳ ರಚನೆಗಳಲ್ಲಿ ಭಕ್ತಿ ಮತ್ತು ಅಧ್ಯಾತ್ಮ ಅಂಶಗಳನ್ನು ಪರಿಚಯಿಸಲಾಗಿದೆ. ಸಂತ ವಾಗ್ಗೇಯಕಾರರ ಪಂಕ್ತಿಯಲ್ಲಿರುವ ಈ ಮಹಾನುಭಾವರು ಭಾರತೀಯ ಸಾಂಸ್ಕೃತಿಕ ಮೌಲ್ಯ, ತತ್ತ್ವದರ್ಶನಗಳನ್ನು ಮಹೋನ್ನತವಾಗಿ ಬೆಳಗಿದರು. ಇವರುಗಳು ತಮ್ಮ ಅಪರಿಮಿತ ವ್ಯುತ್ಪತ್ತಿ, ಪ್ರತಿಭಾವಿಶೇಷಗಳಿಂದ ಸಹಸ್ರಾರು ಸಂಗೀತ ಕೃತಿಗಳನ್ನು ರಚಿಸಿ, ಭಕ್ತಿ ಪಾರಮ್ಯವನ್ನು ಎತ್ತಿ ಹಿಡಿದು ಅಧ್ಯಾತ್ಮ ಸಾಧನೆ ಸಿದ್ಧಿಪಡೆದು, ಜನಸಾಮಾನ್ಯರ ಜೀವನ ಸಾರ್ಥಕತೆಗಾಗಿ ತಮ್ಮ ಜೀವನವನ್ನೇ ಮೀಸಲಿರಿಸಿದ ಪುಣ್ಯಾತ್ಮರು.

ಸದ್ಗುರು ಶ್ರೀ ತ್ಯಾಗರಾಜರ ಕೃತಿಗಳು ಸುಮಾರು ೨೪,೦೦೦. ಇವುಗಳು 'ತ್ಯಾಗರಾಜೋಪನಿಷತ್' ಎಂಬುದಾಗಿ ಪ್ರಸಿದ್ಧವಾಗಿವೆ. ಶ್ರೀ ತ್ಯಾಗರಾಜರ ಸಂಗೀತ ವಿಶೇಷವಾಗಿ 'ಭಕ್ತಿಸಂಗೀತ.' ಇವರ ಸಹಸ್ರಾರು ಸಂಗೀತ ಕೃತಿಗಳಲ್ಲಿ ಭಕ್ತಿ, ನವವಿಧ ಭಕ್ತಿ ರಸಗಳು ಪ್ರವಹಿಸಿದೆ. ಭಗವಂತನಲ್ಲಿ ಸದ್ಭಕ್ತಿಯಿರಬೇಕು. ಅವನ ಅನುಗ್ರಹವಿಲ್ಲದಿದ್ದರೆ ಯಾವುದೇ ಸತ್ಕಾರ್ಯಗಳು, ತಪಸ್ಸು ಮತ್ತು ಸಾಧನೆಗಳೆಲ್ಲವೂ ವ್ಯರ್ಥ ಎಂಬುದಾಗಿ 'ಏಮಿ ಚೇಸಿತೇನೇಮಿ' ಎಂಬ ತೋಡಿ ರಾಗದ ಕೃತಿಯಲ್ಲಿ ಹಾಡಿದ್ದಾರೆ. ಧನ್ಯಾಸಿ ರಾಗದ 'ಸಂಗೀತ ಜ್ಞಾನಮು ಭಕ್ತಿ ವಿನಾ' ಎಂಬ ಕೃತಿಯಲ್ಲಿ ಭಕ್ತಿರಹಿತ ಸಂಗೀತಜ್ಞಾನವು ವ್ಯರ್ಥ ಎಂಬುದಾಗಿ ಹೇಳಿ 'ಸಂಗೀತ-ಭಕ್ತಿ'ಗಳ ಸುಂದರ ಸಮೀಕರಣವನ್ನು ನೀಡಿದ್ದಾರೆ. ಶ್ರೀ ತ್ಯಾಗರಾಜರು ತಿರುಪತಿಗೆ ಯಾತ್ರೆ ಹೋಗಿದ್ದಾಗ, ಗರ್ಭಗುಡಿಯ ಬಳಿಗೆ ಬಂದಾಗ ಶ್ರೀವೆಂಕಟೇಶ್ವರನ ಪರದೆ ಮುಚ್ಚಿಕೊಂಡಿದ್ದಿತು. ತಕ್ಷಣ ಶ್ರೀ ತ್ಯಾಗರಾಜರು 'ಗೌಳಿಪಂತು' ರಾಗದಲ್ಲಿ 'ತೆರೆತಿಯ್ಯಗರಾದಾ' ಎಂಬ ಕೃತಿಯನ್ನು ರಚಿಸಿ ಭಕ್ತಿಯಿಂದ ತನ್ಮಯರಾಗಿ ಹಾಡಿದರು. ತಕ್ಷಣ ಹಾಕಿದ್ದ ಪರದೆ ಕೆಳಕ್ಕೆ ಬಿದ್ದು, ಶ್ರೀತ್ಯಾಗರಾಜರಿಗೆ ವೆಂಕಟೇಶ್ವರನ ದರ್ಶನವಾಯಿತು. ಆನಂದ ಪರವಶರಾದ ಶ್ರೀ ತ್ಯಾಗರಾಜರು ಮಧ್ಯಮಾವತಿ ರಾಗದಲ್ಲಿ 'ವೆಂಕಟೇಶ ನೀ' ಎಂಬ ಕೃತಿ ರಚಿಸಿ ಹಾಡಿದರು. ಇದು ಭಕ್ತಿಯ ಪವಾಡವಲ್ಲದೆ ಮತ್ತೇನು! ತೋಡಿ ರಾಗದಲ್ಲಿರುವ 'ದಾಶರಥೇ ನೀ ಋಣಮು' ಎಂಬ ಕೃತಿಯಲ್ಲಿ 'ಮುಕ್ತಿ'ಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ನಾದ, ನಾದಬ್ರಹ್ಮ, ನಾದಯೋಗ, ನಾದೋಪಾಸನೆ, ಪರಮಾತ್ಮನ ಲೀಲೆಗಳಿಗೆ ಸಂಬಂಧಿಸಿದಂತೆ ನೂರಾರು ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ಶ್ರೀರಾಮನೇ ಆರಾಧ್ಯದೈವ ಮತ್ತು ಪರಬ್ರಹ್ಮ. ಕೆಲವು ಕೃತಿಗಳನ್ನು ಉಲ್ಲೇಖಿಸುವುದಾದರೆ,

| ರಾಗ | ತಾಳ | ಕೃತಿ |
|---|---|---|
| ಬೇಗಡೆ | ಆದಿತಾಳ | ನಾದೋಪಾಸನ |
| ಕಲ್ಯಾಣವಸಂತ | ರೂಪಕತಾಳ | ನಾದಲೋಲುಡೈ |
| ವಾಗಧೀಶ್ವರಿ | ಆದಿತಾಳ | ಪರಮಾತ್ಮುಡು |
| ಹಿಂದೋಳ | ಆದಿತಾಳ | ಸಾಮಜವರಗಮನ |
| ಪೂರ್ಣಚಂದ್ರಿಕೆ | ಆದಿತಾಳ | ತೆಲಿಸಿ ರಾಮಚಂದ್ರ |
| ದೇವಗಾಂಧಾರಿ | ಆದಿತಾಳ | ತವಲೋನೆ ಧ್ಯಾನಿಂಚೆ |
| ಕಾನಡ | ಆದಿತಾಳ | ಸುಖಿ ಎವ್ವರೋ |

ಇವರು ತಮ್ಮ ಕೃತಿಗಳು ಮಾನವನ ಮೋಕ್ಷಕ್ಕಾಗಿ ರಚಿಸಲ್ಪಟ್ಟವೆಂದು 'ರಾಗರತ್ನ ಮಾಲಿಕ ಚೇ' ಕೃತಿಯಲ್ಲಿ ತಿಳಿಸಿದ್ದಾರೆ; ಅಧ್ಯಾತ್ಮ ಸಾಧನೆಯಲ್ಲಿ ಭಕ್ತಿಯ ಪಾತ್ರವನ್ನು ಶ್ರೀ ತ್ಯಾಗರಾಜರು ತಮ್ಮ ಗೇಯನಾಟಕಗಳಾದ 'ಪ್ರಹ್ಲಾದ ಭಕ್ತಿವಿಜಯ' ಮತ್ತು 'ನೌಕಾಚರಿತ್ರೆ'ಯಲ್ಲಿ ವಿವರಿಸಿದ್ದಾರೆ. 'ಪ್ರಹ್ಲಾದ ಭಕ್ತಿ ವಿಜಯ'ದಲ್ಲಿ ಜ್ಞಾನ, ವೈರಾಗ್ಯ, ವಿಜ್ಞಾನ ಮತ್ತು ಸದ್ಭಕ್ತಿಗಳ ಪ್ರಾಮುಖ್ಯತೆಯನ್ನು ಸಾರಿದ್ದಾರೆ. 'ರಾಗ ತಾಳಾದಿಯುತ ಗಾನ ರಸಮು ಚೇತ' ಎಂಬುದಾಗಿ ಹೇಳಿ ಭಗವಂತನ ಸಾಕ್ಷಾತ್ಕಾರದ ವಿಷಯದಲ್ಲಿ ಸದ್ಭಕ್ತಿಯೊಡಗೂಡಿದ ಗಾನರಸದ ಪ್ರಯೋಜನದ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಭಕ್ತಪ್ರಹ್ಲಾದನ ಪಾತ್ರದಲ್ಲಿ ಶ್ರೀ ತ್ಯಾಗರಾಜರೇ ಪರಕಾಯ ಪ್ರವೇಶ ಮಾಡಿ, ಭಕ್ತಿಪಾರಮ್ಯವನ್ನು ಕೊಂಡಾಡಿದ್ದಾರೆ. ಲೌಕಿಕದ ಎಲ್ಲಾ ಆಮಿಷಗಳನ್ನು ಹೊರಗಿಟ್ಟು ಅನವರತ ಶ್ರೀಹರಿಯ ಸಾನ್ನಿಧ್ಯ, ಪರಮಭಕ್ತಿ, ಅವನ ದರ್ಶನಾನಂದದ ವರವನ್ನು ಕೇಳಿದ ಪ್ರಹ್ಲಾದನ ಪಾತ್ರದಲ್ಲಿ ಶ್ರೀತ್ಯಾಗರಾಜರ ಜೀವನ ಮಾರ್ಗವನ್ನು ಕಾಣಬಹುದಾಗಿದೆ.

'ನೌಕಾಚರಿತ್ರೆ' ಗೇಯನಾಟಕ ಮೇಲ್ನೋಟಕ್ಕೆ 'ಮಧುರ ಭಕ್ತಿ'ಯಿಂದ ಕೂಡಿದ್ದರೂ ಶರಣಾಗತಿ ತತ್ತ್ವ, ಆತ್ಮನಿವೇದನ ಭಕ್ತಿಯೇ ಇಲ್ಲಿ ಪ್ರವಹಿಸಿದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನೇ ಹೇಳಿರುವಂತೆ, ''ಮನಸ್ಸು ಬುದ್ಧಿಗಳನ್ನು ಭಗವಂತನಲ್ಲಿ ಅರ್ಪಿಸಿ ನಿರಂತರವೂ ಅವನನ್ನೇ (ಶ್ರೀಕೃಷ್ಣಪರಮಾತ್ಮ) ಸ್ಮರಿಸುತ್ತಿರುವವರು ನಿಸ್ಸಂಶಯವಾಗಿ ಅವನನ್ನೇ ಹೊಂದುತ್ತಾರೆ.'' ಇದೇ ತತ್ತ್ವ ಸಂದೇಶಗಳು ಈ ಗೇಯನಾಟಕದಲ್ಲಿ ಪ್ರತಿಫಲಿತವಾಗಿವೆ. ಇಲ್ಲಿ ನಾಯಕ-ನಾಯಿಕಾ ಭಾವವಿದೆ; ಆತ್ಮ-ಪರಮಾತ್ಮ ಸಮೀಕರಣವಿದೆ. ಅಧ್ಯಾತ್ಮ ಸಿದ್ಧಿ ಪಡೆದಿದ್ದ ಶ್ರೀತ್ಯಾಗರಾಜರು ೯೬ ಕೋಟಿ ಬಾರಿ ಶ್ರೀರಾಮನಾಮವನ್ನು ಜಪಿಸಿ, ಶ್ರೀರಾಮನ ದರ್ಶನಭಾಗ್ಯವನ್ನು ಹೊಂದಿ, ಕಡೆಯಲ್ಲಿ ತಮ್ಮ ಅಂತ್ಯಕಾಲವನ್ನು ಮೊದಲೇ ತಿಳಿದು ಶ್ರೀಪರಮಹಂಸ ಬ್ರಹ್ಮಾನಂದೇಂದ್ರ ಸ್ವಾಮಿಗಳವರಿಂದ ಸಂನ್ಯಾಸ ದೀಕ್ಷೆಯನ್ನು ಪಡೆದು 'ನಾದಬ್ರಹ್ಮಾನಂದ' ಎಂಬ ನಾಮಧೇಯವನ್ನು ಹೊಂದಿ ಮಾರನೆಯ ದಿವಸ ಎಂದರೆ ಪುಷ್ಯ ಬಹುಳ ಪಂಚಮಿಯಂದು ಪದ್ಮಾಸನದಲ್ಲಿ ಕುಳಿತು ಯೋಗಮುದ್ರೆಯಲ್ಲಿ ಯೋಗಸಮಾಧಿಗೆ ತೆರಳಿ ನಾದಬ್ರಹ್ಮನಲ್ಲಿ ಐಕ್ಯರಾದರು.

ಶ್ರೀ ಮುತ್ತುಸ್ವಾಮಿ ದೀಕ್ಷಿತರು ಆಧ್ಯಾತ್ಮಿಕ ಭಕ್ತಿ ಸಂಗೀತದ ಸಿದ್ಧ ಪುರುಷರು. ಇವರು ಸ್ವತಃ ಅದ್ವೈತ ವೇದಾಂತಿಗಳಾಗಿದ್ದರು. ಅದ್ವೈತ ತತ್ತ್ವ ಪ್ರತಿಪಾದನೆ ಇವರ ಸಂಗಿತ ಕೃತಿಗಳಲ್ಲಿ ಪ್ರಧಾನವಾಗಿ ಗೋಚರಿಸುತ್ತದೆ. 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ', 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ' ಎಂಬಿತ್ಯಾದಿ ಮಹಾವಾಕ್ಯ ಪ್ರಮೇಯಾದಿಗಳು, ಅವುಗಳ ವ್ಯಾಖ್ಯಾನದಲ್ಲಿ ನ್ಯಾಯಶಾಸ್ತ್ರದ 'ಜಹದಜಹಲ್ಲಕ್ಷಣ'ವನ್ನು ಅನ್ವಯ ಮಾಡಿಕೊಂಡಿದ್ದಾರೆ. ಸಾಧಕನು ಆತ್ಮಸಾಕ್ಷಾತ್ಕಾರವನ್ನು ಹೊಂದಬೇಕಾದರೆ, ಮಾಯೆಯನ್ನು ವಿವೇಕದಿಂದ ಜಯಿಸಬೇಕೆಂದು ಬೋಧಿಸಿದ್ದಾರೆ. ತರಂಗಿಣೀ ರಾಗದಲ್ಲಿರುವ ಆದಿತಾಳದಲ್ಲಿ ನಿಬದ್ಧವಾದ 'ಮಾಯೆ' ಎಂಬ ಕೃತಿಯಲ್ಲಿ 'ಎಲೈ ಮಾಯೆಯೇ, ನಮ್ಮನ್ನು ತ್ಯಜಿಸು, ನನಗೆ ತೊಂದರೆ ನೀಡಲು ನೀನಾರು?' ಎಂಬುದಾಗಿ ಪ್ರಶ್ನಿಸಿರುವ ದೀಕ್ಷಿತರು ನಿಜವಾದ ಅರ್ಥದಲ್ಲಿ ನಾದೋಪಾಸಕರು ಹಾಗೂ ಬ್ರಹ್ಮಜ್ಞಾನಿಗಳು. ಶಂಕರಾಭರಣ ರಾಗದಲ್ಲಿರುವ 'ಶ್ರೀ ದಕ್ಷಿಣಾಮೂರ್ತೇ' ಎಂಬ ಕೃತಿಯಲ್ಲಿ ಸಾಧಕನಿಗೆ ಅನುಭವವೇದ್ಯವಾಗುವ 'ದಕ್ಷಿಣಾಮೂರ್ತಿ' ತತ್ತ್ವವನ್ನು ಕುರಿತು ಬೆಳಕು ಚೆಲ್ಲಿದ್ದಾರೆ. ಪರಬ್ರಹ್ಮ ವಸ್ತುವಿನ ಬಗ್ಗೆ ಜಿಜ್ಞಾಸೆ ನಡೆಸಿದ್ದಾರೆ. ದೇವಿಯನ್ನು ನಾದಸ್ವರೂಪಳೆಂದು 'ವಂಶವತೀ ಶಿವಯುವತೀ' ಎಂಬ ಕೃತಿಯಲ್ಲಿ ಭಕ್ತಿಯಿಂದ ವರ್ಣಿಸಿರುತ್ತಾರೆ. ಸ್ವರಗಳಲ್ಲಿ ಮತ್ತು ೨೨ ಶ್ರುತಿಗಳಲ್ಲಿ ದೇವಿಯ ಸ್ವರೂಪವನ್ನು ವರ್ಣಿಸಿದ್ದಾರೆ.

ಭಕ್ತಿಸಹಿತ ಅಧ್ಯಾತ್ಮ ತತ್ತ್ವವನ್ನು ಪ್ರತಿಪಾದಿಸಿರುವ ಇವರ ನೂರಾರು ಕೃತಿಗಳಿವೆ. ಅವುಗಳ ಪೈಕಿ ಕೆಲವನ್ನು ಉಲ್ಲೇಖಿಸುವುದಾದರೆ, ಶ್ರೀರಾಗ, ಆದಿತಾಳದಲ್ಲಿ ರಚಿತವಾಗಿರುವ 'ಶ್ರೀ ಮೂಲಾಧಾರ', ಆನಂದಭೈರವೀ ರಾಗ, ರೂಪಕತಾಳದಲ್ಲಿ ನಿಬದ್ಧವಾಗಿರುವ ಕೃತಿ 'ಮಾನಸ ಗುರುಗುಹ', ಶಂಕರಾಭರಣ ರಾಗ ರೂಪಕ ತಾಳದಲ್ಲಿ ರಚಿತವಾಗಿರುವ 'ಶ್ರೀ ಮೂಕಾಂಬಿಕಯಾ', ಆನಂದ ಭೈರವೀ ರಾಗ ತ್ರಿಪುಟತಾಳದಲ್ಲಿ ನಿಬದ್ಧವಾಗಿರುವ 'ಆನಂದೇಶ್ವರೇಣ', ವೇಗವಾಹಿನೀ ರಾಗ ಝಂಪೆ ತಾಳದಲ್ಲಿ ರಚಿತವಾಗಿರುವ 'ವೀಣಾಪುಸ್ತಕಧಾರಿಣೀಂ', ಆನಂದಭೈರವೀ ರಾಗ ರೂಪಕತಾಳದಲ್ಲಿ ರಚಿತವಾಗಿರುವ 'ತ್ಯಾಗರಾಜಯೋಗ ವೈಭವಂ'.

ಶ್ರೀ ಮುತ್ತುಸ್ವಾಮಿ ದೀಕ್ಷಿತರ ಸಂಗೀತ ಕೃತಿಗಳಲ್ಲಿನ ವಾಕ್ ಮತ್ತು ಗೇಯಾಂಶಗಳು, ಪಾರ್ವತೀ ಪರಮೇಶ್ವರ ತತ್ತ್ವಗಳಂತೆ ಅವಿನಾಭಾವವಾಗಿ ಸಮೀಕರಿಸಲ್ಪಟ್ಟು ಭಕ್ತಿಗಾನದ ದ್ವಾರಾ ಅಧ್ಯಾತ್ಮಾನುಭವಕ್ಕೆ ದಾರಿಮಾಡಿಕೊಟ್ಟಿವೆ.

ಎಲ್ಲಾ ದೈವಗಳೂ ಒಂದೇ, ಜಗನ್ನಿಯಾಮಕನಾದ ಪರಬ್ರಹ್ಮನ ಹಲವು ಮುಖಗಳಷ್ಟೇ. ಈ ಎಲ್ಲಾ ದೈವಗಳ ಪೂಜೆ (ಸಗುಣೋಪಾಸನೆ) ತನ್ನ ಆತ್ಮದಲ್ಲಿಯೇ ಇರುವ ಪರಮಾತ್ಮನನ್ನು ಅರಿಯುವ ಸನ್ಮಾರ್ಗ ಎಂಬುದು ಶ್ರೀ ಮುತ್ತುಸ್ವಾಮಿ ದೀಕ್ಷಿತರ ಸಂದೇಶ. ಇದುವೇ ನಮ್ಮ ಭಾರತೀಯ ಸನಾತನ ಧರ್ಮದ ಸಂದೇಶ. ಶ್ರೀರಾಮಕೃಷ್ಣ ಪರಮಹಂಸರು, ಶ್ರೀ ವಿವೇಕಾನಂದರು, ಶ್ರೀ ಶಾರದಾಮಾತೆಯವರ ಸಂದೇಶಾಮೃತ ಕೂಡಾ ಇದೇ ಆಗಿದೆ.

ಶ್ರೀ ಶ್ಯಾಮಾಶಾಸ್ತ್ರಿಯವರು ಶ್ರೀವಿದ್ಯಾ ಉಪಾಸಕರೂ ಬಂಗಾರು ಕಾಮಾಕ್ಷಿದೇವಿಯ ಪರಮ ಭಕ್ತರೂ ಆಗಿದ್ದರು. ಭಕ್ತಿಯ ಪರಾಕಾಷ್ಠೆ ಹಾಗೂ ಅಧ್ಯಾತ್ಮ ಸಾಧನೆ, ಸಿದ್ಧಿಗಳನ್ನು ಇವರ ಸಂಗೀತ ಕೃತಿಗಳಲ್ಲಿ ಕಾಣಬಹುದು.

ಬಂಗಾರು ಕಾಮಾಕ್ಷಿದೇವಿಯ ಅರ್ಚಕರಾಗಿದ್ದ ಈ ಮಹಾನುಭಾವರು ದೇವಿಯ ಪೂಜಾಕಾಲದಲ್ಲಿ ಮೈಮರೆತು ಭಕ್ತಿಯಿಂದ

ಮನದುಂಬಿ ಹಾಡಿ, ಕೃತಿಗಳನ್ನು ರಚಿಸಿ ಜಗನ್ಮಾತೆಯ ಅನುಗ್ರಹ ವನ್ನು ಸಂಪಾದಿಸಿದವರು. ಶ್ರೀರಾಮಕೃಷ್ಣ ಪರಮಹಂಸರೂ ಸಹಾ ಕಾಳಿಮಾತೆಯ ಪೂಜಾಕೈಂಕರ್ಯದ ವೇಳೆ ಮೈಮರೆತು ಭಕ್ತಿಯಿಂದ ಹಾಡಿ ತನ್ಮಯರಾಗುತ್ತಿದ್ದುದನ್ನು ಹಾಗೂ ಕಾಳೀ ಮಾತೆಯೊಡನೆ ಸಂಭಾಷಣೆ ನಡೆಸುತ್ತಿದ್ದುದನ್ನು ಇಲ್ಲಿ ಉಲ್ಲೇಖಿಸ ಬಹುದು. ಇವರು ಹೊಗಳಿಕೆ, ರಾಜಗೌರವಗಳಿಗೆ ಎಂದೂ ಮಾರುಹೋದವರಲ್ಲ.

'ಪಾಲಿಂಚು ಕಾಮಾಕ್ಷಿ' ಎಂಬ ಮಧ್ಯಮಾವತಿ ರಾಗದಲ್ಲಿ ರುವ ಕೃತಿಯಲ್ಲಿ ಅದ್ಭುತ ಸಾಧನೆಗಾಗಿ ದೇವಿಯ ರಕ್ಷೆ ಬೇಡು ತ್ತಾರೆ. ಆಹಿರಿ ರಾಗದ 'ಮಾಯಮ್ಮ' ಎಂಬ ಕೃತಿ ಅಧ್ಯಾತ್ಮ ಸಾಧನೆಯಲ್ಲಿರುವ ಭಕ್ತನ ಹೃದಯವನ್ನು ತೆರೆದಿಡುವಂತಿದೆ. ನಿಧಾನವಾದ ಗತಿಯಲ್ಲಿ ಪ್ರಾರಂಭವಾಗಿ ದೇವಿಯ ಅನುಗ್ರಹವು ದೊರಕದೆ, ಕೋಪಿಸಿಕೊಂಡ 'ಮಗು'ವಿನ ಮನೋಭಾವವನ್ನು ಸೂಚಿಸುವಂತಿದೆ. ಲಯ-ರಾಗ-ಭಾವ-ಭಕ್ತಿಗಳ ಸುಮಧುರ ಸಮ್ಮಿಲನವಿದೆ.

ಇವರು ಸುಮಾರು ೩೦೦ ಕೃತಿಗಳನ್ನು ರಚಿಸಿದ್ದಾರೆ. ಮೇಲೆ ಹೇಳಿದ ಸುಮಧುರ ಸಮ್ಮಿಲನವಿರುವ ಕೆಲವು ಕೃತಿಗಳನ್ನು ಉಲ್ಲೇ ಖಿಸುವುದಾದರೆ: ಆನಂದಭೈರವೀರಾಗ, ಮಿಶ್ರಛಾಪುತಾಳದಲ್ಲಿ ರುವ 'ಮರಿವೇರೆ ಗತಿ' ಎಂಬ ಕೃತಿ, ಲಲಿತರಾಗ ಮಿಶ್ರಛಾಪು ತಾಳದಲ್ಲಿರುವ 'ನನ್ನು ಬ್ರೋವು' ಎಂಬ ಕೃತಿ, ಶಂಕರಾಭರಣ ರಾಗ ಆದಿತಾಳದಲ್ಲಿರುವ 'ದೇವೀ ಮೀನನೇತ್ರಿ' ಎಂಬ ಕೃತಿ, ಆಹಿರಿರಾಗ, ಆದಿತಾಳದಲ್ಲಿರುವ 'ಮಾಯಮ್ಮಯನಿ' ಎಂಬ ಕೃತಿ.

ಒಟ್ಟಿನಲ್ಲಿ ಹೇಳುವುದಾದರೆ, ಕರ್ನಾಟಕ ಸಂಗೀತ ತ್ರಿಮೂರ್ತಿ ಗಳು ಭಕ್ತಾಗ್ರೇಸರೂ, ನಾದೋಪಾಸಕರೂ ಆಗಿದ್ದು ಅಪೂರ್ವ ನಾದಯೋಗ – ಭಕ್ತಿಯೋಗದ ಮೂಲಕ ಪರಮಾತ್ಮ ತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡ ಮಹಾನುಭಾವರು. ಇವರುಗಳು ವೈರಾಗ್ಯದ ಸಾಕಾರ ಮೂರ್ತಿಗಳಾಗಿದ್ದರು. ವೇದೋಪನಿಷತ್ತುಗಳು, ಅಷ್ಟಾ ದಶ ಪುರಾಣ, ರಾಮಾಯಣ, ಮಹಾಭಾರತ, ಭಾಗವತ, ಭಗವ ದ್ಗೀತೆ, ಮಂತ್ರತಂತ್ರಶಾಸ್ತ್ರಗಳು, ಜ್ಯೋತಿಷ್ಯ ಮುಂತಾದವುಗಳ ಸಾರವನ್ನು ತಮ್ಮ ಸಂಗೀತ ರಚನೆಗಳಲ್ಲಿ ಎರಕಹೊಯ್ದು ಮಾನವ ಕೋಟಿಯ ಕಲ್ಯಾಣಕ್ಕಾಗಿ ನೀಡಿದ ನಾದಯೋಗಿಗಳು ಇವರು; ಅಪೂರ್ವ ಭಕ್ತಿಪಾರಮ್ಯವನ್ನವರು ಮೆರೆದರು. 'ದೇವನೊಬ್ಬ ನಾಮ ಹಲವು' ಎಂಬ ಸನಾತನ ಧರ್ಮದ ತತ್ತ್ವದ ಆಧಾರದ ಮೇಲೆ ಬೇರೆ ಬೇರೆ ದೇವಾನುದೇವತೆಗಳ ಕುರಿತು ಅಸಂಖ್ಯಾತ ಭಕ್ತಿ ಸಂಗೀತ ಕೃತಿಗಳನ್ನು ರಚಿಸಿ ಅವೆಲ್ಲಾ ರೂಪಗಳನ್ನು 'ಪರ ಬ್ರಹ್ಮತತ್ತ್ವ'ದಲ್ಲಿ ಏಕೀಭವಿಸಿಕೊಂಡು ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ನಾದೋಪಾಸಕರಿವರು. ಮುಕ್ತಿಗಾಗಿ, ಭಕ್ತಿ ಹಾಗೂ ನಾದಯೋಗಗಳ ಮೂಲಕ ಸಾಧನೆಯನ್ನು ನಡೆಸುವ ಸಾಧಕರಿಗೆ ಕರ್ನಾಟಕಸಂಗೀತತ್ರಿಮೂರ್ತಿಗಳು ಸರ್ವದಾ ಪರಮಪೂಜ್ಯರೂ ಮತ್ತು ಪರಮ ಆಚಾರ್ಯರೂ ಆಗಿರುತ್ತಾರೆ. ❋

# ಶ್ರೀ ತ್ಯಾಗರಾಜರ ಕೃತಿಗಳಲ್ಲಿ ಅಧ್ಯಾತ್ಮ

ಡಾ. ಶ್ರೀಕಾಂತಮ್ ನಾಗೇಂದ್ರ ಶಾಸ್ತ್ರೀ



ಸಂತ ತ್ಯಾಗರಾಜರು ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರು, ಹಾಗೂ ಸಂಗೀತೋಪಾಸನೆಯನ್ನು ಮಾಡಿ ಭಗವಂತನ ದರ್ಶನವನ್ನು ಪಡೆದ ಸಂತರು. ಅವರ ಕೃತಿಗಳಲ್ಲೆಲ್ಲ ಭಕ್ತಿ, ತತ್ತ್ವ, ಆಧ್ಯಾತ್ಮಿಕತೆ ತುಂಬಿ ತುಳುಕುತ್ತದೆ. ಈ ಹಿನ್ನೆಲೆಯಲ್ಲಿ ಅವರ ಕೃತಿಗಳನ್ನು ವಿವರಿಸಿರುವ ಲೇಖಕರು ಚಿಂತಲಪಲ್ಲಿ ಸಂಗೀತ ಪರಂಪರೆಗೆ ಸೇರಿದ ಗಾಯಕರು. ಸಂಗೀತ ಶಾಸ್ತ್ರದಲ್ಲಿ ವಿಶೇಷ ಪರಿಣತಿ ಪಡೆದಿರುವ ಅವರು ಪ್ರಸ್ತುತ ಬೆಂಗಳೂರು ಮಹಾರಾಣಿ ಕಾಲೇಜಿನ ಸಂಗೀತ ವಿಭಾಗದ ಮುಖ್ಯಸ್ಥರಾಗಿ ಹಾಗೂ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಗೀತಜ್ಞಾನಂ ಶಿವಪ್ರಾಪ್ತೇಃ ಸುತರಾಂ ಕಾರಣಂ ಭವೇತ್ ।
ಗೀತಿಜ್ಞಾನೇನ ಯೋಗಸ್ಯಾದ್ಯೋಗಾದೇವ ಶಿವೈಕ್ಯತಾ ॥

ಶಿವಪ್ರಾಪ್ತಿಗೆ ಸಂಗೀತಜ್ಞಾನವೇ ಮುಖ್ಯಕಾರಣ, ಸಂಗೀತಜ್ಞಾನದಿಂದ ಯೋಗವೂ, ಯೋಗದಿಂದ ಮೋಕ್ಷವೂ ಲಭಿಸುತ್ತದೆಂಬುದು ಸೂತಸಂಹಿತೆಯ ಅಭಿಪ್ರಾಯ. ನಾದಾನುಸಂಧಾನದಿಂದ ಮೋಕ್ಷಪ್ರಾಪ್ತಿಯೆಂದು ಶಾರ್ಙ್ಗದೇವಾದಿ ಶಾಸ್ತ್ರಜ್ಞರೂ ಅಭಿಪ್ರಾಯಪಡುತ್ತಾರೆ. ಆದರೆ ಶ್ರೀತ್ಯಾಗರಾಜರೇ ಹೇಳುವಂತೆ 'ಗೊಪ್ಪತನಮುನಕೆಯಾಸ । ಕುತ್ಸಿತವಿಷಯ ಪಿಪಾಸ । ಮೆಪ್ಪುಲ ಕೈಬಹುವೇಸಮಿಡಿ । ಉಪ್ಪುತಿಲ್ಲೇದರು, ಅದಿ ಕಾದು ಭಜನಮನಸಾ' ಎಂದು ಸಮಾಜದಲ್ಲಿ ಆಡಂಬರವಾದ ರೀತಿಯಲ್ಲಿ ಜನರನ್ನು ಮೋಸಗೊಳಿಸಲು ವೇಷ ಹಾಕಿದವರನ್ನು, ಅವರ ಭಜನೆಯ ಪರಿಯನ್ನು ತಿಳಿಸಿದ್ದಾರೆ. ಇಂತಹವರೇ ಪ್ರಪಂಚದಲ್ಲಿ ಹೆಚ್ಚು. ಆದರೆ,

**ಜಂತೂನಾಂ ನರಜನ್ಮದುರ್ಲಭಮತಃ ಪುಂಸ್ತ್ವಂ ತತೋ ವಿಪ್ರತಾ।**
**ತಸ್ಮಾದ್ವೈದಿಕ-ಧರ್ಮಮಾರ್ಗಪರತಾ ವಿದ್ವತ್ವಮಸ್ಮಾತ್ ಪರಮ್।**
**ಆತ್ಮಾನಾತ್ಮ-ವಿವೇಚನಂ ಸ್ವಾನುಭವೋ ಬ್ರಹ್ಮಾತ್ಮನಾ ಸಂಸ್ಥಿತಿ-**
**ರ್ಮುಕ್ತಿರ್ನೋ ಶತಕೋಟಿ ಜನ್ಮ ಸುಕೃತೈಃ ಪುಣ್ಯೈರ್ವಿನಾ ಲಭ್ಯತೇ ॥**

ಎಂಬಂತೆ ಮನುಷ್ಯಜನ್ಮವೂ, ಪುಂಸ್ತ್ವವೂ, ಬ್ರಾಹ್ಮಣತ್ವವೂ (ಬ್ರಹ್ಮನನ್ನು ಅರಿತವನೆಂಬ ರೀತಿಯಲ್ಲಿ) ವೈದಿಕ ಮಾರ್ಗದಲ್ಲಿ ವಿಶ್ವಾಸವೂ ಶಾಸ್ತ್ರಪಾಂಡಿತ್ಯವೂ ಆತ್ಮಾನಾತ್ಮ ವಿಚಾರಪರತೆಯೂ ಸ್ವಾತ್ಮಾನುಭವವೂ ಬ್ರಹ್ಮಭಾವದಲ್ಲಿರುವುದೂ ನೂರುಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವಿಲ್ಲದೆ ಲಭಿಸುವುದಿಲ್ಲ. ಇಂತಹ ಶ್ರೇಷ್ಠಜೀವಿಯಾದವರು ಶ್ರೀತ್ಯಾಗರಾಜರು. ಸಂಗೀತಕ್ಕಾಗಿ ಕೃತಿರಚನೆಯಾಯಿತೆಂಬ ವಾದಕ್ಕಿಂತ ಆ ಕೃತಿಗಳಲ್ಲಿನ ಅಧ್ಯಾತ್ಮ ಭಾವವನ್ನು ನೋಡಿದಾಗ ತಮ್ಮ ಮೋಕ್ಷಾಪೇಕ್ಷೆಗೆ ಕೃತಿಗಳನ್ನು ಸಾಧನ ಮಾಡಿಕೊಂಡಿರುವುದು ಆ ಕೃತಿಗಳ ಅರ್ಥಾನುಸಂಧಾನ ಮಾಡಿಕೊಂಡಾಗ ತಿಳಿಯುತ್ತದೆ. ಆದ್ದರಿಂದ ಅವರ ಸಂಗೀತವನ್ನೇ ಗಮನದಲ್ಲಿಟ್ಟುಕೊಂಡರೆ ಆ ಸಂಗೀತವು ನಾದಬ್ರಹ್ಮಾನುಸಂಧಾನವೆಂದೂ, ಕೃತಿಗಳು ರಾಮಬ್ರಹ್ಮಾನುಸಂಧಾನವೆಂದೂ ಹೇಳಬಹುದಾಗಿದೆ. ಅವರ ಪ್ರಕಾರ 'ಸಂಗೀತ ಶಾಸ್ತ್ರಜ್ಞಾನಮು ಸಾರೂಪ್ಯ ಸೌಖ್ಯದಮು' (ಮುಖಾರಿ ರಾಗದ ಕೃತಿ), ಅಂತಹ ಸಂಗೀತದಿಂದ ನ್ಯಾಯಾನ್ಯಾಯ ವಿಚಕ್ಷಣತೆಯೂ, ಜಗತ್ತು ಮಾಯೆಯೆಂಬುದೂ 'ಜಗಮುಲು ಮಾಯಾಮಯಮನಿ ತೆಲುಸುನು' (ಧನ್ಯಾಸಿ ರಾಗ) ತಿಳಿಯುತ್ತದೆ. ಅಲ್ಲದೆ ಅವರ ಕೃತಿಗಳು ಒಂದರ್ಥದಲ್ಲಿ ಅದ್ವೈತದ ಸಾರವೇ ಆಗಿದೆ. ಶ್ರೀಶಂಕರಾಚಾರ್ಯರಂತೆ ಷಣ್ಮತಗಳ ಬಗೆಗೆ ಗೌರವವನ್ನು, ಪರಬ್ರಹ್ಮವಸ್ತುವಿನಲ್ಲಿ ಮನಸ್ಸನ್ನು ಇಟ್ಟವರು. 'ಶ್ರುತಿ ಶಾಸ್ತ್ರ ಪುರಾಣವಿಧಾದಿ ಷಣ್ಮತ ನಿಷ್ಠುಲ' (ನಿಜಮರ್ಮಮು - ಉಮಾಭರಣ ರಾಗ) ಎಂದೂ ರಾಮನೇ ಬ್ರಹ್ಮ-ಪರಬ್ರಹ್ಮವೆಂದೂ ನಂಬಿದವರು. ಅವರಲ್ಲಿ ದ್ವೈತಾದ್ವೈತ ವಿವೇಚನವೂ, ಮಾಯಾ ನಿರೂಪಣವೂ, ಭಕ್ತಿ-ಜ್ಞಾನ ವೈರಾಗ್ಯಗಳ ಮಾರ್ಗಗಳೂ ಜ್ಞಾನ-ಭಕ್ತಿಗಳ ಶ್ರೇಷ್ಠತೆಯೂ, ಶ್ರೀವಿದ್ಯೆಯೇ ಮೊದಲಾದ ಅನೇಕ ವಿದ್ಯೆಗಳ ಭಾಗಶಃ ದರ್ಶನವೂ, ಮಹಾವಾಕ್ಯ ನಿರೂಪಣೆಗಳು, ಅಹಂ ಪದಾರ್ಥ ನಿರೂಪಣೆಯೂ, ಕರ್ಮ-ವಿಷಯ-ವಾಸನೆಗಳ ಚಿಂತೆ ಹಾಗೂ ಅವುಗಳ ತ್ಯಾಗವಿಚಾರವೂ, ಸದಸದ್ವಿವೇಕವೂ,

ಗುರೂಪಸತ್ತಿಯೂ ಸೇರಿದಂತೆ ಅನೇಕಾನೇಕ ವಿಷಯಗಳು ಕಂಡುಬಂದು, ಅಧ್ಯಾತ್ಮ ಕೋಶವಾಗಿ ಕಾಣುತ್ತದೆ. ಆದರೆ ಸಂಗೀತಗಾರರು ಅವುಗಳ ಮರ್ಮವನ್ನರಿತು, ಕೇವಲ ರಾಗ-ಸಂಗತಿ-ಲಯಗಳಿಗಷ್ಟೇ ಆ ಕೃತಿಗಳನ್ನು ಉಪಯೋಗಿಸಿಕೊಳ್ಳದೆ, ಸಾಹಿತ್ಯದ ಅರ್ಥಸ್ಫುರಣೆ ಸಾಧ್ಯವಾಗುವಂತೆ ಭೇದಿಸಿ, ಒತ್ತು ಕೊಟ್ಟು ಹಾಡಬೇಕಾದವರ ಸಂಖ್ಯೆ ಹೆಚ್ಚಬೇಕಿದೆ.

ಪೂರ್ವ ರಾಷ್ಟ್ರಪತಿಗಳಾದ ಡಾ. ಎಸ್ ರಾಧಾಕೃಷ್ಣನ್‌ರವರು ಹೇಳುವಂತೆ, ‘‘ The name Tyaga-raja means the prince of renouncers, of those who give up worldly desires. Tyaga or renunciation is the way to mental peace and freedom... In the case of Tyaga-raja, renunciation is the result of undistracted devotion to God. ... He expresses the truths of the *Upanishads* and the *Bhagavad-gita* in simple and appealing language. The kingdom of God acquired through devotion is the greatest of all treasures: *Rama Bhakti Samrajyamu*.’’ *(Foreword – ‘The Spiritual heritage of Thyagraja’)*

ಈ ಹಿನ್ನೆಲೆಯಲ್ಲಿ ಅವರ ರಚನೆಗಳಲ್ಲಿ ಕಂಡುಬರುವ ಆಧ್ಯಾತ್ಮಿಕ ವಿಚಾರಗಳನ್ನು ವಿಸ್ತೃತಿ ಭೀತಿಯ ಹಿನ್ನೆಲೆಯಲ್ಲಿ ‘ಕುಂಭೀಪುಲಾಕನ್ಯಾಯ’ದಂತೆ ಸ್ವಲ್ಪವಾಗಿ ನೋಡುತ್ತ ಹೋಗಬಹುದು.

### ಗುರೂಪಸತ್ತಿ ಮತ್ತು ಉಪದೇಶ

‘ಉಪಸೀದೇದ್ಗುರುಂ ಪ್ರಾಜ್ಞಂ ಯಸ್ಮಾದ್ಬಂಧ ವಿಮೋಕ್ಷಣಮ್’ ಎಂಬಂತೆ ಯಾರು ತನ್ನ ಆತ್ಮನ ನಿಜಸ್ವರೂಪವನ್ನು ತಿಳಿಯಬಯಸುವನೋ ಅಂಥಾ ಮುಮುಕ್ಷುವು ಎಲ್ಲ ಬಂಧಗಳಿಂದ ವಿಮೋಚನೆ ಮಾಡಿ ಕಾಪಾಡುವ ಗುರುವಿನ ಬಳಿ ಸಾಗಬೇಕು. ಅಂತಹ ಗುರುವನ್ನು ‘ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ । ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ’ *(ಗೀತೆ, ೪.೩೪)* ಈ ವಿವರವನ್ನು ‘ಗುರುಲೇಕ ಎಟುವಂಟಿ ಗುಣಿಕಿ ತೆಲಿಯಕಬೋದು’ (ಗೌರೀಮನೋಹರೀ ರಾಗ) ಕೃತಿಯಲ್ಲಿ, ಎಂತಹ ಗುಣವಂತನಾದರೂ ಸದ್ಗುರುವಿನ ಆಶ್ರಯವಿಲ್ಲದೆ ಅಜ್ಞಾನವೆಂಬ ಅರಣ್ಯವನ್ನು ನಾಶಮಾಡಲಾಗುವುದಿಲ್ಲ. ಸತಿ-ಸುತ, ಧನ, ದಾರಾ, ದಾಯಾದಿ ಬಂಧುಗಳಿದ್ದರೂ ಹೃದ್ರೋಗ ಪೀಡಿತನಂತೆ ನರಳುವಂತಾಗುತ್ತದೆ. ಈ ರೋಗಕ್ಕೆ ಮದ್ದು ಎನ್ನು ವಂತೆ ತತ್ತ್ವಬೋಧನೆಯನ್ನು ಮಾಡಿ, ‘ಗುರುವೇ ಕಾಪಾಡು’ ಎಂದು ಪ್ರಾರ್ಥಿಸುತ್ತಾರೆ. ‘ನೀ ಚಿತ್ತಮು’ ಕೃತಿಯಲ್ಲಿ (ಧನ್ಯಾಸಿ ರಾಗ)ಗುರುವು ಕತಕ ಬೀಜದಂತೆ, ಶಿಷ್ಯನ ಮನಸ್ಸನ್ನು ನಿರ್ಮಲಗೊಳಿಸಿ ತನ್ನಂತೆ ಶಿಷ್ಯನನ್ನು ಮಾಡುತ್ತಾನೆ ಎನ್ನುತ್ತಾರೆ.

### ದ್ವೈತ ನಿಷೇಧ ಮತ್ತು ಮಹಾವಾಕ್ಯಗಳು

ಅವರ ‘ದ್ವೈತಮು ಸುಖಮಾ?’ ಕೃತಿಯಲ್ಲಿ, ‘ಜೀವ ಮತ್ತು ಈಶ್ವರಗಳೆರಡು ಎಂಬ ದ್ವೈತವು ಸುಖವೆ? ಜೀವೇಶ್ವರರು ಒಂದೆಂಬ ಅದ್ವೈತವು ಸುಖವೆ? ತ್ಯಾಗರಾಜಾರ್ಚಿತನೇ, ಗಗನ, ಪವನ, ತಪನ, ಭುವನಾದ್ಯವನಿಗಳಲ್ಲಿ ನಗಧರ (ವಿಷ್ಣು) ಅಜ, ಶಿವ, ಇಂದ್ರಾದಿ ದೇವತೆಗಳಲ್ಲಿ, ಭಗವದ್ಭಕ್ತ ಶ್ರೇಷ್ಠರಲ್ಲಿ ನೀನೇ ಇದ್ದೀಯೆ! (ಇಲ್ಲಿ ಪರಬ್ರಹ್ಮ ಸ್ವರೂಪವಾದ ರಾಮನೇ ಎಲ್ಲವೂ ಆಗಿದ್ದಲ್ಲಿ ದ್ವಿವಿಧತ್ವಕ್ಕೆ ಎಲ್ಲಿಯ ಅವಕಾಶ!!) ಏಕೆಂದರೆ ‘ರಾಮಾ’ ಎಂದರೆ ಆನಂದದ ಇನ್ನೊಂದು ಹೆಸರು; ಪರಬ್ರಹ್ಮಕ್ಕೆ ಹೆಸರು ರಾಮಾ ಎಂದೇ ಎಂದು, ‘ರಾಮಾಯನ ಬ್ರಹ್ಮಮುನಕು ಪೇರು’ (‘ತೆಲಿಸಿ ರಾಮ’; ಪೂರ್ಣಚಂದ್ರಿಕಾ ರಾಗ), ‘ನೀ ಜಪಮುಲ ವೇಳ ಜಗಮುಲು ನೀ ವೈ ರಾಜಿಲ್ಲುನಯ್ಯ’ (‘ಇಂತಕನ್ನ ಆನಂದ ಮೇಮಿ’, ಬಿಲಹರಿ ರಾಗ), ‘ಶ್ರೀಹರಿಕೀರ್ತನಚೇ ದೇಹಾದಿ ಇಂದ್ರಿಯ ಸಮೂಹಮುಲು ಮರಚಿ ಸೋಽಹಂ ಎನದೇ ಚಾಲು’ (ಅದೇ ಕೃತಿ), ‘ಉಂಡೇದಿ ರಾಮುಡೊಕಡು ಊರಕೆ ಚೆಡಿಬೋಕು’ (ಹರಿಕಾಂಭೋದಿ ರಾಗ)—ಇದರಲ್ಲಿ ಹೇಳುವಂತೆ ಪರಬ್ರಹ್ಮರೂಪವಾದ ರಾಮನೊಬ್ಬನೇ; ಸುಮ್ಮನೆ ಹಾಳಾಗದಿರು -ಎಂದು ಹೇಳುವಾಗ ಬ್ರಹ್ಮಸತ್ಯವನ್ನು ಹೇಳುವ ಮಾತುಗಳು ಈ ದ್ವೈತಭಾವ ನಿಷೇಧವನ್ನು ತರುತ್ತವೆ. ಅಲ್ಲದೆ ಶ್ರೀಶಂಕರರ ಷಣ್ಮತಗಳಲ್ಲಿ ಸೂರ್ಯನನ್ನು ‘ಚಂಡಮಾರ್ತಾಂಡ ಮಧ್ಯ ಮಂಡಲಮುನ ಚಲಂಗುಚು’ (‘ಉಂಡೇದಿ ರಾಮುಡೊಕ್ಕಡು’ ಕೃತಿ) ಎಂಬ ಉಲ್ಲೇಖದಲ್ಲಿ ‘ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತಿ ನಾರಾಯಣ ಸರಸಿಜಾಸನ ಸನ್ನಿವಿಷ್ಟಃ’ ಎಂಬ ಸೂರ್ಯದೇವನ ಪ್ರಾರ್ಥನೆ ರಾಮಪರವಾಗಿ ಕಂಡುಬಂದರೆ, ನೀವಂಟಿ ದೈವಮು (ತೋಡಿ ರಾಗ) ಕೃತಿಯಲ್ಲಿ ಸುಬ್ರಹ್ಮಣ್ಯನ ಪ್ರಾರ್ಥನೆಯೂ, ಕೋವೂರು ಕೃತಿಗಳಲ್ಲಿ ಶಿವನನ್ನೂ, ತಿರುವಟ್ಟಿಯೂರು, ಧರ್ಮಸಂವರ್ಧನಿ ಕೃತಿಗಳಲ್ಲಿ ತ್ರಿಪುರಸುಂದರಿ ಭಗವತಿಯನ್ನೂ, ನೂರಾರು ಕೃತಿಗಳಲ್ಲಿ ವಿಷ್ಣುಸ್ವರೂಪನಾದ ರಾಮನನ್ನೂ, ಶ್ರೀ ಗಣಪತಿನಿ (ಸೌರಾಷ್ಟ್ರ ರಾಗ) ಕೃತಿಯಲ್ಲಿ ಗಣಪತಿಯನ್ನೂ (ಇಲ್ಲಿ ‘ಅಭೀಷ್ಟವರದ ಮಹಾಗಣಪತೇ’, ‘ಶ್ರೀಗಣನಾಥಂ’ ಎಂಬ ಕೃತಿಗಳು ತ್ಯಾಗರಾಜರ ಪ್ರಕ್ಷಿಪ್ತ ಗಣಪತಿ ಕೃತಿಗಳಿರುವುದನ್ನು ಗಮನಿಸಬಹುದು) ಅರ್ಚಿಸಿ ಷಣ್ಮತದ ಸಾರ್ಥಕ್ಯವನ್ನು ಎತ್ತಿಹಿಡಿಯುತ್ತಾರೆ. ‘ಶಿವ ಮಾಧವುಲ ಭೇದಮೆಂಚರಾದು’, ‘ಎವರನಿ ನಿರ್ಣಯಿಂಚೇದಿರಾ’ ಮೊದಲಾದ ಕೃತಿಗಳಲ್ಲಿ ಹರಿ-ಹರ ಅಭೇದತ್ವವನ್ನು ಹೇಳುತ್ತಾರೆ. ‘ತತ್ತ್ವಮೆರುಗ ತರಮಾ (ಗರುಡಧ್ವನಿ ರಾಗ ) ತತ್ತ್ವಮಸಿ ವಾಕ್ಯಾರ್ಥಮು ನೀವನಿ ಪರ ತತ್ತ್ವಮು’ ಎಂದೂ ಅಹಂಬ್ರಹ್ಮ ತತ್ತ್ವ ಅಂತರ್ಯಾಮಿ (‘ವೇದಪುರೀಶ’ - ಪೂರ್ವಿಕಲ್ಯಾಣಿ ರಾಗ) ಎಂದು ಮಹಾವಾಕ್ಯಗಳ ಉಲ್ಲೇಖಗಳನ್ನು ಮಾಡುತ್ತಾರೆ.

### ಮಾಯಾ ವಿಕ್ಷೇಪಾದಿ ನಿರೂಪಣ

‘ಅವ್ಯಕ್ತ ನಾಮ್ನೀ ಪರಮೇಶ ಶಕ್ತಿರನಾದ್ಯವಿದ್ಯಾ ತ್ರಿಗುಣಾತ್ಮಿಕಾ ಪರಾ’ *(ವಿವೇಕಚೂಡಾಮಣಿ, ೧೦೮)* ಎಂಬಲ್ಲಿ ಅವಿದ್ಯೆಗೆ ಮಾಯೆಯೆಂಬ ಇನ್ನೊಂದು ಅವ್ಯಕ್ತವಾದ ಹೆಸರಿದೆಯೆನ್ನುತ್ತಾರೆ

ಶ್ರೀಶಂಕರರು. ಈ ಮಾಯೆಯೂ ಪರಮೇಶ ಶಕ್ತಿಯೇ, ಇದು ಸತ್ತ್ವ, ರಜಸ್ಸು, ತಮೋಗುಣಗಳಿಂದ ಕೂಡಿ ರಜೋಗುಣ ವಿಶೇಷದಲ್ಲಿ ವಿಕ್ಷೇಪವೂ, ಈ ವಿಕ್ಷೇಪದಲ್ಲಿ ರಾಗಾದಿ ದುಃಖಗಳೂ, ಕಾಮ ಕ್ರೋಧಾದಿ ಘೋರಧರ್ಮಗಳೂ ಇದ್ದು, ಇವುಗಳು ನಮಗೆ ಬಂಧ ಹೇತುಗಳಾಗಿವೆ. ಮನುಷ್ಯನು ಮೇಧಾವಿಯಾಗಿದ್ದರೂ ಶಾಸ್ತ್ರಜ್ಞನಾದರೂ ತಮೋಗುಣಪೂರಿತವಾದ ಆವರಣವು ಅಜ್ಞಾನ, ಆಲಸ್ಯ, ಜಡತ್ವ, ನಿದ್ರಾ, ಪ್ರಮಾದ, ಮೂಢತ್ವಗಳನ್ನುಂಟು ಮಾಡುತ್ತವೆ. ಸತ್ತ್ವವೂ ನೀರಿನಂತೆ ನಿರ್ಮಲವಾದದ್ದಾದರೂ ರಜಸ್ಸು, ತಮಸ್ಸುಗಳೊಡನೆ ಬೆರೆತು ಸಂಸಾರಕ್ಕೆ ಹೇತುವಾಗಿ ಬಿಡುತ್ತವೆ. ಇವುಗಳನ್ನು ಕುರಿತು, ಇವುಗಳ ನಿವಾರಣೆಗೆ ರಾಮನ ಉಪಾಸನೆಯನ್ನು ತ್ಯಾಗರಾಜರು ಅನೇಕ ಕೃತಿಗಳಲ್ಲಿ ಹೇಳಿದ್ದಾರೆ.

**ಅಪರಾಧಮುಲಮಾನ್ಪಿ (ದರ್ಬಾರು ರಾಗ):** 'ಅತ್ಯಂತ ಮತ್ಸರೀಕೃತನಾಗಿ ಸಾಧುಜನರ ನಿಂದೆಯಲ್ಲಿ ಕಳೆದೆ. ಮದದಿಂದಾಗಿ ಸೊಕ್ಕಿ ಜನರ ಮುಂದೆ ತೋರಿಕೆಯ ಜಪವನ್ನೂ, ಕಾಮದಿಂದ ಸ್ತ್ರೈಣಲೋಲನಾಗಿ ನಿನ್ನನ್ನು ಮರೆತೆ. (ಇದನ್ನು ತ್ಯಾಗರಾಜರು ಪ್ರತಿ ಸಾಮಾನ್ಯ ಜೀವಿಗಳಂತೆ ಆರೋಪಿಸಿಕೊಳ್ಳುವುದಷ್ಟೇ ಹೊರತು ತ್ಯಾಗರಾಜರೇ ಹಾಗೆ ಇದ್ದರೆಂಬುದು ಭಾವವಲ್ಲ.)

**ಇನ್ನಾಳ್ಳವಲೆ (ತೋಡಿ ರಾಗ):** ಮನಸುನ ವಿಷಯಾದುಲಂಟ ನೀಕ ನನ್ನು ಮನ್ನಿಂಚು, ಕಾಮಾದಿ ಗುಣಮುಲ ಚೇತ ಗಾಸಿ ಲೇಕ ಕರುಣಿಂಚು - ('ಮನಸ್ಸಿನಲ್ಲಿ ವಿಷಯಾದಿಗಳು ಅಂಟದಂತೆ, ಕಾಮಾದಿ ಗುಣಗಳು ನನ್ನನ್ನು ಇನ್ನಾದರೂ ಹಾಳುಮಾಡದಂತೆ ಕಾಪಾಡು')

**ಇಂತಕನ್ನದೆಲ್ಲತರಮಾ(ಸಾವೇರಿ ರಾಗ):** 'ನೀನೇ ನನಗೆ ಇಹ-ಪರವಾಗಿದ್ದೀಯೆ. ನನ್ನ ಗೃಹಸ್ಥ ಜೀವನವೂ ನಿನ್ನನ್ನೇ ನಂಬಿಕೊಂಡಿದೆ, ಚಂದ್ರನು ನೋಡುವ ಕುಮುದದಂತೆ ನನ್ನನ್ನು ಕಾಪಾಡು.'

**ಈ ಮೇನು ಕಲಿಗಿ (ವರಾಳಿ ರಾಗ):** 'ಕಾಮಾದಿ ದುರ್ಗುಣಸ್ತೋಮ ಪೂರಿತವಾದ ಈ ನರಜನ್ಮವನ್ನು ಪಡೆದು ಆಗಿದೆ. ಕಿರಾತನಾದ ವಾಲ್ಮೀಕಿ ಸನ್ಮಾರ್ಗಿಯಾದಂತೆ ನನ್ನನ್ನೂ ಈ ಜನ್ಮದಿಂದ ಕಾಪಾಡು.'

**ಕಳಲನೇರ್ಚಿನ (ದೀಪಕ ರಾಗ):** '೬೪ ಕಲೆಗಳನ್ನು ಕಲಿತು ಶಾಸ್ತ್ರಜ್ಞ ನಾದರೂ ಅವು ಉದರಂಭರಣಕ್ಕಾಯಿತು. ಅವುಗಳಿಂದ ಕರ್ಮ ವನ್ನು ತೊಲಗಿಸಲು ಸಾಧ್ಯವೆ?'

ಇಂತಹ ಅನೇಕ ಕೃತಿಗಳಲ್ಲಿ ಅಲ್ಲದೆ 'ದುಡುಕುಗಲ' ಕೃತಿಯಲ್ಲಿ ವಿವಿಧ ರೀತಿಯ ಚಿತ್ತದೋಷಗಳನ್ನು, ಘೋರ ದುಷ್ಕರ್ಮಗಳನ್ನೂ, ಮಾನವನಿಗೆ ಮೆಲ್ಕಂಡ ಮಾಯಾದಿಗಳ ಕಾರಣದಿಂದ ಉತ್ಪನ್ನವಾಗುವ ಸಕಲವಿಧವಾದ ದುಡುಕುಗಳನ್ನೂ ತಾವು ಆರೋಪಿಸಿಕೊಂಡು, ಪಶ್ಚಾತ್ತಾಪದ ಭಾವವೇ ಇದಕ್ಕೆ ಪರಿಹಾರವೆಂಬಂತೆ ವಿವರಿಸುತ್ತಾರೆ.

## ಜೀವನ್ಮುಕ್ತನ ಲಕ್ಷಣ

**'ಸ್ಥಿತಪ್ರಜ್ಞೋಯತಿರಯಂ ಯಃ ಬ್ರಹ್ಮಾನಂದಮಶ್ನುತೇ॥'** ಎಂಬಂತೆ ಸರ್ವವಿಕಾರರಹಿತನಾದ, ಸದಾ ಆನಂದವನ್ನೇ ಆಹಾರವಾಗಿ ಉಳ್ಳವನು ಜೀವನದಲ್ಲಿದ್ದೂ ಮುಕ್ತನಾಗಿರುತ್ತಾನೆ. ಅಂಥವನಿಗೆ ಪ್ರಜ್ಞೆಯು ಸ್ಥಿತವಾಗಿ, ಪ್ರಪಂಚವನ್ನೇ ಮರೆತಂತೆ ಇರುತ್ತಾನೆ. ಇದನ್ನು 'ಅತಡೇ ಧನ್ಯುಡುರಾ ಓ ಮನಸಾ ಕೃತಿ' ಯಲ್ಲಿ (ಕಾಪಿ ರಾಗ) ವಿವರಿಸುತ್ತಾರೆ. ಸದಾಕಾಲವೂ ರಾಮನ ಪಾದಕಮಲವನ್ನು ಸತತವಾಗಿ ಧ್ಯಾನಿಸುವವನೂ, ನಾಮಕೀರ್ತನೆಯಲ್ಲಿ ಆನಂದ ಪಡುವವನೂ, ಯಾವಾಗಲೂ ಚಿಂತೆಯನ್ನು ದೂರೀಕರಿಸಿ ಸಂತೋಷವಾಗಿರುವವನೂ, ಅರಿಷಡ್ವರ್ಗಗಳನ್ನು ತ್ಯಜಿಸಿ ಎಲ್ಲವೂ ಅನಿತ್ಯವೆಂದು ಅರಿತವನೂ, ಬ್ರಾಹ್ಮಣಜನ್ಮವನ್ನು ಪಡೆದು ಶಾಶ್ವತವಾಗಿ ಮುಕ್ತಿಫಲವನ್ನು ಭದ್ರಮಾಡಿಕೊಳ್ಳುವವನೂ, ರಾಜಸರ ಸಂಗವಿಲ್ಲದವನೂ, ರಾಮನಲ್ಲೇ ಭಕ್ತಿಯುಳ್ಳವನಾಗಿ ಸರ್ವೋನ್ನತ ಸುಖವನ್ನು ಪಡೆಯುವ ಆತನೇ ನಿಜವಾಗಿ ಧನ್ಯನು. 'ಅನುರಾಗಮು'(ಸರಸ್ವತಿ ರಾಗ) ಕೃತಿಯಲ್ಲಿ ಭಗವಂತನಲ್ಲಿ ಅನುರಾಗವಿಲ್ಲದೆ ಸುಜ್ಞಾನವು ದೊರಕದೆಂದೂ ಇವುಗಳ ಘನವಾದ ಅಂತರ ಜ್ಞಾನಿಗಳಿಗೇ ತಿಳಿಯುವುದೆಂದೂ, ವಿಧವಿಧವಾದ ಊಟಗಳನ್ನು ಮಾಡಿ ತೃಪ್ತಿಯಾಗುವಂತೆ ಮೊದಲು ಸಗುಣೋಪಾಸನೆ, ಧ್ಯಾನಗಳಲ್ಲಿ ಸುಖವೆಂದೂ ನಂತರ ಭಗವಂತನ ಮೇಲಿನ ಅನುರಾಗವೇ ಮುಖ್ಯವಾಗುವುದೆಂದೂ ಅಭಿಪ್ರಾಯಪಡುತ್ತಾರೆ.

## ಭಕ್ತಿ-ಜ್ಞಾನ

**ಮೋಕ್ಷ ಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ ।**
**ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೇ ॥**

*(ವಿವೇಕಚೂಡಾಮಣಿ, ೩೧)*

ಮೋಕ್ಷದ ಕಾರಣ ಸಾಮಗ್ರಿಗಳಲ್ಲಿ ಭಕ್ತಿ ಶ್ರೇಷ್ಠವಾದದ್ದು.

'ಭಕ್ತಿಬಿಚ್ಚಮೀಯವೇ'(ಶಂಕರಾಭರಣ ರಾಗ) ಕೃತಿಯಲ್ಲಿ ಮುಕ್ತಿಗೆ, ಅಖಿಲಶಕ್ತಿಗೆ, ತ್ರಿಮೂರ್ತಿಗಳಿಗೂ ಮೀರಿದ ರಾಮ ಭಕ್ತಿಯ ಭಿಕ್ಷೆಯನ್ನು ಕೋರಿದ್ದಾರೆ. 'ಪ್ರಾಣಮು ಲೇನಿ ವಾನಿಕಿ ಬಂಗಾರು ಪಾಗ ಚುಟ್ಟಿ' ಎಂಬ ಚರಣದಲ್ಲಿ ಹೆಣಕ್ಕೆ ಚಿನ್ನದ ಸರಿಗೆಯ ರುಮಾಲನ್ನು ಆಣಿ ವಜ್ರಗಳನ್ನು ಹಾಕಿ ಅಲಂಕರಿಸಿದರೆ ಹೇಗೆ ಉಪಯೋಗವಿಲ್ಲವೋ ಹಾಗೆ ಭಕ್ತಿಯಿಲ್ಲದ ಜೀವನ ವ್ಯರ್ಥ; 'ಊರಕೇ ಕಲ್ಗುನಾ ರಾಮಭಕ್ತಿ'(ಶಹಾನ ರಾಗ) ಕೃತಿಯಲ್ಲಿ ಐಹಿಕಸುಖವನ್ನೇ ಅಪೇಕ್ಷಿಸುವವರಿಗೆ ಭಕ್ತಿ ದೊರಕುವುದಿಲ್ಲ. ಸಂಸಾರ, ಮಕ್ಕಳು, ಬಂಧು-ಬಾಂಧವ-ದಾಯಾದಿ, ಐಶ್ವರ್ಯಗಳು ಅಸ್ಥಿರವೆಂದು ತಿಳಿದು ಸತ್ಪುರುಷರ ದರ್ಶನ, ಅವರ ಸಾನ್ನಿಧ್ಯ, ಬೋಧನೆ, ತತ್ಪರಿಣಾಮವಾಗಿ ಮಾಡುವ ಧ್ಯಾನ, ಅದರಿಂದ ಸಿಗುವ ಮೋಕ್ಷವನ್ನು ಕುರಿತು ಹೇಳುತ್ತಾರೆ.

ಜ್ಞಾನದ ಬಗ್ಗೆ ಅವರಿಗೆ ಒಲವಿದೆ. 'ಮನಸ್ಯಾಲಕಿಂಚರಾದಟೇ' (ನಳಿನಕಾಂತಿ ರಾಗ) ಕೃತಿಯಲ್ಲಿ ಕರ್ಮಕಾಂಡಕ್ಕಿಂತ ಜ್ಞಾನ

ಕಾಂಡವೇ ಶ್ರೇಷ್ಠವೆಂಬುದನ್ನು 'ಕರ್ಮಕಾಂಡ ಮತಾಕೃಷ್ಟುಲೈ ಭವಗಹನಚಾರುಲೈ ಗಾಸಿ ಚೆಂದಗಾ' ಎಂದು ಹೇಳುತ್ತಾರೆ. ಅಂತಹ ಜ್ಞಾನವು ತನಗೆ ಬೇಕೆಂದು 'ಜ್ಞಾನಮೊಸಗರಾದಾ' (ಪೂರ್ವಿಕಲ್ಯಾಣಿ ರಾಗ) ಕೃತಿಯಲ್ಲಿ ಬೇಡುತ್ತಾರೆ. 'ಎಟುಲೈನ' (ಸಾಮ ರಾಗ) ಕೃತಿಯಲ್ಲಿ, 'ಹೇಗಾದರೂ ಮಾಡಿ ಈ ಮಾಯಾ ಸಂಸಾರದಿಂದ ಹೊರಕ್ಕೆ ಬಂದು ಭಕ್ತಿಯು ಬರುವುದಕ್ಕೇ ಯತ್ನ ಮಾಡುತ್ತಿರು ಮನಸ್ಸೇ! ಧ್ಯಾನವೇ ಭವರೋಗಕ್ಕೆ ಔಷಧ' ವೆನ್ನುತ್ತಾರೆ.

### ಪ್ರಾರಬ್ಧವಿಚಾರ

'ಉತ್ಪನ್ನೇಽಪ್ಯಾತ್ಮನಿ ಜ್ಞಾನೇ ಪ್ರಾರಬ್ಧಂ ನೈವ ಮುಂಚತಿ' *(ಅಪರೋಕ್ಷಾನುಭೂತಿ, ೯೦)* ಆತ್ಮಜ್ಞಾನಿಗೂ ಪ್ರಾರಬ್ಧವು ತಪ್ಪಿದ್ದಲ್ಲ. ಆದರೆ ಹೀಗೆ ಹೇಳಿರುವುದನ್ನು 'ಇತಿಯಚ್ಛ್ರೂಯತೇ ಶಾಸ್ತ್ರೇ ತನ್ನಿರಾಕ್ರಿಯತೇಽಧುನಾ' ಎಂದು ಶ್ರೀಶಂಕರರು ಯಾವ ಕರ್ಮದಿಂದ ಶರೀರವು ಪ್ರಾರಂಭಿಸಲ್ಪಟ್ಟಿತ್ತೋ ಅದನ್ನು ಅನುಭವಿಸುವುದರಿಂದ ಪ್ರಾರಬ್ಧವು ನಾಶವಾಗುತ್ತದೆ; 'ಕರ್ಮ ಜನ್ಮಾಂತರೀಯಂ ಯತ್ ಪ್ರಾರಬ್ಧಮಿತಿ ಕೀರ್ತಿತಮ್' *(ಅದೇ, ೯೨)* ಹಿಂದಿನ ಜನ್ಮದ ಕರ್ಮವೇ ಪ್ರಾರಬ್ಧವೆಂದೂ ಹೇಳುತ್ತಾರೆ. ಇದನ್ನೇ ತ್ಯಾಗರಾಜರು, 'ಪ್ರಾರಬ್ಧಮಿಟ್ಲುಂಡಗಾ' (ಸ್ವರಾವಳಿ ರಾಗ) ಕೃತಿಯಲ್ಲಿ, 'ಪ್ರಾರಬ್ಧವು ಹೀಗಿರುವಾಗ ಇನ್ನೊಬ್ಬರನ್ನು ನಿಂದಿಸುವ ಅಗತ್ಯವಿಲ್ಲ. ನೀನಿರುವುದರಿಂದ ಈ ಪ್ರಾರಬ್ಧವು ತೊಲಗುತ್ತದೆ' ಎಂದೂ 'ಹಿಂದಿನ ಜನ್ಮಗಳಲ್ಲಿ ಮಾಡಿರುವ ಕರ್ಮಗಳ ಫಲವು ತಿಳಿಯಿತು. ಅಂಗೈಹುಣ್ಣಿಗೆ ಕನ್ನಡಿ ಏಕೆ? ರಾಗಿಯ ಪೈರಿನ ಮಧ್ಯೆ ಭತ್ತದ ಪೈರು ಎದ್ದುಕಾಣುವಂತೆ ಕಾಣುತ್ತಿದೆ' ('ತೊಲಿ ಜನ್ಮಮುನ', ಬಿಲಹರಿ ರಾಗ) 'ಕರ್ಮಗಳನ್ನು ಪರಿಹರಿಸುವ ಪುಣ್ಯಕರ್ಮಗಳೇನು ಪೇಟೆಯಲ್ಲಿ ಬೆಲೆಗೆ ಸಿಗುತ್ತವೆಯೆ? 'ರಾಮನೇ ನಿನಗೆ ಆಯಾಸವುಂಟುಮಾಡಿ ಪ್ರಯೋಜನವೇನು?' ('ತೊಲಿನಚೇಸಿನ' ಶುದ್ಧಬಂಗಾಳ ರಾಗ) ಆ ಕರ್ಮಗಳನ್ನು ಅನುಭವಿಸಿ ತೀರಿಸಿದರೆ ಆಯಿತು ಎಂದು ಚಮತ್ಕಾರವಾಗಿ ಮನಸ್ಸಿಗೆ ಸಂಬೋಧಿಸಿ ಹೇಳುತ್ತಾರೆ. ಪುಣ್ಯಕರ್ಮಗಳನ್ನು ಆರ್ಜಿಸುವ ರೀತಿಯನ್ನೂ ('ಸಮಯಮುದೆಲಿಸಿ' ಅಸಾವೇರಿ ರಾಗ) ಕೃತಿಯಲ್ಲಿ ಹೇಳುತ್ತಾರೆ. 'ಸಮಯವನ್ನು ತಿಳಿದು ಪುಣ್ಯವನ್ನಾರ್ಜಿಸದ ಮೂರ್ಖನು ಇದ್ದರೇನು? ಸತ್ತರೇನು? ಹುಚ್ಚನ ಮುಂದೆ ಕವಿತೆ ಓದಿದರೇನು? ಬಿಟ್ಟರೇನು? ತುರುಕರ ಬೀದಿಯಲ್ಲಿ ಬ್ರಾಹ್ಮಣನಿಗೆ ಪಾನಕಪೂಜೆ ನಡೆದರೇನು ನಡೆಯದಿದ್ದರೇನು? ಈ ನರಜನ್ಮವೆತ್ತಿದ ಬಳಿಕ ಪುಣ್ಯಾರ್ಜನೆಗೆ ಅದನ್ನು ವಿನಿಯೋಗಿಸಬೇಕು' ಎನ್ನುತ್ತಾರೆ.

### ನಿತ್ಯಾನಿತ್ಯ ವಿವೇಕ

ಪರಮಾತ್ಮನು ನಿತ್ಯನೂ, ಅದ್ವಯನೂ, ಅಖಂಡನೂ ಚಿದೇಕರೂಪನೂ ಆಗಿದ್ದಾನೆಂಬುದು ಸ್ಮೃತಿಗಳ ಮತ. ಜ್ಞಾನಿಯಾದವನು ಈ ನಿತ್ಯತ್ವವನ್ನೂ ಹಾಗೆಯೇ ಅಸದ್ವಸ್ತುಗಳನ್ನು ವಿಂಗಡಿಸಿ ಅನಾತ್ಮ ವಸ್ತುಗಳಿಂದ ಮುಕ್ತನಾಗಬೇಕು. ಆದ್ದರಿಂದ ನಿತ್ಯಾನಿತ್ಯಗಳ, ಸತ್ಯಾಸತ್ಯಗಳ ವಿವೇಕವಿಲ್ಲದೆ ಅವನಿಗೆ ಬ್ರಹ್ಮಜ್ಞಾನವು ಪ್ರಾಪ್ತವಾಗಲಾರದು. ಆದ್ದರಿಂದ ಅಂತಹ ವಿವೇಕವನ್ನು ನೀಡಲು ತ್ಯಾಗರಾಜರು ಪರಮಾತ್ಮನನ್ನು ಹೀಗೆ ಕೋರುತ್ತಾರೆ:

'ನಿತ್ಯಾನಿತ್ಯಮುಲನು ಬೋಧಿಂಚಿ' (ನಿತ್ಯಾನಿತ್ಯಗಳನ್ನು ಬೋಧಿಸಿ)'ಕೃತ್ಯಾಕೃತ್ಯಮುಲನು ತೆಲಿಪಿಂಚಿ' (ಕೃತ್ಯಾಕೃತ್ಯಗಳನ್ನು ತಿಳಿಸಿ ಕೊಟ್ಟು) 'ಪ್ರತ್ಯೇಕುಡು ನೀವನಿ ಕನಿಪಿಂಚಿ' (ಅಸದ್ವಸ್ತುವಿಗಿಂತ ನೀನು ಪ್ರತ್ಯೇಕನೆಂಬುದನ್ನು ತೋರಿಸಿ) 'ಭೃತ್ಯುಡೈನ ತ್ಯಾಗರಾಜುನಿ ಚೈ। ಪಟ್ಟಿವಿಡುವರಾದು' (ಭೃತ್ಯನಾದ ತ್ಯಾಗರಾಜನ ಕೈಹಿಡಿದು ಬಿಡದಿರು) ( ಮಂಜರಿ ರಾಗದ ಕೃತಿ)

ಹೀಗೆ ಶ್ರೀತ್ಯಾಗರಾಜರ ಕೃತಿಗಳು ಸ್ಮೃತಿ–ಶಾಸ್ತ್ರ–ಪುರಾಣಾಗಮಗಳ ಸಾರ. ನುಡಿದಂತೆ ನಡೆದು ಕಡೆಗೆ ಸಂನ್ಯಾಸ ದೀಕ್ಷೆಯನ್ನು ಪಡೆದು ವಿದೇಹಮುಕ್ತಿಯನ್ನು ಹೊಂದಿದ ಶ್ರೀ ತ್ಯಾಗರಾಜರ ಕೃತಿಗಳನ್ನು ವಾಲಾಜಪೇಟೆ ವೆಂಕಟರಮಣ ಭಾಗವತರ ಮೊಮ್ಮಕ್ಕಳಾದ ರಾಮಸ್ವಾಮಿ ಭಾಗವತರು 'ಶ್ರೀತ್ಯಾಗಬ್ರಹ್ಮೋಪನಿಷತ್' ಎಂದೇ ಕರೆದಿದ್ದಾರೆ. ಉಪನಿಷತ್ತುಗಳಿಗೆ ಸಮವಾದ ಈ ಕೃತಿಗಳಲ್ಲಿ ಕೆಲವನ್ನು ಸಾಂದರ್ಭಿಕವಾಗಿ ವಿವರಣೆಯನ್ನು ಇಲ್ಲಿ ಮಾಡಲಾಗಿದೆ. ಈ ಕೃತಿಗಳ ಸಮಷ್ಟಿಯ ಅಧ್ಯಯನವೂ, ಅಧ್ಯಯನ ಪುಷ್ಟಿಯಿಂದ ಅರ್ಥವತ್ತಾಗಿ ಅನುಭವಿಸಿ ಪ್ರದರ್ಶಿಸುವ ಗಾಯನವೂ ಮುಮುಕ್ಷುಗಳಿಗೆ ಮೋಕ್ಷಪ್ರದವಲ್ಲವೆ? ಸಂಗೀತಕ್ಕಾಗಿ ಸಂಗೀತವೆಂದೂ ಸಂಗೀತಕ್ಕೆ ಸಾಹಿತ್ಯದ ಮೈತ್ರಿಯ ಅಗತ್ಯವೇ ಇಲ್ಲವೆಂದೂ ಭಾವಿಸುವವರಿಗೆ ಈ ರಚನೆಗಳು ಕೇವಲ ಕಛೇರಿಯಲ್ಲಿ ಪಲುಕುವ ತುಣುಕುಗಳಾದೀತು! ಆದರೆ ತ್ಯಾಗರಾಜರ ಮಾತನ್ನೇ ಈ ಲೇಖನಕ್ಕೆ ಭರತವಾಕ್ಯವಾಗಿಸುವುದಾದರೆ 'ಸಂಗೀತ ಜ್ಞಾನ ವಿಹೀನುಲಕು ಮೋಕ್ಷಮು ಗಲದಾ?' ❈

### ತ್ಯಾಗರಾಜರನ್ನು ಅನುಗ್ರಹಿಸಿದ ನಾರದರು

**ಒಂದು ದಿನ ಬೆಳಗಿನ ಹೊತ್ತು ಸಂನ್ಯಾಸಿಯೊಬ್ಬನು ತ್ಯಾಗರಾಜರ ಮನೆಗೆ ಬಂದ. ಅವನನ್ನು ತ್ಯಾಗರಾಜರು ಉಪಚರಿಸಿ, ಊಟ ಮಾಡಿ ವಿಶ್ರಾಂತಿ ಪಡೆಯಲು ಹೇಳಿದರು. ಆತ ಸ್ನಾನ ಮಾಡಿ ಬರುವುದಕ್ಕಾಗಿ ಕಾವೇರೀತೀರಕ್ಕೆ ಹೋದ; ಹೋಗುವಾಗ ತನ್ನ ಬಳಿ ಇದ್ದ ತಾಳೆಯ ಗ್ರಂಥವನ್ನು ಅಲ್ಲೇ ಬಿಟ್ಟು ಹೋದ. ಎಷ್ಟು ಹೊತ್ತಾದರೂ ಆತ ಮರಳಿ ಬರಲಿಲ್ಲ; ತ್ಯಾಗರಾಜರು ಚಿಂತಿತರಾದರು. ಅವನಿಗಾಗಿ ಕಾಯುತ್ತ ರಾತ್ರಿಯವರೆಗೂ ಉಪವಾಸವಿದ್ದು ನಿದ್ರಿಸಿದರು. ಅಂದು ಕನಸಿನಲ್ಲಿ ಆ ಸಂನ್ಯಾಸಿ ದರ್ಶನವಿತ್ತು, ತಾನು ನಾರದನೆಂದೂ, ತಾಳೆಯ ಗ್ರಂಥವನ್ನು ಕೊಡಲೆಂದೇ ಅಲ್ಲಿಗೆ ಬಂದಿದ್ದಾಗಿಯೂ ತಿಳಿಸಿದನು. ತ್ಯಾಗರಾಜರು ತಾಳೆ ಗ್ರಂಥವನ್ನು ನೋಡಿದರು; ಅದು 'ಸ್ವರಾರ್ಣವಂ' ಎಂಬ ಸಂಗೀತ ಶಾಸ್ತ್ರದ ಗ್ರಂಥವಾಗಿತ್ತು. ಅದರಲ್ಲಿ ಬರೆದಿದ್ದ ಅನೇಕ ಹೊಸ ರಾಗ, ತಾಳಗಳಲ್ಲಿ ಕೃತಿ ರಚನೆ ಮಾಡಿದ ತ್ಯಾಗರಾಜರು ತಮ್ಮ ಶಿಷ್ಯಂದಿರಿಗೂ ಅದನ್ನು ಕಲಿಸಿ, ಪ್ರಚುರ ಪಡಿಸಿದರು.**

# ಮುತ್ತುಸ್ವಾಮಿ ದೀಕ್ಷಿತರು ಮತ್ತು ಅಧ್ಯಾತ್ಮ

ವಿದ್ವಾನ್ ವಿ. ನಂಜುಂಡಸ್ವಾಮಿ

ಶ್ರೇಷ್ಠ ಸಂಗೀತಗಾರರೂ, ಶಾಸ್ತ್ರಜ್ಞರೂ, ವೇದಾಂತಿಗಳೂ, ಯೋಗಿಗಳೂ, ಅಸಾಧಾರಣ ಕವಿಗಳೂ ಆಗಿದ್ದವರು ದೀಕ್ಷಿತರು. ಅವರ ಜೀವನ, ಸಂಗೀತ ಹಾಗೂ ಸಾಧನೆ ಇವುಗಳ ಬಗ್ಗೆ ಬರೆದಿರುವ ಲೇಖಕರು ಪ್ರಸಿದ್ಧ ಸಂಗೀತ ಶಾಸ್ತ್ರಜ್ಞರು ಹಾಗೂ ವೀಣಾವಾದಕರು. ಸಂಗೀತ, ಶ್ರೀವಿದ್ಯೆ ಮೊದಲಾದ ವಿಷಯಗಳಲ್ಲಿ ಅನೇಕ ಗ್ರಂಥಗಳನ್ನು ಬರೆದಿರುವ ಅವರು ಹಲವು ಮಂದಿ ಸಂಗೀತ ಸಂಶೋಧನ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಬ್ಯಾಂಕ್ ಉದ್ಯೋಗದಲ್ಲಿದ್ದು ಸ್ವಯಂ ನಿವೃತ್ತಿ ಪಡೆದಿರುವ ಅವರು ಪ್ರಸ್ತುತ ಪೂರ್ಣಾವಧಿ ಸಂಗೀತ, ಸಾಹಿತ್ಯ , ವೇದಾಂತ ಪ್ರಚಾರದಲ್ಲಿ ಸಕ್ರಿಯರಾಗಿ ತೊಡಗಿಕೊಂಡಿದ್ದಾರೆ.



**ಕ**ರ್ನಾಟಕ ಸಂಗೀತ ತ್ರಿಮೂರ್ತಿಗಳೆಂದು ಆರಾಧ್ಯಪುರುಷರಾದ ಶ್ಯಾಮಾಶಾಸ್ತ್ರಿಗಳು (೧೭೬೨-೧೮೨೭), ತ್ಯಾಗರಾಜರು (೧೭೬೭-೧೮೪೭) ಮತ್ತು ಮುತ್ತುಸ್ವಾಮಿ ದೀಕ್ಷಿತರು (೧೭೭೫-೧೮೩೫) ಸಮಕಾಲೀನರು ಮತ್ತು ಸಮಸ್ಥಳೀಯರು ಎಂಬುದು ಕೇವಲ ಕಾಕತಾಳೀಯವಲ್ಲವೆಂಬುದನ್ನು ಹಿನ್ನೋಟ ಒದಗಿಸುವ ಅನುಕೂಲತೆಯಿಂದ ತೀರ್ಮಾನಿಸಬಹುದು; ಕರ್ನಾಟಕ ಸಂಗೀತ ವಾಹಿನಿ ಆ ವೇಳೆಗೆ ತಂಜಾವೂರು ಜಿಲ್ಲೆಯ ಕಾವೇರಿ ತೀರದ ತಿರುವಾರೂರಿನಲ್ಲಿ ಮಡುಗಟ್ಟಿ, ತನ್ನ ನೂತನ ಅಭಿವ್ಯಕ್ತಿಗೆ ಈ ನಾದಯೋಗಿಗಳನ್ನು ವರಿಸಿತೋ ಎಂಬಂತೆ. ಸಂಗೀತದ ಲಯಭಾಗದ ವೈಖರಿಗೆ ಶ್ಯಾಮಾಶಾಸ್ತ್ರಿಗಳ ಕೃತಿಗಳೂ, ಭಾವರಾಗ ಸಮನ್ವಯತೆಗೆ ತ್ಯಾಗರಾಜರ ಕೃತಿಗಳೂ, ರಾಗರೂಪ ವೈಭವಕ್ಕೆ ದೀಕ್ಷಿತರ ಕೃತಿಗಳೂ ಅದ್ವಿತೀಯ ನಿದರ್ಶನಗಳು.

ಸಂಗೀತ ತ್ರಿಮೂರ್ತಿಗಳಲ್ಲಿ ಕಿರಿಯವರಾದ ಮುತ್ತುಸ್ವಾಮಿ ದೀಕ್ಷಿತರು ತಿರುವಾವೂರಿನಲ್ಲಿ ಮನ್ಮಥನಾಮ ಸಂವತ್ಸರ ಫಾಲ್ಗುಣ ಮಾಸ ಕೃತ್ತಿಕಾ ನಕ್ಷತ್ರ ಭಾನುವಾರದಂದು (೨೪-೦೩-೧೭೭೫) ರಾಮಸ್ವಾಮಿ ದೀಕ್ಷಿತರು ಮತ್ತು ಸುಬ್ಬಲಕ್ಷ್ಮಮ್ಮ ದಂಪತಿಗಳ ಪುತ್ರರಾಗಿ ಜನಿಸಿದರು. ನಲವತ್ತನೇ ವಯಸ್ಸಿನ ತನಕವೂ ಸಂತಾನವಿಲ್ಲದ ದೀಕ್ಷಿತ ದಂಪತಿಗಳಿಗೆ ಚಿದಂಬರನಾಥಸ್ವಾಮಿಯೆಂಬ ಸಂನ್ಯಾಸಿ 'ಶ್ರೀವಿದ್ಯಾ' ಮಂತ್ರ ಉಪದೇಶಿಸಿ ವೈದೀಶ್ವರನ್ ಕೋಯಿಲ್ ಎಂಬ ಸ್ಥಳದ ಅಧಿದೇವತೆ ಬಾಲಾಂಬಿಕಾ ದೇವಿಯನ್ನು ಪೂಜಿಸಲು ಆದೇಶವಿತ್ತರು. ರಾಮಸ್ವಾಮಿ ದೀಕ್ಷಿತರಿಗೆ ಕನಸಿನಲ್ಲಿ ದೇವಿಯೇ ಪ್ರತ್ಯಕ್ಷಳಾಗಿ ಮುತ್ತಿನಹಾರ ಕರುಣಿಸಿದಂತೆ ಕಂಡಿತು. ದೀಕ್ಷಿತ ದಂಪತಿಗಳ ವರಪುತ್ರನ ಜನನ ಸುಬ್ರಮಣ್ಯಸ್ವಾಮಿಯ ಜನ್ಮತಾರೆಯಾದ ಕೃತ್ತಿಕಾ ನಕ್ಷತ್ರದಲ್ಲಿ ಆದುದರಿಂದ ಈತನಿಗೆ ಮುತ್ತುಸ್ವಾಮಿಯೆಂದು ನಾಮಕರಣ ಮಾಡಿದರು. ಮುಂದೆ ಈ ದಂಪತಿಗಳಿಗೆ ಚಿನ್ನಸ್ವಾಮಿ ಮತ್ತು ಬಾಲುಸ್ವಾಮಿ ಎಂಬ ಇಬ್ಬರು ಗಂಡುಮಕ್ಕಳೂ, ಅರ್ಥವತ್ತಾಗಿ ದೇವಿಯ ಹೆಸರೇ ಕೊಡಲ್ಪಟ್ಟ ಬಾಲಾಂಬಿಕಾ ಎಂಬ ಮಗಳೂ ಹುಟ್ಟಿದರು. ಈ ಎಲ್ಲ ವಿವರಗಳೂ ಮುತ್ತುಸ್ವಾಮಿ ದೀಕ್ಷಿತರ ಕಲ್ಯಾಣಿ ರಾಗದ ಚಿರಪರಿಚಿತ 'ಭಜರೇ ರೇ ಚಿತ್ತ ಬಾಲಾಂಬಿಕಾಮ್' ಕೃತಿಯಲ್ಲಿ ಸೂಚ್ಯವಾಗಿ ಬಂದಿವೆ.

ರಾಮಸ್ವಾಮಿ ದೀಕ್ಷಿತರು ಸ್ವತಃ ವಾಗ್ಗೇಯಕಾರರು ಮತ್ತು ವೈಣಿಕರು. ಇವರ ಮಾತೃಭಾಷೆ ತಮಿಳು. ಆದರೆ ಇವರು ತಮ್ಮ ಮಕ್ಕಳಿಗೆ ಆ ಕಾಲದಲ್ಲಿ ಸಹಜವಾಗಿದ್ದ ಸಂಸ್ಕೃತ ಸಾಹಿತ್ಯ ಶಾಸ್ತ್ರಗಳ ವ್ಯಾಸಂಗ ಮತ್ತು ವೇದಾಧ್ಯಯನ ಏರ್ಪಡಿಸಿದರು. ಜೊತೆಗೆ ಶ್ರೀಪುರಂದರದಾಸರ ಕಾಲದಿಂದ ಕರ್ನಾಟಕ ಸಂಗೀತದಲ್ಲಿ ಅನುಸರಿಸಲಾಗುತ್ತಿದ್ದ ಪ್ರಯೋಗ ವಿಧಾನದಲ್ಲಿ ಶಿಕ್ಷಣವನ್ನೂ ನೀಡಿದರು. ಇತ್ತ ಸಂಗೀತ ಶಾಸ್ತ್ರದಲ್ಲಿ ಪ್ರಾಚೀನ ಹಾಗೂ ಮಧ್ಯಕಾಲೀನ ಗ್ರಂಥಕಾರರು ನಿರೂಪಿಸಿದ್ದಂತೆ ಮಾತ್ರವೇ ಅಲ್ಲದೆ, ಆಧುನಿಕ ಕರ್ನಾಟಕ ಸಂಗೀತವನ್ನು ಪ್ರತಿಪಾದಿಸಿದ ವೆಂಕಟಮಖಿ ಪದ್ಧತಿಯಲ್ಲಿಯೂ ಮಗನಿಗೆ (ಮುತ್ತುಸ್ವಾಮಿ) ತಂದೆ ಪಾಠ ಮಾಡಿದರು. ಹೀಗೆ ಪ್ರಾಚೀನ ಪರಂಪರೆ ಮತ್ತು ಅರ್ವಾಚೀನ ಸಂಪ್ರದಾಯಗಳ ಭವ್ಯ ಉತ್ಪನ್ನವಾಗಿ ಇವರು ವಿಕಸಿಸಿದರು.

ಮುತ್ತುಸ್ವಾಮಿ ದೀಕ್ಷಿತರು ವೀಣಾವಾದನದೊಂದಿಗೆ ಹಾಡುವ ಅಭ್ಯಾಸವನ್ನೂ ಇಟ್ಟುಕೊಂಡಿದ್ದರು. ವೀಣೆ ಗಮಕಪ್ರಧಾನ

ವಾದ್ಯ. ಅದರಲ್ಲೂ ವಿಳಂಬಕಾಲಕ್ಕೆ ಹೇಳಿ ಮಾಡಿಸಿದ್ದು. ಎಂದೇ ದೀಕ್ಷಿತರಿಗೆ ವಿಳಂಬ ನಡೆಯಲ್ಲೂ ಗಮಕ ಪ್ರಯೋಗಗಳಲ್ಲಿಯೂ ಸಹಜ ಆಸಕ್ತಿ ಮತ್ತು ಪ್ರಭುತ್ವ. ಈ ಗಮಕ ವಿಶೇಷ ಅವರ ಕೃತಿಗಳ ಲಾವಣ್ಯ ನಿಧಿಯಾಗಿ ಅವುಗಳಿಗೆ ವಿಶೇಷ ಸೌಂದರ್ಯ ನೀಡಿದೆ. ಅವರ ಎಲ್ಲ ಕೃತಿಗಳೂ ವಿಳಂಬ ಕಾಲದಲ್ಲಿದ್ದು ಕೊನೆಯ ಚರಣ ಗಳಲ್ಲಿ ಮಾತ್ರ ಕೆಲವು ಮಧ್ಯಮ ಕಾಲದ ಸಂಚಾರದಿಂದ ಕೂಡಿವೆ. ವಿಳಂಬ ಕಾಲದಲ್ಲಿ ರಾಗದ ಸ್ವರೂಪ ವೈಭವ, ಸೌಂದರ್ಯ ಮತ್ತು ಸೂಕ್ಷ್ಮ ಛಾಯೆ ಬಿಟ್ಟು ಹೋಗದ ಹಾಗೆ ರಾಗಭಾವ ತುಂಬಿ ತುಳುಕುವುದು. ಇವರ ಕೃತಿಗಳಲ್ಲಿ ಗಮಕಗಳು ಘನಿಸಿರು ವಂತೆ ಮಿಕ್ಕ ಯಾವ ವಾಗ್ಗೇಯಕಾರರರ ರಚನೆಗಳಲ್ಲಿಯೂ ಘನೀಕರಿಸಿರುವುದಿಲ್ಲವೆಂಬುದು ನಿರ್ವಿವಾದ.

ತಂದೆಯ ಗುರುಗಳಾದ ಚಿದಂಬರನಾಥಯೋಗಿಗಳೇ ಮಗ ನಿಗೂ ಶ್ರೀವಿದ್ಯಾ ಉಪಾಸನಾ ದೀಕ್ಷೆ ಕೊಟ್ಟು ತಂತ್ರ ವಿಧಿ ಪೂಜೆ ಯನ್ನೂ ಶಂಕರಾಚಾರ್ಯ ಪ್ರತಿಪಾದಿತ ರೀತಿಯಲ್ಲಿ ವೇದಾಂತ ವನ್ನೂ ಉಪದೇಶಿಸಿದರು. ದೀಕ್ಷಿತರು(ಮಗ) ತಮ್ಮ ಈ ಹಿರಿ ಗುರುಗಳ ಜೊತೆ ಕಾಶಿಯಲ್ಲಿ ಐದಾರು ವರ್ಷ ವೇದಾಂತಶಾಸ್ತ್ರ ಮತ್ತು ಸಂಗೀತಶಾಸ್ತ್ರ ಆಧ್ಯಯನ ಮಾಡಿದರು. ಈ ಅವಧಿಯಲ್ಲಿ ಗುರುಗಳ ಆದೇಶದಂತೆ ಒಮ್ಮೆ ಗಂಗೆಯಲ್ಲಿ ಮೂರು ನಾಲ್ಕು ಸೋಪಾನ ಇಳಿದಾಗ ದೇವನಾಗರೀ ಲಿಪಿಯಲ್ಲಿ 'ರಾಮ' ಎಂದು ಕೆತ್ತಿದ್ದ ವೀಣೆ ದೊರೆಯಿತು! ಅದನ್ನು ಗುರುಗಳಿಗೆ ಅರ್ಪಿಸಿದಾಗ ''ಇದು ಗಂಗಾದೇವಿ ನಿನಗೆ ಕರುಣಿಸಿರುವ ಪ್ರಸಾದ'' ಎಂದು ಪುನಃ ಅವರಿಗೆ ಅದನ್ನು ಆಶೀರ್ವಾದ ಮಾಡಿ ನೀಡಿ, ತಾವು ಗಂಗೆಯಲ್ಲಿ ಮುಳುಗಿ ನಿರ್ಯಾಣ ಹೊಂದಿದರು. ಈ ವೀಣೆ ಈಗಲೂ ಅವರ ಪರಂಪರೆಯ ಅಂಬಿ ದೀಕ್ಷಿತರ ಮಗ ಬಾಲು ಸ್ವಾಮಿಯವರ ಬಳಿಯಲ್ಲಿದೆ.

ಅಂದಿನ ದಿನಗಳಲ್ಲಿ ಈಸ್ಟ್ ಇಂಡಿಯಾ ಕಂಪನಿ ಮದ್ರಾಸಿನ ಫೋರ್ಟ್ ಸೆಂಟ್ ಜಾರ್ಜ್‌ನಲ್ಲಿ ನುಡಿಸುತ್ತಿದ್ದ ವಾದ್ಯಮೇಳದ ಪ್ರಭಾವ ದೀಕ್ಷಿತರ ಕುಟುಂಬದವರ ಮೇಲೆ ಬಿದ್ದಿತು. ಪಿಟೀಲನ್ನು ಸಂಗೀತ ಕಛೇರಿಯಲ್ಲಿ ನಿರಂತರ ವಾದ್ಯವಾಗಿ ಬಳಸಿಕೊಳ್ಳುವುದು ಇದರ ತತ್‌ಕ್ಷಣದ ಲಾಭ. ದೀಕ್ಷಿತರ ಶಿಷ್ಯ ಪರಂಪರೆಗೆ ಸೇರಿ ದವರೇ ಮುಂದೆ ಕರ್ನಾಟಕ ಸಂಗೀತದಲ್ಲಿ ಪಿಟೀಲು ವಾದ್ಯವನ್ನು ಮೇಲಕ್ಕೇರಿಸಲು ಕಾರಣರಾದರೆಂಬುದನ್ನು ಇಲ್ಲಿ ನೆನೆಯ ಬಹುದು. ಪಿಟೀಲಿಗೆ ಹಿಂದೂಸ್ತಾನಿ ಸಂಗೀತದಲ್ಲಿ ಇದೇ ಅಂತಸ್ತು ಇಲ್ಲ ಎನ್ನುವುದು ಗೊತ್ತಿರುವ ಸಂಗತಿ.

ದೀಕ್ಷಿತರ ಕೃತಿಗಳನ್ನು ಪರಿಶೀಲಿಸಿದಾಗ ಅವು ಹಿಂದುಸ್ತಾನಿ ಸಂಗೀತದ ಪ್ರಭಾವಕ್ಕೊಳಗಾಗಿರುವುದು ತಿಳಿಯುತ್ತದೆ. ಕಾಶೀ ಕ್ಷೇತ್ರದಲ್ಲಿದ್ದಾಗ ಆ ಪದ್ಧತಿಯಲ್ಲಿ ಅಪಾರ ಪರಿಶ್ರಮ ಪಡೆದು ಹಿಂದೂಸ್ತಾನಿ ರಾಗಗಳನ್ನು ಮನನ ಮಾಡಿಕೊಂಡರು: ಯಮನ್ ಕಲ್ಯಾಣಿ ರಾಗದ 'ಜಂಬೂಪತೇ ಮಾಂ ಪಾಹಿ', ಹಮೀರ್ ಕಲ್ಯಾಣಿರಾಗದ 'ಪರಿಮಳ ರಂಗನಾಥಂ', ದ್ವಿಜಾವಂತಿ ರಾಗದ 'ಚೇತಶ್ರೀ ಬಾಲಕೃಷ್ಣಂ' ಮತ್ತು ಹಿಂದೂಸ್ಥಾನಿಯ ಬಸಂತ್ ರಾಗವನ್ನು ಹೋಲುವ ಮಾಳವ ಪಂಚಮ ರಾಗದ 'ವಾಸುದೇವ ಮುಪಾಸ್ಮಹೇ' ಮುಂತಾದ ಕೃತಿಗಳು ಕೆಲವು ಉದಾಹರಣೆಗಳು.

ದೀಕ್ಷಿತರ ವ್ಯಕ್ತಿತ್ವದಲ್ಲಿ ಭಕ್ತಿ ಅಂತರಗಂಗೆಯಂತೆ ಅಂತಃಪ್ರವಾಹಿ. ಇದನ್ನು ಅವರ ಕೃತಿಗಳಲ್ಲಿ ಗಮನಿಸಬಹುದು. ಅವರು ಅಚ್ಚ ಸಂಸ್ಕೃತದಲ್ಲಿ ಸುಮಾರು ನಾನೂರು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ರಾಗ ಸ್ವಚ್ಛವಾಗಿ, ಖಚಿತವಾಗಿ ಮತ್ತು ಸಂಪೂರ್ಣವಾಗಿ ಎರಕಗೊಂಡಿದೆ. ರಾಗ ಸಂಚಾರಗಳು ಮಂದ್ರ, ಮಧ್ಯ ಮತ್ತು ತಾರಸ್ಥಾಯಿಗಳಲ್ಲಿ ವ್ಯಾಪಿಸಿ ಅಪೂರ್ವ ಆನಂದ ನೀಡುತ್ತವೆ. ಸಾಹಿತ್ಯ ಬಿಟ್ಟು ಕೃತಿಯನ್ನು ಅಕಾರದಲ್ಲಿ ವಿಸ್ತರಿಸಿದರೆ ಅದು ರಾಗಾಲಾಪನೆ. ಇದೇ ದೀಕ್ಷಿತರ ಕೃತಿಗಳ ಮುಖ್ಯ ಆಕರ್ಷಣೆ. ಇವರ ರಚನೆಗಳ ಪೈಕಿ ಹೆಚ್ಚಿನವು ತ್ಯಾಗರಾಜರ ರಚನೆಗಳಂತೆ ಸರಳ ವಾದ ಆದಿ ಮತ್ತು ರೂಪಕತಾಳಗಳಲ್ಲಿವೆ. ಶ್ಯಾಮಾಶಾಸ್ತ್ರಿಗಳ ರಚನೆಗಳು ಹೀಗಲ್ಲ: ಇವು ಹೆಚ್ಚಾಗಿ ಮಿಶ್ರಛಾಪು ತಾಳಗಳಲ್ಲಿವೆ. ದೀಕ್ಷಿತರ ಕೃತಿಗಳಲ್ಲಿ ಸಾಹಿತ್ಯದ ಬಿಕ್ಕಟ್ಟು, ಪದ-ಲಯಗಳ ಚಮತ್ಕಾರ, ರಾಗ ಮುದ್ರೆ, 'ಗುರುಗುಹ' ಅಂಕಿತ ಅರ್ಥವತ್ತಾಗಿ ಬರುವುದು. ಜೊತೆಗೆ ಒಂದು ಕ್ರಮ, ನಿಯಮ, ತತ್ತ್ವ ಪ್ರತಿ ಪಾದನೆ ಮುಂತಾದವೂ ವೀಣಾವಾದನಕ್ಕೆ ಹೇಳಿ ಮಾಡಿಸಿದಂಥ ಗಮಕಯುಕ್ತ ಧಾತುಗಳೂ ಸಮೃದ್ಧವಾಗಿವೆ. ತೋಡಿ ಮುಂತಾದ ಪ್ರಸಿದ್ಧ ರಾಗಗಳಲ್ಲದೆ ಪ್ರಾಚೀನರಾಗಗಳಾದ ಮಂಗಳ ಕೈಶಿಕಿ ಯಲ್ಲಿ 'ಶ್ರೀ ಭಾರ್ಗವೀ', ಘಂಟಾರಾಗದಲ್ಲಿ 'ಶ್ರೀ ಕಮಲಾಂಬಿಕೆ ಅವಾವ ಶಿವೇ', ನಾರಾಯಣಗೌಳ ರಾಗದಲ್ಲಿ 'ಶ್ರೀ ರಾಮಂ ರವಿ ಕುಲಾಬ್ಧಿ ಸೋಮಂ' ಕೃತಿಗಳನ್ನು ರಚಿಸಿದ್ದಾರೆ. ಭೈರವಿ ರಾಗದ 'ಬಾಲಗೋಪಾಲ' ಕೃತಿಯಲ್ಲಿ 'ವೈಣಿಕ ಗಾಯಕ ಗುರುಗುಹ ನುತ' ಎಂದು ಅರ್ಥಪೂರ್ಣವಾಗಿ ಸ್ವವಿವರ ಹಾಗೂ ಅಂಕಿತವನ್ನು ಪ್ರಕಟಿಸಿದ್ದಾರೆ.

ಪ್ರಾಚೀನ ರಾಗಗಳ ಗುಣಲಕ್ಷಣ ತಿಳಿಯಬೇಕಾದರೆ ದೀಕ್ಷಿತರ ಕೃತಿಗಳಿಗೇ ಶರಣು ಹೋಗಬೇಕು. ಇವರು ಕೈ ಆಡಿಸಿದ ಕೆಲವು ಅಪರೂಪ ರಾಗಗಳ ಕೃತಿಗಳೆಂದರೆ ಮಾಹುರಿಯ 'ಮಾಮವ ರಘುವೀರ', ಧೌತಪಂಚಮದ 'ಮಾತಂಗೀ ಮರಕತಾಂಗಿ', ನಾಸಾಮಣಿಯ 'ಶ್ರೀರಮಾಂ ಸರಸ್ವತಿ', ದ್ವಿಜಾವಂತಿಯ 'ಚೇತ ಶ್ರೀ ಬಾಲಕೃಷ್ಣಂ', ರಸಮಂಜರಿಯ 'ಶೃಂಗಾರ ರಸಮಂಜರಿ', ಝಾಲವರಾಳಿಯ 'ಮಾಮವ ಮೀನಾಕ್ಷಿ' ಸ್ತವರಾಜ ರಾಗದ 'ಮಧುರಾಂಬಾಂ ಭಜರೇ' ಇತ್ಯಾದಿ.

ದೀಕ್ಷಿತರಿಗೆ ದೇವದೇವಿಯರ ಸ್ತೋತ್ರರೂಪಗಳಾದ ಲಲಿತಾ ಸಹಸ್ರನಾಮ, ಲಲಿತಾತ್ರಿಶತೀ, ಶಂಕರಾಚಾರ್ಯರ ಸೌಂದರ್ಯ ಲಹರೀ, ಶಿವಾನಂದಲಹರೀ ಮುಂತಾದ ಸಂಸ್ಕೃತ ರಚನೆಗಳು ಅರ್ಥವತ್ತಾಗಿ ಕಂಠಪಾಠವಾಗಿದ್ದವು. ಸಹಜವಾಗಿಯೇ ಅವರ ಕೃತಿಗಳಲ್ಲಿ ಇವುಗಳ ಪ್ರಭಾವ ಎದ್ದು ಕಾಣುತ್ತದೆ. ಕೆಲವು ನಿದ ರ್ಶನಗಳನ್ನು ಕೊಡುವುದಾದರೆ ಮೋಹನ ರಾಗದ 'ಕಾದಂಬರೀ

ಪ್ರಿಯಾಯೈ' ಕೃತಿಯಲ್ಲಿ ಬರುವ 'ಸದಾಚಾರ ಪ್ರವರ್ತಿಕಾಯೈ'; ಎಂಬ ವರ್ಣನೆ ಲಲಿತಾಸಹಸ್ರನಾಮದ ನಾಮವನ್ನು ಪದಶಃ ಹೋಲುತ್ತದೆ. ಕಮಲಾ ಮನೋಹರಿ ರಾಗದ 'ಕಂಜದಳಾಯ ತಾಕ್ಷಿ' ಕೃತಿಯಲ್ಲಿ 'ಏಕಾನೇಕಾಕ್ಷರಿ' ಎಂಬುದು ಲಲಿತಾತ್ರಿಶತಿಯನ್ನು ಆಧರಿಸಿದೆ. ವೇಗವಾಹಿನಿ ರಾಗದ 'ವೀಣಾಪುಸ್ತಕ ಧಾರಿಣೀಂ' ಕೃತಿಯಲ್ಲಿ 'ಜಟಾಜೂಟಮಕುಟಂ' ಎಂಬ ಪದವನ್ನು ಸೌಂದರ್ಯಲಹರಿಯ ಶ್ಲೋಕದಿಂದ ತೆಗೆದುಕೊಂಡಿರುವುದನ್ನು ಗಮನಿಸಬಹುದು.

ಸಾಹಿತ್ಯದಲ್ಲಿ ನಾದಕ್ಕೆ ದೀಕ್ಷಿತರು ನೀಡಿರುವ ಪ್ರಾಧಾನ್ಯವನ್ನು ಇವರು ಬಳಸಿರುವ ಅಲಂಕಾರ ವೈವಿಧ್ಯದಲ್ಲಿ ತಿಳಿಯುತ್ತೇವೆ. ಸಾಮಾನ್ಯವಾಗಿ ಶಾಸ್ತ್ರೀಯ ಸಂಗೀತದ ರಚನಕಾರರು ಬಳಸುತ್ತಿದ್ದ ಪ್ರಾಸಗಳಲ್ಲದೆ ಗೋಪುಚ್ಛ ಮತ್ತು ಶ್ರೋತೋವಾಹ ಅಲಂಕಾರಗಳನ್ನು ತಮ್ಮ ಕೃತಿಗಳಲ್ಲಿ ಉಪಯೋಗಿಸಿದವರು ಇವರೊಬ್ಬರೇ. ಗೋಪುಚ್ಛ ರಚನೆಯಲ್ಲಿ ಅಕ್ಷರಗಳು ಕ್ರಮವಾಗಿ ಮತ್ತು ಏಕಪ್ರಕಾರವಾಗಿ ಕಡಿಮೆಯಾಗುತ್ತ ಬರುತ್ತವೆ. 'ಶ್ರೋತೊವಾಹ'ದಲ್ಲಿ ತದ್ವಿರುದ್ಧ. ಆನಂದಭೈರವಿ ರಾಗದ 'ತ್ಯಾಗರಾಜ ಯೋಗ ವೈಭವಂ' ಕೃತಿಯಲ್ಲಿ ಈ ಎರಡೂ ಬಗೆಯ ಅಲಂಕಾರಗಳನ್ನು ಕಾಣಬಹುದು. ಪಲ್ಲವಿಯ ಸಾಹಿತ್ಯ 'ತ್ಯಾಗರಾಜ ವೈಭವಂ' ಗೋಪುಚ್ಛಕ್ಕೆ ಉದಾಹರಣೆ: ತ್ಯಾಗರಾಜವೈಭವಂ – ಅಗರಾಜಯೋಗ ವೈಭವಂ –ರಾಜಯೋಗ ವೈಭವಂ–ಯೋಗವೈಭವಂ–ವೈಭವಂ –ಭವಂ–ವಂ. ಅದೇ ಕೃತಿಯ ಚರಣ 'ಶ್ರೋತೋವಾಹ'ಕ್ಕೆ ಒಳ್ಳೆಯ ಉದಾಹರಣೆ. ಶಂ–ಪ್ರಕಾಶಂ– ಸಕಲತತ್ತ್ವ ಪ್ರಕಾಶಂ– ಶಕ್ತ್ಯಾದಿ ಸಕಲ ತತ್ತ್ವಸ್ವರೂಪಪ್ರಕಾಶಂ–ಶಿವ ಶಕ್ತ್ಯಾದಿ ಸಕಲ ತತ್ತ್ವ ಸ್ವರೂಪ ಪ್ರಕಾಶಂ. ಈ ಪ್ರಯೋಗಗಳಲ್ಲಿ ಸಾಹಿತ್ಯದ ಏರಿಳಿತ ಮತ್ತು ಗತಿ ರಾಗ ಮತ್ತು ತಾಳಗಳ ಚೌಕಟ್ಟಿನಲ್ಲಿ ಸುಂದರವಾಗಿ ಎರಕಗೊಂಡಿವೆ. ಇದೇ ಗುಣವನ್ನು ಶ್ರೀರಾಗದ 'ಶ್ರೀವರಲಕ್ಷ್ಮೀ' ಮತ್ತು ತರಂಗಿಣಿ ರಾಗದ 'ಮಾಯೇ' ಮುಂತಾದ ಕೃತಿಗಳಲ್ಲಿಯೂ ಕಾಣಬಹುದು. ಇವರ ಕೃತಿಗಳಲ್ಲಿ ಶಿವ–ಶಕ್ತಿಯರಂತೆ, ಅಂದರೆ ಪುರುಷ ಪ್ರಕೃತಿಗಳಂತೆ ಸಾಹಿತ್ಯ–ಸಂಗೀತಗಳ ಮಧುರ ಮಿಲನವಾಗಿದೆ.

ಸಂಗೀತದ ದೃಷ್ಟಿಯಿಂದ ಪರಿಶೀಲಿಸಿದರೆ ದೀಕ್ಷಿತರ ಕೃತಿಗಳಲ್ಲಿ ರಾಗರಸವೇ ಪ್ರವಹಿಸುವಂತಿದ್ದು, ಸಾಕ್ಷಾತ್ ರಾಗದೇವತಾ ಲಾಸ್ಯ ಮಾಡಿದ ಅನುಭವ ಮೂಡುತ್ತದೆ. ನೀಲಾಂಬರಿಯ 'ಅಂಬ ನೀಲಾಯತಾಕ್ಷಿ', ಬೇಗಡೆಯ 'ತ್ಯಾಗರಾಜಾಯ ನಮಸ್ತೇ', ಮಧ್ಯಮಾವತಿಯ 'ಧರ್ಮಸಂವರ್ಧಿನೀ', ಹಿಂದೋಳದ 'ನೀರಜಾಕ್ಷಿ', ಭೈರವಿಯ 'ಬಾಲಗೋಪಾಲ', ಕಾಂಭೋಜಿಯ 'ಶ್ರೀ ಸುಬ್ರಹ್ಮಣ್ಯಾಯ ನಮಸ್ತೇ', ಸಾವೇರಿಯ 'ಶ್ರೀರಾಜಗೋಪಾಲ' ತೋಡಿಯ 'ಶ್ರೀಕೃಷ್ಣಂ ಭಜ ಮಾನಸ' ವಸಂತದ 'ಹರಿಹರಪುತ್ರಂ' ಕಲ್ಯಾಣಿಯ 'ಶಿವಕಾಮೇಶ್ವರೀಂ' ಕನ್ನಡ ರಾಗದ 'ಶ್ರೀಮಾತೃ ಭೂತಂ' ಹಾಗೂ ನಾಯಕಿ ರಾಗದ 'ರಂಗನಾಯಕಂ' ಮುಂತಾದ ಕೃತಿಗಳು ರಾಗ ಗಾಂಭೀರ್ಯವನ್ನು ಎತ್ತಿ ತೋರಿಸುವ ದೀಕ್ಷಿತರ ಶ್ರೇಷ್ಠ ರಚನೆಗಳು.

ತಿರುತ್ತಣಿ ಕ್ಷೇತ್ರದಲ್ಲಿ ಸುಬ್ರಹ್ಮಣ್ಯಸ್ವಾಮಿಯನ್ನು ಆರಾಧಿಸಿದ ದೀಕ್ಷಿತರಿಗೆ ಸ್ವಾಮಿ ಒಬ್ಬ ವೃದ್ಧನ ರೂಪದಲ್ಲಿ ಕಾಣಿಸಿಕೊಂಡು ಅವರ ಬಾಯಿಗೆ ಕಲ್ಲುಸಕ್ಕರೆ ಚೂರು ಹಾಕಿ ಅದೃಶ್ಯನಾದ. ಒಡನೆಯೇ ದೀಕ್ಷಿತರಿಗೆ ಸಂಗೀತ ಕವಿತಾಶಕ್ತಿ ಉಂಟಾಗಿ ಕೂಡಲೇ ಆನಂದಪರವಶರಾಗಿ ಮೊತ್ತ ಮೊದಲನೆಯ ಕೃತಿಯಾದ ಮಾಯಾ ಮಾಳವಗೌಳ ರಾಗದ 'ಶ್ರೀನಾಥಾದಿ ಗುರುಗುಹೋ ಜಯತಿ' ಆವಿರ್ಭವಿಸಿತು. ಇದರಲ್ಲಿ ಗುರುವಂದನೆಯ ರೂಪದಲ್ಲಿ ದೀಕ್ಷಾ ಗುರುಗಳಾದ ಚಿದಂಬರನಾಥಯೊಗಿಗಳನ್ನು ಸ್ಮರಿಸಿದ್ದಾರೆ. ಪುರಂದರದಾಸರ ಕಾಲದಿಂದಲೂ ಕರ್ನಾಟಕ ಸಂಗೀತಾಭ್ಯಾಸಿಗಳಿಗೆ ಹೇಳಿಕೊಡುತ್ತಿರುವ ಮಾಯಾಮಾಳವಗೌಳದಲ್ಲೇ ಈ ಕೃತಿ ಇರುವುದೊಂದು ವಿಶೇಷ.

ದೀಕ್ಷಿತರು ವಿವಾದಿ ಮೇಳಗಳನ್ನು ಉಪಯೋಗಿಸಿ ಕೃತಿಗಳನ್ನು ರಚಿಸಿರುವುದು ಅವರ ರಾಗ ಕೌಶಲವನ್ನು ಎತ್ತಿ ತೋರಿಸುತ್ತದೆ. ಕನಕಾಂಬರ ರಾಗದ (ಕನಕಾಂಗಿ: ಒಂದನೇ ಮೇಳ) 'ಕನಕಾಂಬರಿ ಕಾರುಣ್ಯಾಮೃತ ಲಹರಿ', ಫೇನದ್ಯುತಿ ರಾಗದ (ಎರಡನೆಯ ಮೇಳ) 'ಶ್ರೀದಕ್ಷಿಣಾಮೂರ್ತಿಂ', ಕಲಾವತಿ ರಾಗದ (ಮೂವತ್ತೊಂದನೆಯ ಮೇಳ) 'ಕಲಾವತಿ ಕಮಲನವ ಯುವತಿ' ಮತ್ತು ವಂಶವತಿರಾಗದ (ಐವತ್ತನಾಲ್ಕನೆಯ ಮೇಳ) 'ಭಕ್ತವತ್ಸಲಂ' ಕೃತಿಗಳು ಉದಾಹರಣೆಗಳು.

ಸಮುದಾಯ ಕೀರ್ತನೆಗಳನ್ನು ರಚಿಸುವುದರಲ್ಲಿ ಅವರು ಸಿದ್ಧಹಸ್ತರು. ಗುರುಗುಹ ಕೃತಿಗಳು, ಪಂಚಭೂತಲಿಂಗ ಸ್ಥಳಗಳ ಕೀರ್ತನೆಗಳು, ಅಭಯಾಂಬಾ ವಿಭಕ್ತಿ ಕೃತಿಗಳು, ತಿರುವಾರೂರು ಶ್ರೀ ತ್ಯಾಗರಾಜಸ್ವಾಮಿಯನ್ನು ಕುರಿತ ಕೃತಿಗಳು, ನೀಲೋತ್ಪಲಾಂಬಾ ಕೃತಿಗಳು, ನವಗ್ರಹ ಕೃತಿಗಳು, ಮಧುರೈ ಮೀನಾಕ್ಷಿ ಅಮ್ಮನವರ ಮೇಲೆ ರಚಿಸಿರುವ ಎಂಟು ವಿಭಕ್ತಿ ಕೃತಿಗಳು ಮತ್ತು ಕಮಲಾಂಬ ನವಾವರಣಗಳು ಈ ಸಾಲಿಗೆ ಸೇರಿವೆ.

ದೀಕ್ಷಿತರು 'ಗಾಣಾಪತ್ಯ'ದಲ್ಲಿ ಅಂದರೆ ಗಣಪತಿಯನ್ನು ಪೂಜಿಸುವ ಶಾಸ್ತ್ರದಲ್ಲಿ ನಿಸ್ಸೀಮರು. ಅವರ ಗಣಪತಿ ಸ್ತುತಿಗಳು ಆ ಶಾಸ್ತ್ರದಲ್ಲಿ ಅವರಿಗಿದ್ದ ಪಾಂಡಿತ್ಯದ ದ್ಯೋತಕಗಳು. ಗಣೇಶನ ಪರವಾಗಿ ಅವರು ರಚಿಸಿರುವಷ್ಟು ಕೀರ್ತನೆಗಳನ್ನು ಬೇರೆ ಯಾರೂ ರಚಿಸಿಲ್ಲ. ಸುಮಾರು ಹದಿನಾರು ಕೀರ್ತನೆಗಳಿವೆ. ಅವನ್ನು 'ಷೋಡಶ ಗಣಪತಿ' ಕೀರ್ತನೆಗಳೆನ್ನುತ್ತಾರೆ. ಅವುಗಳ ರಾಗ ಮತ್ತು ಕೃತಿಗಳ ಹೆಸರು ಹೀಗಿವೆ: ಹಂಸಧ್ವನಿ– 'ವಾತಾಪಿ ಗಣಪತಿಂ' ಮಲಹರಿ–'ಪಂಚಮಾತಂಗ ಮುಖ ಗಣಪತಿಂ' ಶ್ರೀ –'ಶ್ರೀಮೂಲಾಧರಚಕ್ರ ವಿನಾಯಕಂ', ನಟನಾರಾಯಣಿ 'ಮಹಾ ಗಣಪತೇ ಪಾಲಯಾಶುಮಾಂ' ಶಂಕರಾಭರಣ–'ಶಕ್ತಿಸಹಿತ ಗಣ ಪತಿಂ', ಕಾಶಿರಾಮಕ್ರಿಯ– (ಪಂತುವರಾಳಿ, ಕಾಮವರ್ಧಿನಿ)

‘ಉಚ್ಛಿಷ್ಟಗಣಪತಿಂ’, ಪೂರ್ಣಷಡ್ಜ–‘ಗಣನಾಯಕಂ’, ರಾಗ ಚೂಡಾ ಮಣಿ–‘ಶ್ವೇತಗಣಪತಿಂ’, ಮೋಹನ– ‘ರಕ್ತಗಣಪತಿಂ’, ಆರಭಿ– ‘ಗಣರಾಜೇನ’,ಚಾಮರ(ಷಣ್ಮುಖಪ್ರಿಯ)–‘ಸಿದ್ಧಿವಿನಾಯಕಂ’, ವೇಗವಾಹಿನಿ(ಚಕ್ರವಾಕ)–‘ಗಜಾನನಯುತಂ’, ಬೇಗಡೆ– ‘ವಲ್ಲಭ ನಾಯಕಸ್ಯ’, ವರಾಳಿ– ‘ಲಂಬೋದರಾಯ’, ಈಶ ಮನೋಹರಿ– ‘ಶ್ರೀಗಣನಾಥಂ ಭಜರೇ’, ನವರೋಜು– ‘ಹಸಿತ ವದನಾಯ’. ಇವಲ್ಲದೆ ಗಣಪತಿಯನ್ನು ಕುರಿತ ಇವರ ಇನ್ನು ಕೆಲವು ರಚನೆ ಗಳೆಂದರೆ ಸಾವೇರಿಯ ‘ಕರಿಕಳಭಮುಖಂ’, ಜುಂಜೋಟಿಯ ‘ಗಣೇಶಕುಮಾರ’, ಗೌಳ ರಾಗದ ‘ಶ್ರೀಮಹಾಗಣಪತಿ ರವತು ಮಾಂ’, ಬಿಲಹರಿಯ ‘ಏಕದಂತಂ ಭಜೇಽಹಂ’, ಆರ್ದ್ರದೇಶಿ ರಾಗದ ‘ಶ್ರೀಗಣೇಶಾತ್ಪರಮ್’, ರುದ್ರಪ್ರಿಯ ರಾಗದ ‘ರುದ್ರ ಕೋಪಜಾತ’, ತೋಡಿ ರಾಗದ ‘ಮಹಾಗಣಪತಿಂ’ ಮತ್ತು ನಾಟ ರಾಗದ ‘ಮಹಾಗಣಪತಿಂ’ ಇತ್ಯಾದಿ.

ದೀಕ್ಷಿತರು ಕೆಲವು ಮಣಿಪ್ರವಾಳ ಕೃತಿಗಳನ್ನು ರಚಿಸಿದ್ದಾರೆ. ಅಂದರೆ ಒಂದೇ ಕೀರ್ತನೆಯ ರಚನೆಯಲ್ಲಿ ಸಂಸ್ಕೃತ, ತೆಲುಗು ಮತ್ತು ತಮಿಳು ಈ ಮೂರು ಭಾಷೆಗಳೂ ಇರುವುದು. ಉದಾ ಹರಣೆಗೆ ಶ್ರೀರಾಗದ ‘ಶ್ರೀ ಅಭಯಾಂಬಾ ನಿನ್ನು’ ಮತ್ತು ಕಾಪಿ ರಾಗದ ‘ವೆಂಕಟಾಚಲಪತೇ ನಿನ್ನು ನಮ್ಮಿತಿ’ ಇತ್ಯಾದಿ.

ಅವರಿಗೆ ನಲುವತ್ತೆರಡು ವರ್ಷ ವಯಸ್ಸಾದಾಗ ಅವರ ತಂದೆ, ತಾಯಿ ಮಡಿದರು. ಆಗ ಮನಶ್ಶಾಂತಿಗೋಸ್ಕರ ಅವರು ತೀರ್ಥ ಯಾತ್ರೆಗೆ ಹೊರಟರು. ಮೊದಲು ಕಾಂಚೀಪುರ ತಲುಪಿ ಅಲ್ಲಿಯ ಭುವನಮೋಹಿನಿಯಾದ ಕಾಮಾಕ್ಷಿ ಅಮ್ಮನವರನ್ನು ದರ್ಶನ ಮಾಡಿದರು. ಕಮಲಾಮನೋಹರಿ ರಾಗದಲ್ಲಿ ‘ಕಂಜದಳಾಯ ತಾಕ್ಷಿ ಕಾಮಾಕ್ಷಿ’ ಕೃತಿಯನ್ನೂ, ಹಿಂದೋಳ ರಾಗದಲ್ಲಿ ‘ನೀರಜಾಕ್ಷಿ ಕಾಮಾಕ್ಷಿ’ ಕೃತಿಯನ್ನೂ, ಬಿಲಹರಿ ರಾಗದಲ್ಲಿ ‘ಕಾಮಾಕ್ಷಿ’ ಕೃತಿ ಯನ್ನೂ ರಚಿಸಿ ಅಮ್ಮನವರಿಗೆ ಕೀರ್ತನ ಕುಸುಮಗಳನ್ನು ತಮ್ಮ ಹೃನ್ಮನಗಳಿಂದ ಅರ್ಪಿಸಿದರು. ಅನಂತರ ಏಕಾಂಬರ ದೇವರ ದರ್ಶನಕ್ಕೆ ಹೋಗಿ ಸ್ವಾಮಿಯನ್ನು ಕುರಿತು ಗಮಕಕ್ರಿಯ ರಾಗ ದಲ್ಲಿ ‘ಏಕಾಂಬರನಾಥಂ ಭಜೇಽಹಂ’ ಕೃತಿಯನ್ನು ಹಾಡಿ, ಶ್ರೀರಂಗಕ್ಕೆ ಬಂದು ಮಹಾಲಕ್ಷ್ಮೀ ದೇವಿಯನ್ನು ಕುರಿತು ಶ್ರೀರಾಗ ದಲ್ಲಿ ‘ಶ್ರೀವರಲಕ್ಷ್ಮೀ’ ಕೃತಿಯನ್ನೂ ಮಾಧವ ಮನೋಹರಿ ರಾಗ ದಲ್ಲಿ ‘ಮಹಾಲಕ್ಷ್ಮೀ’ ಕೃತಿಯನ್ನೂ ಹಾಡಿ ಮಧುರೆಗೆ ಹೋದರು. ಅಲ್ಲಿ ಮೀನಾಕ್ಷಿ ಅಮ್ಮನವರ ಮೇಲೆ ವರಾಳಿ ರಾಗದಲ್ಲಿ ‘ಮಾಮವ ಮೀನಾಕ್ಷಿ’ ಎಂಬ ಕೃತಿಯನ್ನು ರಚಿಸಿ ದೇವಿಯನ್ನು ಸ್ತುತಿಸಿದರು. ಅಲ್ಲಿಂದ ನಾಗಪಟ್ಟಣಕ್ಕೆ ಬಂದು, ನೀಲಾಂಬರಿ ರಾಗದಲ್ಲಿ ‘ಅಂಬ ನೀಲಾಯತಾಕ್ಷಿ’ ಕೃತಿಯನ್ನೂ ಮನ್ನಾರುಗುಡಿಯಲ್ಲಿ ಶ್ರೀರಾಜ ಗೋಪಾಲ ಸ್ವಾಮಿಯನ್ನು ಕುರಿತು ಸಾವೇರಿಯಲ್ಲಿ ‘ಶ್ರೀ ರಾಜ ಗೋಪಾಲ’ ಕೃತಿಯನ್ನೂ ಹಾಡಿದರು.

ಮಾರ್ಗದಲ್ಲಿ ಕೀಲೂರಿಗೆ ಭೇಟಿಕೊಟ್ಟು ಅಕ್ಷಯಲಿಂಗವೆಂಬ ಪ್ರಾಚೀನ ದೇವಾಲಯಕ್ಕೆ ಹೋದಾಗ ಅರ್ಚಕರು ಪೂಜೆಯನ್ನು ಮುಗಿಸಿ ಬಾಗಿಲು, ಹಾಕಿಕೊಂಡು ಹೊರಡುತ್ತಿದ್ದ ವೇಳೆಯಾದ್ದ ರಿಂದ ದೀಕ್ಷಿತರು ಅವರನ್ನು ಕುರಿತು ‘ಸ್ವಾಮಿ ನಾನು ತಿರುವಾ ರೂರಿನಿಂದ ಇಲ್ಲಿಗೆ ದೇವರ ದರ್ಶನಕ್ಕಾಗಿಯೇ ಬಂದಿದ್ದೇನೆ. ದಯವಿಟ್ಟು ಒಂದು ಕ್ಷಣ ದೇವರ ದರ್ಶನ ಮಾಡಿಸಿ’ ಎಂದು ಕೋರಿದರು. ಆಗ ಅರ್ಚಕರು ‘ನಾಳೆ ಬನ್ನಿ, ದೇವರು ಎಲ್ಲೂ ಓಡಿ ಹೋಗಲ್ಲ’ ಎಂದಾಗ ದೀಕ್ಷಿತರು ಬಾಗಿಲಲ್ಲೇ ಕುಳಿತು ಶಂಕರಾಭರಣ ರಾಗದಲ್ಲಿ ‘ಅಕ್ಷಯಲಿಂಗ ವಿಭೋ ಸ್ವಯಂಭೋ’ ಎಂಬ ಕೃತಿಯನ್ನು ಹಾಡಲು ಆರಂಭಿಸಿದರು. ಅದು ಮುಕ್ತಾಯಕ್ಕೆ ಬರುವ ವೇಳೆಗೆ ಆಶ್ಚರ್ಯ! ಗರ್ಭಗುಡಿಯ ಪಡಿಗಳು ತಮ್ಮಷ್ಟಕ್ಕೇ ತಾವೇ ತೆರೆದುಕೊಂಡು ಸ್ವಾಮಿಯ ದರ್ಶನಕ್ಕೆ ಎಡೆಮಾಡಿಕೊಟ್ಟ ವಂತೆ. ಪೂರ್ಣಭಕ್ತಿಯ ಫಲಕ್ಕೆ ಈ ಘಟನೆ ಒಂದು ನಿದರ್ಶನ.

ಇದೇರೀತಿ ಒಮ್ಮೆ ಯಾತ್ರಾರ್ಥಿಯಾಗಿ ಹೋಗುತ್ತಿದ್ದಾಗ ಒಂದೆಡೆ ನೀರಿಲ್ಲದೆ ದನಕರುಗಳು ಪರಿತಪಿಸುತ್ತಿದ್ದುದನ್ನು ಕಂಡು ಅಮೃತವರ್ಷಿಣಿ ರಾಗದಲ್ಲಿ ‘ಆನಂದಾಮೃತಾಕರ್ಷಿಣಿ’ ಎಂಬ ಕೃತಿಯನ್ನು ಹಾಡಿ ಮುಕ್ತಾಯಗೊಳಿಸಿದಾಗ ಜೋರಾಗಿ ಮಳೆ ಸುರಿಯಿತು. ಅನಂತರ ‘ಸ್ತಂಭಯ’ ಎಂದು ಹಾಡಿ ಸುರಿಯು ತ್ತಿದ್ದ ಮಳೆಯನ್ನು ನಿಲ್ಲಿಸಿದರೆಂದು ಪ್ರತೀತಿ.

ಅವರ ತಂದೆ ರಾಮಸ್ವಾಮಿ ದೀಕ್ಷಿತರು ಹಂಸಧ್ವನಿ ರಾಗವನ್ನು ಉಪಜ್ಞಿಸಿದರು. ಈ ಮಗನೇ ಅಮೃತವರ್ಷಿಣಿ ರಾಗದ ಉಪಜ್ಞೆ ಕಾರ (inventor.)

ದೀಕ್ಷಿತರು ತಮ್ಮ ರಚನೆಗಳಲ್ಲಿ ರಾಗದ ಹೆಸರು ಒಟ್ಟು ಸಾಹಿತ್ಯಕ್ಕೆ ನೇರವಾಗಿ ಹೊಂದುವಾಗ ಅದನ್ನೇ ಬಳಸಿ, ಅಸಾಧ್ಯ ವಾದಾಗ ಚಮತ್ಕಾರದಿಂದ ಸಮಾವೇಶ ಮಾಡಿದ್ದಾರೆ. ಉದಾ ಹರಣೆಗೆ: ಆರಭಿ–ಸಂಸಾರಭೀತ್ಯಾಪಹೇ, ಧನ್ಯಾಸಿ–ಮೂರ್ಧ ನ್ಯಾರವೇ ಸುರಟಿ–ಭೂಸುರಟೀಕಾದಿ, ಶಹನ–ಈಶನಾದಿ, ಅಹಿರಿ – ರಮಾಹರಿಕಾ ಇತ್ಯಾದಿ.

ದೀಕ್ಷಿತರು ಎಂದೂ ನರಸ್ತುತಿಯನ್ನು ಮಾಡಿ ಕೃತಿ ರಚಿಸಿದವ ರಲ್ಲ. ಅದಕ್ಕೆ ಒಂದು ನಿದರ್ಶನ ಅವರ ಲಲಿತರಾಗದ ‘ಹಿರ ಣ್ಮಯೀಂ ಲಕ್ಷ್ಮೀಂ’ ಕೃತಿಯ ಸಂದರ್ಭ ಮತ್ತು ತಾತ್ಪರ್ಯ: ತಂಜಾವೂರು ಮಹಾರಾಜರನ್ನು ಕುರಿತು ಕೃತಿ ರಚಿಸಿ ಆಸ್ಥಾನದಲ್ಲಿ ಹಾಡಿದರೆ ಧನಕನಕ ಐಶ್ವರ್ಯ ದೊರಕುವುದು ಎಂದು ಸೂಚಿಸಿ ದರಂತೆ ದೀಕ್ಷಿತರ ಪತ್ನಿ. ಆಗ ದೀಕ್ಷಿತರು, ‘‘ನಾನು ಈ ರೀತಿ ಎಂದೂ ಮಾಡುವುದಿಲ್ಲ; ನಿನಗೆ ಐಶ್ವರ್ಯ ಬೇಕಾದರೆ ನಾನು ದೇವರನ್ನು ಪ್ರಾರ್ಥಿಸುತ್ತೇನೆ. ನರಮನುಷ್ಯನನ್ನು ಖಂಡಿತ ಇಲ್ಲ. ನಶ್ವರವಾದ ಐಶ್ವರ್ಯವನ್ನಂತೂ ಅಲ್ಲವೇ ಅಲ್ಲ. ಆದರೆ ಎಂದೆಂ ದಿಗೂ ಶಾಶ್ವತವಾದ ಐಶ್ವರ್ಯವೆಂಬ ಜೀವನ್ಮುಕ್ತಿಯನ್ನು ದಯ ಪಾಲಿಸುವ ಲಕ್ಷ್ಮೀದೇವಿಯನ್ನು ಪ್ರಾರ್ಥಿಸುತ್ತೇನೆ’’ ಎಂದು ಹೇಳಿ ತಂಜಾವೂರು ಶ್ರೀ ರಾಜಗೋಪಾಲಸ್ವಾಮಿಯ ದೇವಾ ಲಯಕ್ಕೆ ಹೋಗಿ ಅಲ್ಲಿಯ ಅಮ್ಮನವರ ಸನ್ನಿಧಿಯಲ್ಲಿ ‘ಹಿರ

ಣ್ಮಯೀಂ ಲಕ್ಷ್ಮೀಂ' ಕೃತಿಯನ್ನು ಹಾಡಿದರು. ಅದೇ ರಾತ್ರಿ ಅವರ ಕನಸಿನಲ್ಲಿ ಸರ್ವಾಲಂಕಾರಭೂಷಿತೆಯಾಗಿ ದೇದೀಪ್ಯ ಮಾನವಾಗಿ ಕಂಗೊಳಿಸುತ್ತ ಲಕ್ಷ್ಮಿಯು ಪ್ರತ್ಯಕ್ಷಳಾಗಿ 'ನಿನಗೆ ಬಡತನವಿಲ್ಲ' ಎಂದಳು. ಅಂದೇ ಅವರ ಪತ್ನಿಯ ಕನಸಿನಲ್ಲಿ ಮಹಾಲಕ್ಷ್ಮಿಯು ಕಾಣಿಸಿಕೊಂಡು ''ಒಡವೆಗಳು ಸಾಕೆ?'' ಎಂದು ಕೇಳಿದಳು. ಮಾರನೇ ದಿನ ಬೆಳಿಗ್ಗೆ ದೀಕ್ಷಿತರ ಪತ್ನಿ, ''ನನ್ನನ್ನು ಕ್ಷಮಿಸಿ, ನಾನು ಆ ರೀತಿ ನಶ್ವರ ಐಶ್ವರ್ಯವನ್ನು ಅಪೇಕ್ಷಿಸಿದ್ದು ತಪ್ಪು'' ಎಂದು ಪಶ್ಚಾತ್ತಾಪಪಟ್ಟರಂತೆ.

ಜ್ಯೋತಿಶ್ಶಾಸ್ತ್ರದಲ್ಲಿ ಪಾರಂಗತರಾಗಿದ್ದ ದೀಕ್ಷಿತರು ರಚಿಸಿರುವ ನವಗ್ರಹ ಕೀರ್ತನೆಗಳು ಕರ್ನಾಟಕ ಸಂಗೀತಕ್ಕೆ ಅತ್ಯಮೂಲ್ಯ ಕೊಡುಗೆಗಳು. ರಾಗ ವಿಸ್ತಾರ ದೃಷ್ಟಿಯಿಂದ ಇವು ಗಹನವಾಗಿದೆ. ತಾಳದ ದೃಷ್ಟಿಯಿಂದ ಕರ್ನಾಟಕ ಸಂಗೀತದ ಸುಳಾದಿ ಸಪ್ತತಾಳ ಗಳಲ್ಲಿ ಕ್ರಮವಾಗಿ ಮೊದಲಿನ ಏಳು ಕೃತಿಗಳನ್ನು ರಚಿಸಿರುವುದು ಅವರಿಗೆ ತಾಳದಲ್ಲಿದ್ದ ಅಸಾಧಾರಣ ಪ್ರಭುತ್ವವನ್ನು ತೋರಿಸುತ್ತದೆ.

ತಂಜಾವೂರು ಸಹೋದರರಾದ ಪೊನ್ನಯ್ಯ, ಚಿನ್ನಯ್ಯ, ಶಿವಾನಂದಂ, ವಡಿವೇಲು ಮತ್ತು ಮೃದಂಗ ತಂಬಿಯಪ್ಪ, ತಿರು ವಾರೂರು ಕಮಲ, ಕೊರ್ನಾಡ್ ರಾಮಸ್ವಾಮಿ ಮತ್ತು ತಿರುತ್ತಡೆ ಯೂರು ಭಾರತೀ ಇವರು ದೀಕ್ಷಿತರ ಪ್ರಮುಖ ಶಿಷ್ಯರು. ಇವರುಗಳ ಮೂಲಕ ಈಗ ಪ್ರಚಲಿತವಿರುವ ಕೃತಿಗಳು ಸಂಗೀತ ಪ್ರಪಂಚಕ್ಕೆ ಲಭ್ಯವಾಗಿದೆ.

ದೀಕ್ಷಿತರ ಅತ್ಯುತ್ತಮ ರಚನೆಗಳಲ್ಲಿ ನವಾವರಣ ಕೃತಿಗಳಿಗೆ ಅಗ್ರಸ್ಥಾನ ಸಲ್ಲುತ್ತದೆ. ರಚನಾಶೈಲಿ, ಸಾಹಿತ್ಯ, ರಾಗಭಾವ, ತಾಳದ ಚೌಕಟ್ಟು ಎಲ್ಲ ದೃಷ್ಟಿಗಳಿಂದಲೂ ಇವು ಉಕ್ಕಿನ ಕಡಲೆಗಳು. ಆದರೆ ಇವುಗಳ ಅಂತರಾರ್ಥವನ್ನು ಅರಿತು ಸಾಧನೆ ಮಾಡಿ ಜೀರ್ಣಿಸಿ ಕೊಂಡರೆ ದೊರಕುವ ಆನಂದ ಮಾತ್ರ  ಅವರ್ಣನೀಯ. ಅದ ರಲ್ಲೂ ತೋಡಿ ರಾಗದ ಕೀರ್ತನೆಯಲ್ಲಿ ಪ್ರತಿ ಅಕ್ಷರದ ಸಾಹಿತ್ಯದಲ್ಲಿ ರಾಗದ ಪೂರ್ಣ ಸೌಂದರ್ಯ ಬರುವಂತೆ ರಚಿಸಿದ್ದಾರೆ. ಇದನ್ನು 'ಶ್ರೀ ಕಮಲಾಂಬಾ ನವಾವರಣ' ಎಂದೂ ಹೇಳುವುದುಂಟು. ಕಮಲಾಂಬ ದೇವಿಯನ್ನು ಕುರಿತ ಸ್ತೋತ್ರ ಕೃತಿಗಳಿವು.

ದೀಕ್ಷಿತರು ಶ್ರೀವಿದ್ಯಾ ಉಪಾಸಕರು ಮತ್ತು ಶ್ರೀಚಕ್ರಕ್ಕೆ ಪೂಜೆ ಸಲ್ಲಿಸಿ ಆ ಮಹಾಯಂತ್ರದ ತಂತ್ರವಿದ್ಯೆಯನ್ನು ಚೆನ್ನಾಗಿ ಬಲ್ಲ ವರು. ನವಾವರಣ ಕೀರ್ತನೆಗಳಲ್ಲಿ ಅವರು ತಿರುವಾವೂರು ಕ್ಷೇತ್ರಾಧಿಪತಿ ತ್ಯಾಗರಾಜಸ್ವಾಮಿಯ ಅರ್ಧಾಂಗಿ ಕಮಲಾಂಬಿಕೆ ಯನ್ನು ಶ್ರೀಚಕ್ರದ ಸ್ವಾಮಿನಿಯಾದ ಜಗನ್ಮಾತೆಯ ರೂಪದಲ್ಲಿ ಸ್ತುತಿಸಿದ್ದಾರೆ. ನವಾವರಣದ ಪ್ರಧಾನ ಶಕ್ತಿಯ ಸುತ್ತ ಒಂಬತ್ತು ಚಕ್ರಗಳಿದ್ದು, ಒಂದೊಂದು ಕೀರ್ತನೆಯಲ್ಲೂ ಒಂದೊಂದು ಚಕ್ರದ ಅಧಿದೇವತಾ ಸ್ವರೂಪಿಣಿಯದ ಶ್ರೀ ಲಲಿತಾ ಮಹಾ ತ್ರಿಪುರಸುಂದರೀ ದೇವಿಯ ಪ್ರಾರ್ಥನೆಯಿದೆ. ಗಾಯತ್ರೀ ಮಂತ್ರದ ಬೀಜಾಕ್ಷರಗಳನ್ನು ಬಳಸಿಕೊಂಡು ವಾಲ್ಮೀಕಿ ಮಹರ್ಷಿ ಗಳು ರಾಮಾಯಣದ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳನ್ನು ರಚಿಸಿದಂತೆ ಶಕ್ತಿ ಮಂತ್ರ ಬೀಜಾಕ್ಷರಗಳನ್ನು ಬಳಸಿಕೊಂಡು ಈ ಕೀರ್ತನೆಗಳ ಸಾಹಿತ್ಯವನ್ನು ರಚಿಸಿದ್ದಾರೆ. ಈ ಕೀರ್ತನೆಗಳ ಭಾವ ಮತ್ತು ತತ್ತ್ವವನ್ನು ಅರ್ಥಮಾಡಿಕೊಳ್ಳಲು ವಿಶೇಷ ಅಧ್ಯಯನ ಮಾಡಬೇಕಾಗುತ್ತದೆ. ನವರಾತ್ರಿ ಸಂದರ್ಭದಲ್ಲಿ ಈ ಮಾಲಿಕೆ ಯನ್ನು ಹಾಡುವ ಕ್ರಮವಿದೆ.

ಈ ಕೃತಿಗುಚ್ಛದಲ್ಲಿ ಒಟ್ಟು ಹದಿಮೂರು ಕೃತಿಗಳಿವೆ. ಗಣಪತಿ ಮತ್ತು ಸುಬ್ರಹ್ಮಣ್ಯಸ್ವಾಮಿಯ ಪ್ರಾರ್ಥನಾರೂಪದ ಮೊದ ಲೆರಡು ಕೀರ್ತನೆಗಳನ್ನು ನವರಾತ್ರಿ ಪಾಡ್ಯದ ಹಿಂದಿನ ದಿನ, ಅಂದರೆ ಮಹಾಲಯ ಅಮಾವಾಸ್ಯೆಯಂದು ಹಾಡಬೇಕು. ತೋಡಿ ರಾಗದ ಕೀರ್ತನೆಯನ್ನು ಹಾಡಿದ ಅನಂತರ ಪಾಡ್ಯದಿಂದ ಆರಂಭಮಾಡಿ ದಿನಕ್ಕೊಂದು ಕೀರ್ತನೆಯಂತೆ ಕ್ರಮವಾಗಿ ಹಾಡಿ ವಿಜಯದಶಮಿಯಂದು ಶ್ರೀರಾಗದ ಮಂಗಳ ಕೀರ್ತನೆಯನ್ನು ಹಾಡಿ ಮುಗಿಸುವುದು ವಾಡಿಕೆ. ನವಾವರಣದ ಕೊನೆಯ ಕೃತಿ ಆಹಿರಿ ರಾಗದಲ್ಲಿ ರಚಿಸಿರುವುದರಿಂದ ಮಂಗಳಪ್ರಧಾನವಾದ ರಾಗವನ್ನು ಹಾಡದೆ ಇರುವುದು ಸಂಪ್ರದಾಯವಲ್ಲ ಎಂದು ಚೆನ್ನಾಗಿ ಅರಿತಿದ್ದ ದೀಕ್ಷಿತರು, ಶ್ರೀರಾಗದ ಕೃತಿಯೊಂದಿಗೆ ಈ ಗುಚ್ಛಕ್ಕೆ ಮಂಗಳ ಹಾಡಿದ್ದಾರೆ.

ಈ ಹದಿಮೂರು ಕೀರ್ತನೆಗಳಿಗೆ ದೀಕ್ಷಿತರು ಬಳಸಿರುವ ರಾಗ ಗಳು ಅನುಕ್ರಮವಾಗಿ ಗೌಳ, ಸುರಟಿ, ತೋಡಿ, ಆನಂದಭೈರವಿ, ಕಲ್ಯಾಣಿ, ಶಂಕರಾಭರಣ, ಕಾಂಬೋಧಿ, ಭೈರವಿ, ಪುನ್ನಾಗವರಾಳಿ, ಶಹನ, ಘಂಟ, ಆಹಿರಿ ಮತ್ತು ಶ್ರೀರಾಗ. ರಾಗದ ಹೆಸರನ್ನು ಸಾಹಿತ್ಯದಲ್ಲಿ ಚಮತ್ಕಾರವಾಗಿ ಜೋಡಿಸುವುದು ದೀಕ್ಷಿತರ ರಚನೆ ಗಳ ವೈಶಿಷ್ಟ್ಯ. ಅಲ್ಲದೆ ಸಂಸ್ಕೃತ ಸಾಹಿತ್ಯದಲ್ಲಿ ಸಂಬೋಧನಾ ವಿಭಕ್ತಿಯೂ ಸೇರಿ ಒಟ್ಟು ಎಂಟು ವಿಭಕ್ತಿಗಳನ್ನೂ ಪ್ರಥಮಾವರ ಣದ ಆನಂದಭೈರವಿ ರಾಗದ ಕೀರ್ತನೆಯಿಂದ ಘಂಟಾ ರಾಗದ ಅಷ್ಟಾವರಣದ ಕೀರ್ತನೆಯವರೆಗೆ ಕ್ರಮವಾಗಿ ಬಳಸಿರುವುದು ಗಮನಿಸಬೇಕಾದ ಮತ್ತೊಂದು ಅಂಶ. ಆಹಿರಿರಾಗದ ನವಮಾ ವರಣದ ಕೀರ್ತನೆಯಲ್ಲಿ ಏಳು ವಿಭಕ್ತಿಗಳೂ ಸೇರಿವೆ. ಅವರು ಅದ್ವೈತಿಗಳಾದ್ದರಿಂದ ಸಂಬೋಧನಾ ವಿಭಕ್ತಿಯನ್ನು ಬಿಟ್ಟಿರ ಬಹುದು. ನವಮಾವರಣದ ಕೀರ್ತನೆಯಲ್ಲಿ ಸಂಬೋಧನೆಗೆ ಅವಕಾಶವಿಲ್ಲದೆ 'ಅಹಂ ಬ್ರಹ್ಮಾಸ್ಮಿ' ತತ್ತ್ವವನ್ನು ಪ್ರತಿಪಾದಿಸಿರ ಬಹುದೇನೋ ಎಂದು ಕೆಲವು ಸಂಗೀತಜ್ಞರ ಅಭಿಪ್ರಾಯ.

ದೀಕ್ಷಿತರ ರಚನೆಗಳಲ್ಲಿ ಏನಾದರೂ ಒಂದು ವಿಶೇಷ ಯೋಜನೆ ಇದ್ದೇ ಇರುತ್ತದೆ. ಉದಾಹರಣೆಗೆ ನವಮಾವರಣದ ಕೀರ್ತನೆಗೆ ಆಹಿರಿ ರಾಗ ಆವರಿಸಿಕೊಂಡಿರುವುದನ್ನು ಗಮನಿಸ ಬೇಕು. ಹನ್ನೆರಡು ಸ್ವರಸ್ಥಾನಗಳಲ್ಲಿ ಪ್ರತಿಮಧ್ಯಮವೊಂದನ್ನು ಬಿಟ್ಟು ಉಳಿದ ಹನ್ನೊಂದು ಸ್ವರಸ್ಥಾನಗಳೂ ಬರುವ ಒಂದೇ ಒಂದು ರಾಗವೆಂದರೆ ಆಹಿರಿ. ಪ್ರತಿಮಧ್ಯಮ ಸ್ವರ ಜೋಡಣೆ ಯಿಂದ ಕಿವಿಗೆ ಹಿತವಾಗುವುದಿಲ್ಲ ಎನ್ನುವುದು ಅವರ ದೃಷ್ಟಿ ಯಾಗಿರಬೇಕು. ನವಾವರಣ ಕೃತಿಗಳಲ್ಲಿ 'ದೇವೀ ಖಡ್ಗಮಾಲಾ

ಸ್ತೋತ್ರ'ದಲ್ಲಿ ಬರುವಂತೆ ಕ್ರಮವಾಗಿ ಚಕ್ರಗಳ ಹೆಸರು, ಆಯಾ ಚಕ್ರದ ಯೋಗಿನಿಯರ ಹೆಸರು, ಚಕ್ರೇಶ್ವರಿಯರ ಹೆಸರು, ಚಕ್ರದ ಗುಣಲಕ್ಷಣಗಳು ಅರ್ಥಪೂರ್ಣವಾಗಿ ಬರುವಂತೆ ರಚಿಸಿರುವುದು ಅವರ ಪಾಂಡಿತ್ಯದ ದ್ಯೋತಕವಾಗಿದೆ.

ಶ್ರೀ ತ್ಯಾಗರಾಜಸ್ವಾಮಿಯ ದೇವಾಲಯದ ಆವರಣದಲ್ಲಿ ಇನ್ನೊಂದು ಗುಡಿ ಇದೆ. ಸ್ಥಳಪುರಾಣದ ಪ್ರಕಾರ ಪಾರ್ವತಿಯು ಶಿವನನ್ನು ಮದುವೆಯಾಗಬೇಕೆಂದು ತಪಸ್ಸು ಮಾಡುತ್ತಿದ್ದುದರಿಂದ ಶ್ರೀ ನೀಲೋತ್ಪಲಾಂಬಾ ಎಂಬ ಹೆಸರು ಬಂತೆಂದು ಗೊತ್ತಾಗುತ್ತದೆ. ಈ ನೀಲೋತ್ಪಲಾಂಬಾ ದೇವಿಯನ್ನು ಕುರಿತು ದೀಕ್ಷಿತರು ಗೌಳ ವರ್ಗದ ಕೃತಿಗಳನ್ನು ರಚಿಸಿದ್ದಾರೆ. ಈ ಎಂಟು ಕೃತಿಗಳೂ ಕಮಲಾಂಬ ನವಾವರಣದ ರೀತಿ ಎಂಟು ವಿಭಕ್ತಿಗಳಿದ್ದು, 'ಗೌಳ' ಎಂದು ಕೊನೆಗೊಳ್ಳುವ ಹೆಸರುಳ್ಳ ರಾಗದಲ್ಲಿವೆ. ಆ ರಾಗಗಳೆಂದರೆ ಕ್ರಮವಾಗಿ ನಾರಾಯಣಗೌಳ, ರೀತಿಗೌಳ, ಕನ್ನಡಗೌಳ, ಕೇದಾರ ಗೌಳ, ಗೌಳ, ಮಾಯಾಮಾಳವಗೌಳ ಮತ್ತು ಅಪೂರ್ವ ರಾಗಗಳಾದ ಪೂರ್ವಗೌಳ ಮತ್ತು ಛಾಯಾಗೌಳ. ಒಟ್ಟಿನಲ್ಲಿ ಬುದ್ಧಿಜೀವಿಗಳಾದ ದೀಕ್ಷಿತರ ಕೃತಿಗಳೆಲ್ಲವೂ ಪ್ರಮಾಣದಲ್ಲಿ ವಿಶಾಲ, ಪ್ರವಾಹದಲ್ಲಿ ಗಹನ, ರುಚಿಯಲ್ಲಿ ನಾರಿಕೇಳಪಾಕ ಮತ್ತು ಪ್ರತಿಯೊಂದೂ ಒಂದೊಂದು ಮಹಾಕಾವ್ಯ ಎಂದು ಸಂಗೀತ ಶಾಸ್ತ್ರಜ್ಞರ ಅಭಿಪ್ರಾಯ.

ದೀಪಾವಳಿ ಹಬ್ಬ ಬಂತೆಂದರೆ ದೀಕ್ಷಿತರ ದಿನಾಚರಣೆ ಬಂತೆಂದೇ ಅರ್ಥ. ಅವರು ತಮ್ಮ ಅಂತಿಮ ದಿನಗಳನ್ನು ಎಟ್ಟಿಯಾಪುರಮ್‌ನಲ್ಲಿ ಕಳೆದರು. ೧೮೩೫ನೇ ಇಸವಿಯಲ್ಲಿ ಆಶ್ವಯುಜ ಮಾಸದ ದೀಪಾವಳಿಯ ಹಿಂದಿನ ದಿನವಾದ ನರಕ ಚತುರ್ದಶಿಯಂದು ದೇವಿಯ ಸಾನ್ನಿಧ್ಯವನ್ನು ಸೇರಿದರು. ಅಂದಿನಿಂದ ದೀಪಾವಳಿ ಪಾಡ್ಯದ ಹಿಂದಿನ ದಿನವಾದ ನರಕ ಚತುರ್ದಶಿ 'ದೀಕ್ಷಿತರ ದಿನ' ಎಂದು ಸಂಗೀತ ಪ್ರಪಂಚದಲ್ಲಿ ವಿಶೇಷ ಮಹತ್ವ ಪಡೆದಿದೆ. ಅಂದು ದೀಕ್ಷಿತರು ಸ್ನಾನ ಮುಗಿಸಿ ದೇವಿಗೆ ನವಾವರಣ ಪೂಜೆ ಸಲ್ಲಿಸಿ, ಪುನ್ನಾಗವರಾಳಿ ರಾಗದ 'ಏಹಿ ಅನ್ನಪೂರ್ಣೇ' ಎಂಬ ಕೊನೆಯ ಕೃತಿಯನ್ನು ರಚಿಸಿ ಹಾಡಿದರು. ಅನಂತರ ಪೂರ್ವಿಕಲ್ಯಾಣಿ ರಾಗದಲ್ಲಿ (ದೀಕ್ಷಿತರ ಸಂಪ್ರದಾಯದ ಪ್ರಕಾರ ಗಮಕಕ್ರಿಯ) 'ಮೀನಾಕ್ಷೀ ಮೇ ಮುದಂ ದೇಹಿ' ಎಂಬ ಕೃತಿಯನ್ನು ವೀಣೆಯಲ್ಲಿ ನುಡಿಸಿ, ಶಿಷ್ಯರನ್ನೆಲ್ಲ ಕರೆದು ಸಂಗಡ ಹಾಡುವಂತೆ ಹೇಳಿದರು. ಅಂತೆಯೇ ಆ ಕೃತಿನ್ನು ಹಾಡುತ್ತ ಅನುಪಲ್ಲವಿಯ 'ಮೀನಲೋಚನಿ ಪಾಶಮೋಚನಿ' ಎಂಬ ಘಟ್ಟಕ್ಕೆ ಬಂದಾಗ ಅದನ್ನೇ ಪುನಃ ಪುನಃ ನುಡಿಸಲಾರಂಭಿಸಿ, ಶಿಷ್ಯರಿಗೂ ಆ ಸಾಹಿತ್ಯ ಭಾಗವನ್ನೇ ಮೇಲಿಂದ ಮೇಲೆ ಹಾಡುವಂತೆ ಹೇಳಿ ಕೊನೆಗೆ 'ಶಿವೇ ಪಾಹಿ, ಶಿವೇ ಪಾಹಿ, ಶಿವೇ ಪಾಹಿ' ಎಂದು ಮೂರು ಬಾರಿ ಉಚ್ಚರಿಸಿ, ಅರುವತ್ತು ವರ್ಷಗಳ ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿ ಸಂಗೀತ ಪ್ರಪಂಚಕ್ಕೆ ಒಂದು ಮಹಾನಿಧಿಯಾದ ತಮ್ಮ ರಚನೆಗಳನ್ನು ಬಿಟ್ಟು ದೇವಿಯಲ್ಲಿ ಸಾಯುಜ್ಯ ಹೊಂದಿದರು. ❉

# ಸಂಗೀತದಲ್ಲಿ ಸಾಹಿತ್ಯದ ಸ್ಥಾನ

## (ಕಾಂಚೀ ಪರಮಾಚಾರ್ಯರ ಒಂದು ವಿವರಣೆ)

ಸಂಗ್ರಹ – ಅನುವಾದ : **ಶಶಿಕಲಾ ಶ್ರೀಧರ್**



**ಕಾಂಚೀ ಪರಮಾಚಾರ್ಯರು**

ಕಾಂಚಿ ಕಾಮಕೋಟಿ ಪೀಠದ ೬೮ನೇ ಜಗದ್ಗುರುಗಳಾಗಿದ್ದ ಶ್ರೀ ಚಂದ್ರಶೇಖರ ಸರಸ್ವತೀ ಮಹಾಸ್ವಾಮಿಗಳು ಅಗಾಧ ಜ್ಞಾನಸಂಪನ್ನರೂ, ಮಹಿಮಾನ್ವಿತರೂ ಆಗಿದ್ದವರು. ಸಂಗೀತದಲ್ಲಿ ವಿಶೇಷ ತಿಳುವಳಿಕೆ ಹಾಗೂ ಆಸಕ್ತಿ ಹೊಂದಿದ್ದ ಅವರು ಅನೇಕ ಹಿರಿಯ ಸಂಗೀತ ವಿದ್ವಾಂಸರುಗಳಿಗೆ ಆಧ್ಯಾತ್ಮಿಕ ಗುರುಗಳಾಗಿದ್ದವರು. ಕರ್ನಾಟಕ ಸಂಗೀತ ಪ್ರಪಂಚದಲ್ಲಿ ದಿಗ್ಗಜರೆನಿಸಿಕೊಂಡ ಅರಿಯಾಕುಡಿ ರಾಮಾನುಜ ಅಯ್ಯಂಗಾರ್ ಅವರೊಂದಿಗೆ ಸ್ವಾಮೀಜಿ ನಡೆಸಿದ ಮಾತುಕತೆಯ ವಿವರಣೆ ತಮಿಳು ಮಾಸಪತ್ರಿಕೆ 'ಕಲ್ಕಿ'ಯ ೧೯೯೦ರ ದೀಪಾವಳಿ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿದ್ದು, ಆ ಲೇಖನದ ಆಂಗಲನುವಾದವನ್ನು ಆಧರಿಸಿದ ಕನ್ನಡ ಅವತರಣಿಕೆಯನ್ನು ಇಲ್ಲಿ ನೀಡುತ್ತಿದ್ದೇವೆ. ಇದನ್ನು ಸಂಗ್ರಹಿಸಿ, ಅನುವಾದಿಸಿ ಕೊಟ್ಟ ಲೇಖಕಿ ಬೆಂಗಳೂರು ರಾಮಕೃಷ್ಣ ಮಠದ ಭಕ್ತರು.

**ತ**ಮಿಳುನಾಡಿನ ಪುದುಕೋಟ್ಟೈ ಜಿಲ್ಲೆಯ ದೇವಕೋಟ್ಟೈ ಎಂಬ ಊರಿನಲ್ಲಿ ೧೯೬೧ರ ಜೂನ್ ತಿಂಗಳಲ್ಲಿ ಪರಮಾಚಾರ್ಯರು ಶಿಬಿರ ಹೂಡಿದ್ದ ಸಮಯ. ಹಲವು ವಾರಗಳಿಂದ ಅವರು ಗಾಢವಾದ ತಪಶ್ಚರ್ಯೆಯಲ್ಲಿದ್ದರು. ಪೂರ್ಣ ಮೌನ ವ್ರತದಲ್ಲಿದ್ದು ಸಂಜ್ಞೆಯ ಮೂಲಕವೂ ಏನನ್ನೂ ತಿಳಿಸುತ್ತಿರಲಿಲ್ಲ. ಭಕ್ತರ ಮಾತುಗಳೂ ಅವರ ಕಿವಿಗಳಿಗೆ ಬೀಳುತ್ತಿದ್ದವೋ ಇಲ್ಲವೋ ಎಂಬುದು ಬರುತ್ತಿರಲಿಲ್ಲ. ಒಂದು ದಿನ ಬೆಳಿಗ್ಗೆ ಸಮೀಪದ ಅರಿಯಕುಡಿ ನಗರ ವಾಸಿಗಳಾದ ಕೆಲವು ಭಕ್ತರು ದರ್ಶನಕ್ಕಾಗಿ ಬಂದಿದ್ದಾಗ ಅವರ ಮೂಲಕ ಕರ್ನಾಟಕ ಸಂಗೀತದ ಪ್ರಖ್ಯಾತ ಗಾಯಕರಾದ ಅರಿಯಕುಡಿ ರಾಮಾನುಜ ಅಯ್ಯಂಗಾರ್ಯರು ಕಾರೈಕುಡಿಗೆ ಆಗಮಿಸಿರುವ ಸಮಾಚಾರ ತಿಳಿದು ಬಂತು. ಪರಮಾಚಾರ್ಯರು ಒಡನೆಯೇ ಆ ಭಕ್ತರಿಗೆ ಅರಿಯಕುಡಿಯವರನ್ನು ಕರೆತಂದು ಅವರಿಗೆ ಭೇಟಿ ಮಾಡಿಸಲು ಕೈಸನ್ನೆಗಳಿಂದ ಕೇಳಿದಾಗ ಆ ಭಕ್ತರು ಒಡನೆಯೇ ಸಮ್ಮತಿಸಿ ಹೊರಟರು.

ಅಂದು ಮಧ್ಯಾಹ್ನ ಮೂರು ಘಂಟೆಗೆ ಸರಿಯಾಗಿ ಅರಿಯಕುಡಿ ಪರಮಾಚಾರ್ಯರ ಶಿಬಿರಕ್ಕೆ ಆಗಮಿಸಿದರು. ಕಾಷ್ಠಮೌನದಲ್ಲಿದ್ದ ಪರಮಾಚಾರ್ಯರನ್ನು ಭೇಟಿಯಾಗಲು ಬರಹೇಳಿದುದಕ್ಕೆ ಅರಿಯಕುಡಿಯವರು ಅತ್ಯಂತ ಭಾವುಕರೂ ಉದ್ವೇಗ ಭರಿತರೂ ಆಗಿದ್ದರು. ಸರಳತೆಯ ಸಾಕಾರವಾಗಿದ್ದ ಪರಮಾಚಾರ್ಯರ ಬಿಡಾರ ಅತ್ಯಂತ ಸರಳವಾದುದಾಗಿತ್ತು. ಅವರ ಕೋಣೆ ಒಂದು ಚಿಕ್ಕ ಮನೆಯ ತೋಟದ ಪಕ್ಕದಲ್ಲಿತ್ತು. ಆ ಕೋಣೆಯ ಒಂದು ಸಣ್ಣ ಕಿಟಕಿಯ ಮೂಲಕ ಭಕ್ತರು ಅವರ ದರ್ಶನವನ್ನು ಪಡೆಯಲು ಕಸ, ಪೊದೆಗಳ ಮೂಲಕ ಹಾದು ಬರಬೇಕಿತ್ತು. ಸುಖಭೋಗಗಳ ಜೀವನ ನಡೆಸುವವರನ್ನು ಪರಮಾಚಾರ್ಯರು ಎಚ್ಚರಿಸಿ ಮಾರ್ಗದರ್ಶನ ಮಾಡುವ ಪರಿ ಇದಾಗಿರಬಹುದೇ? ಅರಿಯಕುಡಿಯವರಿಗೆ ಹಿಂಬಾಗದ ಕಿಟಕಿಯ ಬಳಿ ಕರೆತರಲು ಸಂಜ್ಞೆಮಾಡಿ ಸೂಚಿಸಿದರು. ಅರಿಯಕುಡಿಯವರು ಆಗಮಿಸಿ ಪರಮಾಚಾರ್ಯರಿಗೆ ಸಾಷ್ಟಾಂಗ ನಮಸ್ಕಾರ ಮಾಡುವುದರ ಮೂಲಕ ತಮ್ಮ ಭಕ್ತಿಗೌರವಗಳನ್ನು ತೋರಿದರು. ಒಡನೆಯೇ ಅಲ್ಲಿದ್ದವರೆಲ್ಲರಿಗೂ ಹರ್ಷವಾಗುವಂತೆ ಪರಮಾಚಾರ್ಯರು ತಮ್ಮ ಕಾಷ್ಠಮೌನವನ್ನು ಮುರಿದು ನಿರರ್ಗಳವಾಗಿ ಮಾತನಾಡಲು ಪ್ರಾರಂಭಿಸಿದರು :

**ಪರಮಾಚಾರ್ಯರು:** ''ನೀವು 'ರಾಷ್ಟ್ರಪತಿ ಪ್ರಶಸ್ತಿ' ಯನ್ನು ಪಡೆದುದು ತಿಳಿದು ಬಂದಿತು. ಕೆಂಪು ಕಾಲುಹಾಸಿನ ಮೇಲೆ ನಡೆದು ಬಂದು ಅನೇಕ ಗಣ್ಯರೆದುರು ನೀವು ಅದನ್ನು ಸ್ವೀಕರಿಸಿರುತ್ತೀರಿ. ಇಲ್ಲಿ ನಾವಾದರೋ ನಿಮಗೆ ಕಲ್ಲು ಮುಳ್ಳುಗಳ



**ಅರಿಯಾಕುಡಿ ರಾಮಾನುಜ ಅಯ್ಯಂಗಾರ್**

ಮೇಲೆ ನಡೆದು ಬಂದು ಇಕ್ಕಟ್ಟಿನ ಕೊಠಡಿಯಲ್ಲಿ ಕುಳಿತುಕೊಳ್ಳುವಂತೆ ಮಾಡಿದೆವು. ನಾವು ನಿಮ್ಮನ್ನು ಕರೆದ ಉದ್ದೇಶ, ನಾವು ಬಹಳ ದಿನಗಳಿಂದ ದೀಕ್ಷಿತರ 'ಶ್ರೀ ಸುಬ್ರಹ್ಮಣ್ಯಾಯ ನಮಸ್ತೇ' ಕೀರ್ತನೆಯನ್ನು ಶುದ್ಧವಾಗಿ ಹಾಡಿರುವುದನ್ನು ಕೇಳಬೇಕೆಂಬ ಇಚ್ಛೆಯುಳ್ಳವರಾಗಿದ್ದೆವು. ನೀವು ಸಮೀಪದಲ್ಲೇ ಬಂದಿಳಿದಿರುವ ವಿಷಯ ತಿಳಿಯುತ್ತಲೇ ಈ ಇಚ್ಛೆ ಪ್ರಬಲವಾಯಿತು. ಶುದ್ಧವಾದ, ಪೂರ್ಣವಾದ ಹಾಡುಗಾರಿಕೆ ಎಂದರೆ ಸಂಗೀತ ಹಾಗೂ ಸಾಹಿತ್ಯದ ಸಮರ್ಪಕ ಸಮಾಗಮ. ಕೆಲವರು ಕೀರ್ತನೆಗಳ ಸಂಸ್ಕೃತ ಅಥವಾ ತೆಲುಗು ಸಾಹಿತ್ಯವನ್ನು ಎಷ್ಟರಮಟ್ಟಿಗೆ ವಿರೂಪಗೊಳಿಸುತ್ತಾರೆ ಎಂದರೆ ಅವರು ಹಾಡದೆ ಇರುವುದೇ ಒಳ್ಳೆಯದೆಂದು ನಮಗೆ ಅನ್ನಿಸಿಬಿಡುವುದು. ಸ್ವರ, ಲಯ ಮತ್ತು ಸಾಹಿತ್ಯ ಛಂದಸ್ಸು ಇವುಗಳು ಅನೇಕ ಕೀರ್ತನೆಗಳಿಗೆ ಕೊಡಲ್ಪಟ್ಟಿರುತ್ತದೆ. ಪದಗಳ ಜೋಡನೆ ಮತ್ತು ವಿಭಜನೆಗಳೂ ಕೊಡಲ್ಪಟ್ಟಿರುತ್ತದೆ. ಸಂಗೀತಗಾರನಾದವನು ಸ್ವರ, ಲಯ ಮತ್ತು ಛಂದಸ್ಸುಗಳನ್ನು ಒಂದುಗೂಡಿಸಿ ಸಾಹಿತ್ಯದ ಶಬ್ದಗಳ ಜೋಡನೆ ಮತ್ತು ವಿಭಜನೆಯನ್ನು ಸರಿಯಾದ ರೀತಿಯಲ್ಲಿ, ಅರ್ಥವು ಕೆಡದಂತೆ ಮಾಡಿ ಹಾಡಲು ಜಾಗ್ರತೆ ವಹಿಸಬೇಕು. ಉತ್ತಮ ರಚನಕಾರರ ರಚನೆಗಳಲ್ಲಿ ಈ ಶಬ್ದಗಳನ್ನು ಅರ್ಥಬರುವಂತೆ ಬಿಡಿಸಿ ಹಾಡಲು ಖಂಡಿತವಾಗಿಯೂ ಸಾಧ್ಯವಿದೆ. ಆದರೆ ಅನೇಕ ಗಾಯಕರು ಸ್ವರ ಮತ್ತು ಲಯಗಳ ಮೇಲೆ ಗಮನ ಹರಿಸಿ ಸಾಹಿತ್ಯದ ಅರ್ಥವನ್ನು ಕಡೆಗಣಿಸುತ್ತಾರೆ. ಹಲವು ಬಾರಿ ಅಸಂಬದ್ಧ ಅರ್ಥಬರುವಂತೆಯೂ ಹಾಡುತ್ತಾರೆ. ಈ 'ಸುಬ್ರಹ್ಮಣ್ಯಾಯ ನಮಸ್ತೇ' ಎಂಬ ಕೀರ್ತನೆಯಲ್ಲಿ ಒಂದು ಸಾಲು ಹೀಗಿದೆ: 'ಗುರುಗುಹಾಯಾಜ್ಞಾನಧ್ವಾಂತ ಸವಿತ್ರೇ' ಅಜ್ಞಾನ ಎಂಬ ಅಂಧಕಾರಕ್ಕೆ ಸೂರ್ಯನಂತೆ ಎಂದರ್ಥ. ಕೆಲವರು ಈ ಸಾಲನ್ನು 'ಗುರುಗುಹಾಯಾ ಜ್ಞಾನಧ್ವಾಂತ ಸವಿತ್ರೇ' ಜ್ಞಾನದ ಅಂಧಕಾರವನ್ನು ನಿವಾರಿಸುವ ಸೂರ್ಯ ಎಂದು ಹಾಡುತ್ತಾರೆ! ಇದರಂತೆಯೇ ಶ್ರೀ ಸುಬ್ಬರಾಮ ದೀಕ್ಷಿತರ ಶಂಕರಾಭರಣ ರಾಗದ 'ಶಂಕರಾಚಾರ್ಯಂ' ಎಂಬ ಇನ್ನೊಂದು ಕೃತಿ ಇದೆ. ಇದನ್ನು ನೀವೂ ಹಾಡಬಹುದು. ವೀಣೆ ಧನಮ್ಮರವರ ಕುಟುಂಬ, ಸೆಮ್ಮಂಗುಡಿ ಸೀನು (ಶ್ರೀನಿವಾಸ ಅಯ್ಯರ್) ಎಮ್. ಎಸ್.ಎಸ್ (ಎಂ. ಎಸ್. ಸುಬ್ಬುಲಕ್ಷ್ಮೀ) ಇದನ್ನು ಹಾಡುತ್ತಾರೆ. ಈ ಕೃತಿಯಲ್ಲಿ 'ಪರಮಾದ್ವೈತ ಸ್ಥಾಪನ ಲೀಲಮ್' ಎಂಬ ಒಂದು ಸಾಲಿದೆ. ಅತ್ಯಂತ ಸುಲಭವಾಗಿ, ಆಟವಾಡಿದಷ್ಟು ಸುಲಭವಾಗಿ ಅದ್ವೈತ ತತ್ತ್ವವನ್ನು ಸ್ಥಾಪಿಸಿದ ಶಂಕರರು ಎಂಬುದು ಇದರ ಅರ್ಥ. (ಇದನ್ನು ಹಾಡಿ ತೋರಿಸುತ್ತಾ) ಇದರಲ್ಲಿ ಅದ್ವೈತ ಎಂಬ ಶಬ್ದದ **ಅ** ಅಕ್ಷರವನ್ನು ಒತ್ತಿ ಹಾಡಿದರೆ ಮಾತ್ರ ಅದು ಉದ್ದೇಶಿತ ಅರ್ಥವನ್ನು ಕೊಡುತ್ತದೆ. ನಾವು ನಿಜವಾಗಿ ಲಕ್ಷ್ಯ ಕೊಟ್ಟು ಹಾಡಿದರೆ ಯಾವ ಪ್ರಯತ್ನವೂ ಇಲ್ಲದೆ ಸರಿಯಾದ ಅರ್ಥ ಬರುವಂತೆ ಹಾಡಬಹುದು. ಮೇಲೆ ಹೇಳಿದ ಗಾಯಕರು ಅರ್ಥವನ್ನು ಕೆಡಿಸದೆ ಸರಿಯಾಗಿ ಹಾಡುತ್ತಾರೆ. ಇದಕ್ಕೆ ಲಕ್ಷ್ಯ ಕೊಡದವರು 'ಪರಮಾ' ಎಂಬ ಶಬ್ದವನ್ನು ಎಳೆದು ಅನಂತರ 'ದ್ವೈತ ಸ್ಥಾಪನ ಲೀಲಮ್' ಎಂದು ಹಾಡುತ್ತಾ ಅದ್ವೈತ ಆಚಾರ್ಯನನ್ನು ದ್ವೈತ ಆಚಾರ್ಯನನ್ನಾಗಿ ಪರಿವರ್ತಿಸಿಬಿಡುತ್ತಾರೆ (ಮುಕ್ತವಾಗಿ ನಗುತ್ತಾರೆ). ಸಂಗೀತದಲ್ಲಿ ದ್ವೈತ ಅದ್ವೈತ ಎಂಬ ಭೇದವಿಲ್ಲ. ಸಂಗೀತ ಮಾತ್ರ ಮುಖ್ಯ. ಸಂಗೀತವು ಹಾಡುಗಾರನ ಮನಸ್ಸನ್ನು ಹಾಡಿನಲ್ಲಿ ಕೀರ್ತಿಸಲ್ಪಟ್ಟಿರುವ ದೇವರಲ್ಲಿ ಏಕೀಕರಣಗೊಳಿಸುತ್ತದೆ. ನೀವು ಈ ಕೀರ್ತನೆಯನ್ನು ಹಾಡುವುದನ್ನು ನಾವು ಕೇಳಿ ಬಲ್ಲೆವು. ನಿಮ್ಮ ಸಂಗೀತದ ಸಾಮರ್ಥ್ಯದ ಬಗ್ಗೆ ನಾವು ಹೇಳಬೇಕಾದುದು ಏನೂ ಇಲ್ಲ. ಸಾಹಿತ್ಯದ ಭಾಗವನ್ನು ನೀವು ಸರಿಯಾಗಿ ಹಾಡುವಿರಿ. ಆದ್ದರಿಂದಲೇ ನಾವು ನಿಮ್ಮನ್ನು ಇಲ್ಲಿಗೆ ಕರೆಸಿದುದು.

''ನನ್ನ ಈ ದರ್ಬಾರಿನಲ್ಲಿ ಬರೀ ಕಲ್ಲುಮುಳ್ಳುಗಳು ಇವೆ. ಪಕ್ಕವಾದ್ಯಗಳಿಲ್ಲ. ತಂಬೂರಿಯ ಶ್ರುತಿಯೂ ಇಲ್ಲ. ಇಷ್ಟೆಲ್ಲ ಅನಾನುಕೂಲಗಳಿದ್ದರೂ ದಯವಿಟ್ಟು ನನಗಾಗಿ ಈ ಕೃತಿಯನ್ನು ಹಾಡಿ.''

ಅರಿಯಕುಡಿಯವರು 'ಶ್ರೀ ಸುಬ್ರಹ್ಮಣ್ಯಾಯ ನಮಸ್ತೇ' ಎಂಬ ಮುತ್ತುಸ್ವಾಮಿ ದೀಕ್ಷಿತರ ಕೀರ್ತನೆಯನ್ನು ಅದ್ಭುತವಾಗಿ ಹಾಡಿದರು. ಅದೊಂದು ಅಪರೂಪದ ಸಂಗೀತ ರಸದೌತಣವಾಗಿತ್ತು. ಪಕ್ಕವಾದ್ಯಗಳಾವುವೂ ಇಲ್ಲದಿದ್ದರೂ ಸಂಗೀತ ಪೂರ್ಣವಾಗಿ ಹೊರಹೊಮ್ಮಿತು. ಪರಮಾಚಾರ್ಯರು ಕಣ್ಣುಗಳನ್ನು ಮುಚ್ಚಿಕೊಂಡು ಪೂರ್ಣ ಏಕಾಗ್ರತೆಯಿಂದ ಆಲಿಸಿದರು. ❇

### ಸಂಗೀತದ ಪ್ರವರ್ತಕನಾರು?

**ಸಂಸಾರದುಃಖದಗ್ಧಾನಾಂ ಉತ್ತಮಾನಾಮನುಗ್ರಹಾತ್ ।**
**ಪ್ರಭುಣಾ ಶಂಕರೇಣಾತ್ರ ಗೀತವಿದ್ಯಾ ಪ್ರಕಾಶಿತಾ ॥**

'ಸಂಸಾರದುಃಖದಿಂದ ದಗ್ಧರಾಗಿರುವ ಉತ್ತಮರ ಅನುಗ್ರಹಕ್ಕಾಗಿ ಭಗವಾನ್ ಶಂಕರನು ಸಂಗೀತ ವಿದ್ಯೆಯನ್ನು ಪ್ರಕಾಶಪಡಿಸಿರುವನು.'

*— ಶ್ರೀ ವಿದ್ಯಾರಣ್ಯರ 'ಸಂಗೀತಸಾರ.'*

# ಸ್ವಾಮಿ ವಿವೇಕಾನಂದರು ಮತ್ತು ಸಂಗೀತ

**ಸ್ವಾಮಿ ಹರ್ಷಾನಂದ**

ಸ್ವಾಮಿ ವಿವೇಕಾನಂದರು ಜಗತ್ಪ್ರಸಿದ್ಧರಾಗುವ ಮುನ್ನ, ಶ್ರೀರಾಮಕೃಷ್ಣರ ಬಳಿಗೆ ಹೋಗಿಬರುತ್ತಿದ್ದಾಗಲೇ ತಮ್ಮ ಅಸಾಧಾರಣ ವಿದ್ವತ್ತು, ಪ್ರತಿಭೆ ಹಾಗೂ ಗಾನಮಾಧುರ್ಯದಿಂದ ಶ್ರೀರಾಮಕೃಷ್ಣರ ಹಾಗೂ ಇತರರ ಮೆಚ್ಚುಗೆಗೆ ಪಾತ್ರರಾಗಿದ್ದರು. ಪ್ರಸಿದ್ಧ ಸಂಗೀತಗಾರರ ಗರಡಿಯಲ್ಲಿ ಪಳಗಿದ ಅವರು ತಮ್ಮ ಸಂಗೀತ ಜ್ಞಾನವನ್ನು ಭಕ್ತಿ, ಉಪಾಸನೆಗಳಿಗೆ ಬಳಸಿಕೊಂಡರು. ರಾಮಕೃಷ್ಣ ಮಹಾಸಂಘದ ಆಂಗ್ಲ ಮಾಸಪತ್ರಿಕೆ 'The Vedanta Kesari' ಯ ೧೯೬೫ರ ಜನವರಿ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಕನ್ನಡ ಅನುವಾದವಿದು. ಲೇಖಕರಾದ ಪೂಜ್ಯ ಸ್ವಾಮೀಜಿಯವರು ಪ್ರಸ್ತುತ ಅವರು ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರು. ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಅಪಾರ ವಿದ್ವತ್ತನ್ನು ಹೊಂದಿರುವ ಸ್ವಾಮೀಜಿಯವರ ಹಲವಾರು ಪುಸ್ತಕಗಳು ಅತ್ಯಂತ ಪ್ರಸಿದ್ಧವಾಗಿವೆ. ಪೂಜ್ಯರು ಉತ್ತಮ ವಾಗ್ಮಿಗಳು ಮತ್ತು ಸಂಗೀತಗಾರರು ಕೂಡ ಹೌದು.

"ಮಾನವನ ಜಾಗತಿಕ ಭಾಷೆಯೇ ಸಂಗೀತ" ಎನ್ನುತ್ತಾರೆ ಲಾಂಗ್‌ಫೆಲೋ ಎಂಬ ಕವಿ.[೧] ಅದನ್ನು ಗಂಧರ್ವರ ವಾಣಿ ಯೆಂದೂ ಬಣ್ಣಿಸಲಾಗಿದೆ.[೨] ಜೇಮ್ಸ್ ಬ್ರಾಮ್ಸ್‌ಟನ್ ಎಂಬವನು, "ಅದಕ್ಕೆ ವನ್ಯಮೃಗವನ್ನೂ ಸಂತೈಸುವ ಸೌಂದರ್ಯವಿದೆ" ಎನ್ನುತ್ತಾನೆ.[೩] ಷೇಕ್ಸ್‌ಪಿಯರ್ ತನ್ನ 'ಮರ್ಚಂಟ್ ಆಫ್ ವೆನಿಸ್' ನಾಟಕದಲ್ಲಿ,

ಯಾರ ಆಂತರ್ಯದಲ್ಲಿ ಸಂಗೀತವಿಲ್ಲವೋ;
ನಾದಮಾಧುರ್ಯಗಳ ಲಯಕೆ ಅವನು ಕರಗನೊ,
ಸಲ್ಲುವನವನು ಮೋಸ-ವಂಚನೆಯ ಕೊಳೆಗೆ

— ಎನ್ನುತ್ತಾನೆ.[೪]

"ಎಲ್ಲ ಬಗೆಯ ಉಪದೇಶಗಳನ್ನು ಮೀರಿ ನೆನಪಿನಲ್ಲಿ ಉಳಿಯುವುದೇ ಸಂಗೀತ" ಎನ್ನುತ್ತಾನೆ, ಹೆನ್ರಿ ಗೈಲ್ಸ್. ಈ ಕೆಲವು ಶ್ರೇಷ್ಠ ವ್ಯಕ್ತಿಗಳ ಹೇಳಿಕೆಗಳು ಮಾನವನ ಜೀವನದಲ್ಲಿ ಸಂಗೀತದ ಪ್ರಾಮುಖ್ಯವನ್ನು ತಿಳಿಸಿಕೊಡುತ್ತವೆ.

ಸಂಗೀತದ ಉಗಮವು ಭಾರತದ ಇತಿಹಾಸಪೂರ್ವ ಯುಗದಲ್ಲಿ ಹುದುಗಿಹೋಗಿದೆ. ಅದರ ಪ್ರಾಚೀನತೆಯು ಋಗ್ವೇದ ಹಾಗೂ ಸಾಮವೇದಗಳಷ್ಟು ಹಿಂದೆ, ಅಂದರೆ ಕ್ರಿ.ಪೂ. ೪೫೦೦ ರಿಂದ ಕ್ರಿ.ಪೂ. ೨೦೦ ವರ್ಷಗಳಷ್ಟು ಹಳೆಯದಾಗುತ್ತದೆ. ಇತರ ದೇಶಗಳಲ್ಲಿ ಸಂಗೀತ ಇನ್ನೂ ವಿಕಾಸಹೊಂದಲು ಆರಂಭಗೊಂಡಿದ್ದಾಗ, ಅಂದರೆ ಜಾನಪದ ಸಂಗೀತದ ಹಂತದಲ್ಲಿದ್ದಾಗಲೇ ಭಾರತೀಯ ಸಂಗೀತವು ಶ್ರುತಿ, ಸ್ವರ, ರಾಗ, ಲಯ, ತಾಳ - ಎಂಬೀ ಸುವ್ಯವಸ್ಥಿತವಾದ ಶಾಸ್ತ್ರವಾಗಿ ರೂಪುಗೊಂಡಿತ್ತು. ಪ್ರಾಚೀನ ಉಪನಿಷತ್ತುಗಳಿಂದ ನಾರದ ಪರಿವ್ರಾಜಕ ಉಪನಿಷತ್ತು ಹಾಗೂ



ಗರ್ಭೋಪನಿಷತ್ತುಗಳಲ್ಲೇ ನಮಗೆ ಸಪ್ತಸ್ವರ ಪದ್ಧತಿಯ ಸ್ಪಷ್ಟ ಉಲ್ಲೇಖಗಳು ಕಂಡುಬರುತ್ತವೆ.

ಪ್ರಾಚೀನ ಭಾರತದ ಇತರ ಕಲೆ, ಶಾಸ್ತ್ರಗಳಂತೆ ಸಂಗೀತ ಹಾಗೂ ನೃತ್ಯ ಇವೆರಡಕ್ಕೂ ಧರ್ಮವೇ ತಳಹದಿಯಾಗಿತ್ತು. (ವಾಸ್ತವವಾಗಿ ಈ ಎರಡೂ ಕಲೆಗಳು ಆರಂಭದಲ್ಲಿ ಒಂದೇ ಕಲೆಯ ಎರಡು ಆಯಾಮಗಳಾಗಿದ್ದವು.) ಅವೆರಡರ ಮೂಲ ಸ್ವಭಾವ ಪ್ರಧಾನವಾಗಿ ಧಾರ್ಮಿಕವಾಗಿತ್ತು. ಭಗವಂತನಿಗೆ ಭಕ್ತಿಯನ್ನು ವ್ಯಕ್ತಪಡಿಸುವ ಹಾಗೂ ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವ ಒಂದು ಮಾರ್ಗವಾಗಿ ಈ ಕಲೆಗಳನ್ನು ಬಳಸಲಾಗುತ್ತಿತ್ತು.

೧. Outer-Mer.
೨. ಕಾರ್ಲೈಲನ 'Essays.'
೩. Man of Taste.
೪. Act V, Sc.1

'ನಾದೋಪಾಸನೆ' (ಸಂಗೀತದ ಮೂಲಕ ಮಾಡುವ ಧ್ಯಾನ) ಎಂಬ ಪದವೇ ತಿಳಿಸುವಂತೆ, ಆಧ್ಯಾತ್ಮಿಕ ಜೀವನದಲ್ಲಿ ಅದು ಅತ್ಯಂತ ಪರಿಣಾಮಕಾರಿಯಾದ ಕಲೆಯೆಂದೇ ಪರಿಗಣಿಸಲಾಗುತ್ತಿತ್ತು. ಪ್ರಾಚೀನ ಕಾಲದ ನಾರದ ಹಾಗೂ ತುಂಬುರು, ಅನಂತರ ಐತಿಹಾಸಿಕ ಯುಗದ ತುಳಸೀದಾಸ, ಮೀರಾಬಾಯಿ, ಕಬೀರ, ನಾನಕ, ರಾಮಪ್ರಸಾದ, ಕಮಲಾಕಾಂತ, ತುಕಾರಾಮ, ಪುರಂದರದಾಸ ಹಾಗೂ ತ್ಯಾಗರಾಜರೇ ಮೊದಲಾದವರು ಇಂಥ ಆಧ್ಯಾತ್ಮಿಕ ಶಕ್ತಿಗೆ ಉದಾಹರಣೆಯಾಗಿದ್ದಾರೆ. ಈ ಮಹಾನ್ ಸಂತರು ಹಾಗೂ ಭಗವದ್ಭಕ್ತರು ಸಂಗೀತವನ್ನು ದೈವೀಸಾಕ್ಷಾತ್ಕಾರದ ಒಂದು ಸಾಧನವಾಗಿ ಬಳಸಿದರು; ಅಷ್ಟೇ ಅಲ್ಲದೆ, ನಮ್ಮ ಧಾರ್ಮಿಕ ಇತಿಹಾಸದ ಅತ್ಯಂತ ಸಂದಿಗ್ಧದ ಸಮಯಗಳಲ್ಲಿ ಜನಸಾಮಾನ್ಯರ ನಡುವೆ ನಿಜವಾದ ಧರ್ಮವನ್ನು ಹರಡುವುದಕ್ಕೂ ಸಂಗೀತವನ್ನು ಬಳಸಿಕೊಂಡರು. ಹೀಗಾಗಿ ಭಾರತೀಯ ಸಂಗೀತದ ಸ್ವರೂಪವು ನಿಜವಾಗಿ ಭಕ್ತಿಪರವಾದದ್ದು; ಅದನ್ನು ''ಭಜನೆ'' ಎಂದು ಕರೆಯುವುದೇ ಸೂಕ್ತ.

'ಭಜನೆ' ಎಂದು ಸರಿಯಾದ ಅರ್ಥದಲ್ಲಿ ಕರೆಯಬೇಕಾದರೆ, ಅದು ಕೆಲವೊಂದು ಲಕ್ಷಣಗಳನ್ನು ಹೊಂದಿರಬೇಕು. ಈ ಲಕ್ಷಣಗಳನ್ನು ಹೀಗೆ ಪಟ್ಟಿ ಮಾಡಬಹುದು: ಉತ್ತಮ ಶಾರೀರ, ಪಕ್ಕವಾದ್ಯಗಳು, ಸಂಗೀತದ ಶಾಸ್ತ್ರ-ವ್ಯಾಕರಣ ಅಂಶದ ತಿಳುವಳಿಕೆ, ಅತ್ಯುತ್ತಮ ಕೃತಿ, ಶುದ್ಧ ಉಚ್ಚಾರಣೆ, ಹಾಗೂ ಭಕ್ತಿ. ಭಜನೆಗೆ ಸುಮಧುರ ಶಾರೀರ ಅನಿವಾರ್ಯವಾದ ಅಂಶ. ಅದು ಇಲ್ಲದಿದ್ದರೆ 'ಭಜನೆ'ಯೆಂಬುದು ಭಜನೆಯೇ ಅಲ್ಲ. ಹಲವು ಸೊನ್ನೆಗಳ ಹಿಂದೆ 'ಒಂದು' ಎಂಬ ಅಂಕಿ ಇಲ್ಲದಿದ್ದರೆ ಹೇಗೋ ಹಾಗೆ. ಉಳಿದವೆಲ್ಲ ಬರೀ ಸೊನ್ನೆಗಳು, ಅಷ್ಟೆ. ಅದೇ ರೀತಿ ಪಕ್ಕವಾದ್ಯಗಳು, ಸಂಗೀತ ಶಾಸ್ತ್ರ, ವ್ಯಾಕರಣಾಂಶಗಳ ತಿಳುವಳಿಕೆ ಇತ್ಯಾದಿಗಳು ಭಜನೆಯ ಸೌಖ್ಯವನ್ನು ಹೆಚ್ಚಿಸುವುವು — ಆದರೆ ಇವೆಲ್ಲವೂ ಸುಮಧುರ ಕಂಠವಿದ್ದರೆ ಮಾತ್ರ.

ಹಾಡುಗಾರನ ಶಾರೀರವು ಸುಮಧುರವಾಗಿಯೂ, ಅತ್ಯುತ್ತಮವಾಗಿಯೂ ಇದ್ದು, ತಂಬೂರಿ-ತಬಲಾ, ಸರೋದ್-ಸಿತಾರ್, ವೀಣೆ, ಪಿಟೀಲು ಮೊದಲಾದ ವಾದ್ಯಗಳನ್ನು ಶ್ರುತಿ ಮಾಡಿದ್ದರೆ, ಅದು ನಿಸ್ಸಂದೇಹವಾಗಿಯೂ ಒಟ್ಟು ಪರಿಣಾಮವನ್ನು ಹೆಚ್ಚಿಸುವುದು. ಸಂಗೀತದ ಜ್ಞಾನ ಹಾಗೂ ತಾಂತ್ರಿಕತೆಯನ್ನು ಸೂಕ್ತವಾಗಿ ಮೇಳೈಸಿಕೊಂಡರೆ ಇಡೀ ಸಂಗೀತ ಕಾರ್ಯಕ್ರಮವೇ ನಾಜೂಕಿನ ಸ್ಪರ್ಶದಿಂದ ಕಳೆಗಟ್ಟುವುದು.

ಈ ಎಲ್ಲ ಹೊಂದಾಣಿಕೆಗಳೂ ಅರ್ಥಪೂರ್ಣವಾಗುವುದು ಹಾಡುವ ಕೃತಿ ಕಾವ್ಯಾತ್ಮಕವಾಗಿದ್ದರೆ ಹಾಗೂ ಉನ್ನತ ಭಾವನೆಗಳಿಂದ ಕೂಡಿದ್ದರೆ ಮಾತ್ರ. ಇವುಗಳಿಲ್ಲದೆ, ಉಳಿದ ಎಲ್ಲ ಅಂಶಗಳು ಹೊಂದಿಕೊಂಡಿದ್ದರೂ ಕೂಡ ಒಟ್ಟು ಸಂಗೀತ ವ್ಯರ್ಥವಾಗುವುದು. ಉತ್ತಮ ಕೃತಿಯನ್ನು ಭಾವಪೂರ್ಣವಾಗಿಯೂ, ಶುದ್ಧ ಶ್ರುತಿ-ಸ್ವರಗಳಿಂದಲೂ ಕೂಡಿ ಹಾಡುವ ಮೂಲಕ ಅದರ ನಿಜವಾದ ಭಾವ ಹಾಗೂ ಅರ್ಥವನ್ನು ಹೊರಹೊಮ್ಮಿಸಿದಾಗ, ಸಂಗೀತದ ಒಟ್ಟು ಪರಿಣಾಮ ಅದ್ಭುತವಾಗಿರುವುದು.

ಸ್ವಾಮಿ ವಿವೇಕಾನಂದರಿಗೆ ನಿಸರ್ಗದತ್ತವಾಗಿಯೇ ಸಂಗೀತದ ಎಲ್ಲ ಪ್ರಾಥಮಿಕ ಆವಶ್ಯಕತೆಗಳೂ ವರದಾನವೆಂಬಂತೆ ಒದಗಿಬಂದಿದ್ದವು. ಈ ವರದಾನವನ್ನು ಅವರು ಸಂಗೀತದ ತಾಂತ್ರಿಕತೆಯನ್ನು ಕುರಿತ ತಿಳುವಳಿಕೆಯಿಂದ ಹಾಗೂ ಸತತ ಅಭ್ಯಾಸದಿಂದ ಪರಿಷ್ಕರಿಸಿಕೊಂಡರು.

ಅವರದು ಶ್ರೀಮಂತವಾಗಿ ಅನುರಣಿಸುವ ಕಂಠ; ಅತ್ಯಂತ ಮಧುರವಾದ ಧ್ವನಿ; ಕೆಲವೊಮ್ಮೆ ಅದು ಚೀನೀ ಗಾಂಗ್‌ನಂತೆ ಭಾಸವಾಗುತ್ತಿತ್ತು. ಅದು ಅವರ ಹೆತ್ತವರಿಂದ ಬಳುವಳಿಯಾಗಿ ಬಂದುದು. ಅಷ್ಟೊಂದು ಮಧುರವಾದ ಆ ಧ್ವನಿಯೇ ಶ್ರೀರಾಮಕೃಷ್ಣರು ಆಗಾಗ ಅವರನ್ನು ಹಾಡಲು ಕೋರುವಂತೆ ಮಾಡಿತು. ನರೇಂದ್ರನು ದಕ್ಷಿಣೇಶ್ವರದಲ್ಲಿ ಎದುರಿಗೆ ಹಾಡಿದ ಮೊದಲ ಹಾಡೇ ಶ್ರೀರಾಮಕೃಷ್ಣರನ್ನು ಸಮಾಧಿಯ ಸ್ಥಿತಿಗೆ ಏರಿಸಿತ್ತು. ಅಬು ಪರ್ವತದಲ್ಲಿ ನಡೆದ ಈ ಘಟನೆಯು ಅವರ ಸಂಗೀತದ ಮಾಧುರ್ಯವನ್ನು ಕುರಿತು ಚೆನ್ನಾಗಿ ಬೆಳಕು ಚೆಲ್ಲುತ್ತದೆ: ''ಸ್ವಲ್ಪ ಸಮಯದಲ್ಲೇ ಸ್ವಾಮೀಜಿಯವರೊಂದಿಗೆ ಸಾಯಂಕಾಲ ವಾಯುವಿಹಾರಕ್ಕೆ ಹೋಗುತ್ತಿದ್ದ ಅನುಯಾಯಿಗಳ ಒಂದು ಬಳಗ ನಿರ್ಮಾಣಗೊಂಡಿತು. ಒಂದು ದಿನ ಅವರು ಬೈಲಿ ವಾಕ್ ಎಂಬ ಪರ್ವತ ಪ್ರವಾಸೀ ತಾಣದುದ್ದಕ್ಕೂ ನಿಸರ್ಗ ಸೌಂದರ್ಯವನ್ನು ಆಸ್ವಾದಿಸುತ್ತಾ ವಾಯುವಿಹಾರ ಮಾಡುತ್ತಿದ್ದರು. ಕೆಳಭಾಗದಲ್ಲಿ ಅಬು ಪರ್ವತದ ಸೆರಗಿನ ಸರೋವರ ಮೈಚಾಚಿ ಮಲಗಿತ್ತು. ಸ್ವಾಮೀಜಿ ತಮ್ಮ ಸ್ನೇಹಿತರೊಂದಿಗೆ ವಾಯುವಿಹಾರ ಮಾಡುವುದನ್ನು ನಿಲ್ಲಿಸಿ, ಬಂಡೆಗಳ ನಡುವೆ ಒಂದೆಡೆ ಕುಳಿತರು. ಅಲ್ಲಿ ಅವರು ಹಾಡತೊಡಗಿದರು. ಅವರ ಹಾಡು ಹಲವು ಗಂಟೆಗಳವರೆಗೂ ಮುಂದುವರಿಯಿತು. ಅಲ್ಲಿಗೆ ವಾಯುವಿಹಾರ ಮಾಡಲು ಬಂದಿದ್ದ ಕೆಲವು ಐರೋಪ್ಯರೂ ಅವರ ಗಾನಮಾಧುರ್ಯವನ್ನು ಕೇಳಿ ಸ್ತಬ್ಧರಾಗಿ ನಿಂತರು. ಅಂಥ ಹಾಡನ್ನು ಹಾಡುತ್ತಿದ್ದ ಮಹಾನುಭಾವನ ಕ್ಷಣಿಕ ದರ್ಶನವನ್ನಾದರೂ ಪಡೆಯೋಣ ಎಂದು ಅವರು ಕೂಡ ಹಲವು ಗಂಟೆಗಳ ಕಾಲ ಕಾದು ನಿಂತಿದ್ದರು. ಕೊನೆಗೂ ಅವರು ಹಾಡು ಮುಗಿಸಿ, ಕೆಳಗಿಳಿದು ಬಂದರು. ಕಾದಿದ್ದವರು ಅವರ ಬಳಿಗೆ ಬಂದು, ಅವರ ಮಧುರ ಧ್ವನಿಗಾಗಿ ಹಾಗೂ ಅವರ ಭಾವೋನ್ನತ್ತ ಸಂಗೀತಕ್ಕಾಗಿ ಅವರನ್ನು ಅಭಿನಂದಿಸಿದರು.''[೫]

ವಿದ್ಯಾರ್ಥಿಯಾಗಿದ್ದಾಗಲೇ ಸ್ವಾಮೀಜಿ ಸಂಗೀತದಲ್ಲಿ ಉನ್ನತ ಮಟ್ಟದ ಪ್ರಾವೀಣ್ಯವನ್ನು ಸಂಪಾದಿಸಿದ್ದರು. ಅವರು ಆ ಕಾಲದ ಪ್ರಸಿದ್ಧ ಸಂಗೀತಗಾರರಾಗಿದ್ದ ಅಹಮದ್ ಖಾನ್ ಮತ್ತು ಬೇಣಿ ಗುಪ್ತಾ ಅವರಿಂದ ಹಾಡುಗಾರಿಕೆ ಹಾಗೂ ವಾದ್ಯ ಸಂಗೀತವನ್ನು

೫. Life of Swami Vivekananda by Eastern & Western Disciples, p.218.

ಸುವ್ಯಸ್ಥಿತವಾಗಿ ಅಧ್ಯಯನ-ಅಭ್ಯಾಸ ಮಾಡಿದರು. ಹಾಡುಗಾರಿಕೆಯಲ್ಲಿ ಅವರು ಅತ್ಯುತ್ತಮ ಪ್ರಾವೀಣ್ಯವನ್ನು ಸಾಧಿಸಿದ್ದರೂ, ಅವರು ಇತರ ಅನೇಕ ಸಂಗೀತ ವಾದ್ಯಗಳನ್ನೂ ನುಡಿಸಬಲ್ಲವರಾಗಿದ್ದರು. ಭಜನೆಗಳನ್ನು ಹಾಡುವುದರಲ್ಲಿ ಅವರು ವಿಶೇಷ ಸಾಮರ್ಥ್ಯವನ್ನು ಹೊಂದಿದ್ದರು. ಬಂಗಾಳಿ, ಹಿಂದೀ, ಉರ್ದು, ಪರ್ಷಿಯನ್ ಹಾಗೂ ಸಂಸ್ಕೃತ ಮೊದಲಾದ ಭಾಷೆಗಳ ಕೆಲವೊಂದು ಸಂಗೀತ ರಚನೆಗಳನ್ನು ಅವರು ತಿಳಿದಿದ್ದರು. ತಮ್ಮ ಸ್ನೇಹಿತರೊಬ್ಬರು ಸಂಪಾದಿಸಿದ ಬಂಗಾಳಿ ಹಾಡುಗಳ ಗ್ರಂಥವೊಂದಕ್ಕೆ ವಿಸ್ತಾರವಾದ ಮುನ್ನುಡಿ ಬರೆದಿರುವ ಸ್ವಾಮೀಜಿ, ಭಾರತೀಯ ಸಂಗೀತ ಶಾಸ್ತ್ರ ಹಾಗೂ ತಾಂತ್ರಿಕತೆಯ ಬಗ್ಗೆ ಸಾಕಷ್ಟು ಚರ್ಚಿಸಿ ದ್ದಾರೆ. ಈ ವಿದ್ವತ್ಪೂರ್ಣವಾದ ಮುನ್ನುಡಿ ಸಂಗೀತವನ್ನು ಕುರಿತ ಅವರ ಆಳವಾದ ಜ್ಞಾನವನ್ನು ವ್ಯಕ್ತಗೊಳಿಸುತ್ತದೆ.

ಭಾಗಲ್ಪುರದ ಶ್ರೀ ಮನ್ಮಥನಾಥ ಚೌಧುರಿಯವರ ಮನೆಯಲ್ಲಿ ನಡೆದ ಈ ಕೆಳಗಿನ ಘಟನೆ ಸ್ವಾಮೀಜಿಯವರಲ್ಲಿ ಅಂತರ್ಗತವಾಗಿದ್ದ ಪರಿಪೂರ್ಣ ಸಂಗೀತಗಾರನ ವ್ಯಕ್ತಿತ್ವವನ್ನು ಪ್ರಕಾಶಪಡಿಸುತ್ತದೆ: ''೧೮೯೦ರ ಆಗಸ್ಟ್ ತಿಂಗಳ ಒಂದು ಮುಂಜಾನೆ ಸ್ವಾಮಿ ವಿವೇಕಾನಂದರು ಸ್ವಾಮಿ ಅಖಂಡಾನಂದರೊಡನೆ ಅನಿರೀಕ್ಷಿತವಾಗಿ ನನ್ನ ಮನೆಗೆ ಬಂದರು. ಅವರು ಸಾಧಾರಣ ಸಾಧುಗಳಿರಬೇಕೆಂದು ಭಾವಿಸಿದ ನಾನು ಅವರತ್ತ ಹೆಚ್ಚು ಗಮನ ಕೊಡಲಿಲ್ಲ... ಒಂದು ಸಲ ಅವರು ತಮ್ಮೊಳಗೇ ಒಂದು ರಾಗವನ್ನು ಉಲಿಯುತ್ತಿದ್ದುದನ್ನು ನಾನು ಗಮನಿಸಿದೆ. 'ನೀವು ಹಾಡಬಲ್ಲಿರಾ?' ಎಂದು ಅವರನ್ನು ನಾನಾಗ ಕೇಳಿದೆ. 'ಬಹಳ ಸ್ವಲ್ಪ ಮಾತ್ರ' ಎಂದರವರು. ನಾವು ಬಹಳಷ್ಟು ಒತ್ತಾಯಿಸಿದ ಬಳಿಕ ಅವರು ಹಾಡಿದರು. ಆಶ್ಚರ್ಯದ ವಿಷಯವೆಂದರೆ, ಕಲಿಕೆಯಲ್ಲಿ ಹೇಗೋ ಸಂಗೀತದಲ್ಲೂ ಅವರದು ಅದ್ಭುತವಾದ ಸಾಧನೆ. ಮರುದಿನ ನಾನು ಅವರನ್ನು ಕೇಳಿದೆ, ಅಲ್ಲಿಗೆ ಕೆಲವು ಮಂದಿ ಸಂಗೀತಜ್ಞರನ್ನು ಹಾಗೂ ಹಾಡುಗಾರರನ್ನು ಕರೆಸಲೇ ಎಂದು; ಅದಕ್ಕೆ ಅವರು ಸಮ್ಮತಿಸಿದರು. ನಾನು ಹಲವು ಮಂದಿ ಸಂಗೀತಗಾರರನ್ನು ಕೇಳಿಕೊಂಡೆ — ಅವರಲ್ಲಿ ಬಹಳ ಮಂದಿ ಉಸ್ತಾದ್‌ಗಳಾಗಿದ್ದರು, ಅಥವಾ ಪ್ರಸಿದ್ಧ ಕಲಾವಿದರಾಗಿದ್ದರು. ಸಂಗೀತ ರಾತ್ರಿ ಒಂಬತ್ತು, ಹೆಚ್ಚೆಂದರೆ ಹತ್ತುಘಂಟೆಗೆ ಮುಗಿದೀತೆಂದು ಭಾವಿಸಿದ ನಾನು ಅತಿಥಿಗಳಿಗೆ ರಾತ್ರಿಯ ಊಟಕ್ಕೆ ವ್ಯವಸ್ಥೆ ಮಾಡಿರಲಿಲ್ಲ. ಸ್ವಾಮೀಜಿ ತಡೆಯಿಲ್ಲದೆ ಬೆಳಗಿನ ಜಾವ ಎರಡು ಅಥವಾ ಮೂರುಗಂಟೆಯವರೆಗೂ ಹಾಡಿದರು. ಅಲ್ಲಿದ್ದ ಪ್ರತಿಯೊಬ್ಬರೂ ಅವರ ಸಂಗೀತದಲ್ಲಿ ಎಷ್ಟೊಂದು ಮುಳುಗಿ ಹೋದರೆಂದರೆ, ಅವರಿಗೆ ಹಸಿವು, ಬಾಯಾರಿಕೆಗಳು ಮರೆತುಹೋದವು. ಕಾಲದ ಪರಿವೆಯೇ ಇಲ್ಲದೆ ಹೋಯಿತು. ಯಾರೊಬ್ಬರೂ ತಮ್ಮ ಕುರ್ಚಿಯಿಂದ ಏಳಲಿಲ್ಲ; ಅವರಿಗೆ ಮನೆಗೆ ಮರಳುವ ಆಲೋಚನೆಯೂ ಬರಲಿಲ್ಲ. ಸ್ವಾಮೀಜಿಗೆ ಪಕ್ಕವಾದ್ಯ ನುಡಿಸುತ್ತಿದ್ದ ಕೈಲಾಸ ಬಾಬು ಮಾತ್ರ ಕೊನೆಗೂ ನಿಲ್ಲಿಸಬೇಕಾಯಿತು. ಏಕೆಂದರೆ ಅವರ ಬೆರಳುಗಳು ಬಿಗಿಯಾಗಿ, ಜೋಮು ಹಿಡಿದಿದ್ದವು. ಅಂಥಾ ಅಸಾಧಾರಣ ಚೈತನ್ಯವನ್ನು ನಾನು ಬೇರೆ ಯಾರಲ್ಲೂ ಕಂಡಿಲ್ಲ; ಮುಂದೆ ಕಾಣುವ ನಿರೀಕ್ಷೆಯೂ ನನಗಿಲ್ಲ. ಮರುದಿನ ಸಾಯಂಕಾಲದ ಹೊತ್ತಿಗೆ ಹಿಂದಿನ ದಿನ ಬಂದಿದ್ದ ಅತಿಥಿಗಳೆಲ್ಲರೂ ಮತ್ತೆ ಬಂದು ಸೇರಿದರು — ಯಾವುದೇ ಆಮಂತ್ರಣವಿಲ್ಲದಿದ್ದರೂ ಕೂಡ. ಪಕ್ಕವಾದ್ಯ ನುಡಿಸಿದವರೂ ಬಂದಿದ್ದರು. ಆದರೆ ಅಂದು ಸಾಯಂಕಾಲ ಸ್ವಾಮೀಜಿ ಹಾಡಲಿಲ್ಲ. ಅಂದು ಎಲ್ಲರಿಗೂ ನಿರಾಸೆಯಾಯಿತು.'' [೬]

ಸಂಗೀತದ ಬಗ್ಗೆ ಸ್ವಾಮೀಜಿಯವರ ದೃಷ್ಟಿಕೋನವೇನೆಂಬುದನ್ನು ನೀಡದೆ ಹೋದರೆ ಈ ಲೇಖನ ಸಂಪೂರ್ಣವಾಗದು. 'Addresses on Bhakti Yoga' ದಲ್ಲಿ ಅವರು ಹೇಳುತ್ತಾರೆ, ಮಾನವನ ಮನಸ್ಸಿನ ಮೇಲೆ ಸಂಗೀತವು ಅಪಾರ ಪರಿಣಾಮವನ್ನುಂಟು ಮಾಡುತ್ತದೆ ಎಂದು: ''ಮಾನವನ ಮನಸ್ಸಿನ ಮೇಲೆ ಸಂಗೀತವು ಉಂಟುಮಾಡುವ ಅದ್ಭುತ ಪರಿಣಾಮ ಎಂಥದೆಂದರೆ, ಅದು ಒಂದು ಕ್ಷಣದಲ್ಲಿ ಮನಸ್ಸನ್ನು ಏಕಾಗ್ರಗೊಳಿಸುವುದು. ಮಂದಬುದ್ಧಿಯ, ಅಜ್ಞರಾದ, ಕೆಳಹಂತದ, ಮೃಗಕ್ಕಿಂತ ಯಾವ ರೀತಿಯಲ್ಲೂ ಹೆಚ್ಚಲ್ಲದ ಜನರೂ ಕೂಡ ಬೇರಾವ ಸಮಯದಲ್ಲೂ ತಮ್ಮ ಮನಸ್ಸನ್ನು ಏಕಮುಖವಾಗಿಸದಿದ್ದರೂ, ಚಿತ್ತಾಕರ್ಷಕವಾದ ಸಂಗೀತವನ್ನು ಕೇಳಿದಾಗ ಅವರ ಮನಸ್ಸು ತಲ್ಲೀನವಾಗುವುದು ಹಾಗೂ ಏಕಾಗ್ರಗೊಳ್ಳುವುದು. ಪ್ರಾಣಿಗಳ ಮನಸ್ಸೂ ಕೂಡ ... ಸಂಗೀತದಿಂದ ತನ್ಮಯತೆಯನ್ನು ಹೊಂದುವುದು.'' [೭]

ಸ್ವಾಮೀಜಿ ಕ್ಯಾಲಿಫೋರ್ನಿಯಾದಲ್ಲಿ ನೀಡಿದ 'The Ramayana' ಎಂಬ ಪ್ರವಚನದಲ್ಲಿ ಸಂಗೀತ ಮತ್ತು ನೃತ್ಯಗಳು ಕೂಡ ಧರ್ಮವೇ ಎಂದು ಪರಿಗಣಿಸಬೇಕು ಎನ್ನುತ್ತಾರೆ: ''ಭಾರತದಲ್ಲಿ ನಾಟಕವೆಂದರೆ ಅದೊಂದು ಪವಿತ್ರವಾದ ವಿಷಯ. ನಾಟಕ, ಸಂಗೀತಗಳನ್ನು ಧರ್ಮವೆಂದೇ ಪರಿಗಣಿಸಲಾಗುತ್ತಿದೆ. ಸಂಗೀತದಲ್ಲಿ ಒಬ್ಬನ ಆತ್ಮವೆಲ್ಲ ತುಂಬಿಕೊಂಡಿದ್ದರೆ, ಅವನು ಸಾಕ್ಷಾತ್ಕಾರ ಹೊಂದುವನು. ಅವನು ಇನ್ನೇನನ್ನೂ ಮಾಡಬೇಕಾಗಿಲ್ಲ. ಧ್ಯಾನ ಕರೆದೊಯ್ಯುವ ಗುರಿಯತ್ತಲೇ ಸಂಗೀತವು ಕರೆದೊಯ್ಯುವುದು'' ಎಂದು ಹೇಳುತ್ತಾರೆ. [೮]

ಅಮೆರಿಕದ ಮಹಿಳೆಯೊಬ್ಬರಿಗೆ ಬರೆದ ಪತ್ರದಲ್ಲಿ ಸ್ವಾಮೀಜಿ, ಸಂಗೀತವು ಆರಾಧನೆಗೆ ಸಮಾನವೆನ್ನುತ್ತಾರೆ: ''ಸಂಗೀತವು ಅತ್ಯುನ್ನತವಾದ ಕಲೆ. ಅರಿಯಬಲ್ಲವರಿಗೆ ಅದೇ ಅತ್ಯುನ್ನತ ಮಟ್ಟದ ಪೂಜೆ.'' [೯]

ತಮ್ಮ ತರಗತಿಯ ಭಾಷಣವೊಂದರಲ್ಲಿ ಅವರು ಪರಿಪೂರ್ಣ ಸಂಗೀತದ ರಹಸ್ಯವೇನೆಂಬುದನ್ನು ಪ್ರಕಟಗೊಳಿಸುತ್ತಾರೆ: ''ಧ್ರುಪದ್

---

೬. ಅಲ್ಲೇ, ಪು.೧೫೫-೬
೭. CW, Vol6, 9.7, 1948 Ed.
೮. ಅಲ್ಲೇ, ಪು. ೭೦
೯. ಅಲ್ಲೇ, ಸಂ.೫, ಪು.೫, ೫ನೇ ಮುದ್ರಣ, ೧೯೪೭.



ಧ್ರುಪದ್ ಸಂಗೀತ

ಹಾಗು ಖಯಾಲ್‌ಗಳಲ್ಲಿ ಶಾಸ್ತ್ರವಿದೆ; ಆದರೆ ನಿಜವಾದ ಸಂಗೀತ ವಿರುವುದು ಕೀರ್ತನೆಯಲ್ಲಿ. ಕಾರಣ, ಅಲ್ಲಿ ಭಾವವಿದೆ. ಭಾವವೇ ಎಲ್ಲದರ ಜೀವ, ಎಲ್ಲದರ ರಹಸ್ಯ. ಧ್ರುಪದ್‌ನಲ್ಲಿರುವ ಶಾಸ್ತ್ರವನ್ನು ಕೀರ್ತನೆಯಲ್ಲಿರುವ ಸಂಗೀತದ ಮೂಲಕ ಹೊರಹೊಮ್ಮಿಸಿದಾಗ ಪರಿಪೂರ್ಣ ಸಂಗೀತದ ಸೃಷ್ಟಿಯಾಗುವುದು.'' [೧೦]

ಇನ್ನೂ ತರಬೇತಿ ಹೊಂದಿರದ ಭಾರತೀಯ ಕಿವಿಗೆ ಪಾಶ್ಚಾತ್ಯ ಸಂಗೀತವು 'ನರಿಗಳು ಊಳಿಡುವಂತೆ' ಕೇಳಬಹುದು! ಪಶ್ಚಿಮ ದೇಶಗಳಿಗೆ ಹೋಗುವ ಮೊದಲು ಸ್ವಾಮೀಜಿಯವರಿಗೂ ಇದೇ ರೀತಿಯ ಅಭಿಪ್ರಾಯವಾಗಿತ್ತು. ಅಲ್ಲಿ ಅವರು ಪಾಶ್ಚಾತ್ಯ ಸಂಗೀತ ವನ್ನು ಕೇಳತೊಡಗಿದರು, ಹಾಗೂ ಅದನ್ನು ಆಳವಾಗಿ ಅಧ್ಯಯನ ಮಾಡತೊಡಗಿದರು. ಪರಿಣಾಮವಾಗಿ, ಅವರು ಅದನ್ನು ಬಹಳ ಮೆಚ್ಚಿಕೊಂಡರಲ್ಲದೆ, ಅಲ್ಲಿನ ಅಚ್ಚುಕಟ್ಟಾದ ಶ್ರುತಿಬದ್ಧತೆಗೆ ವಿಶೇಷ ವಾಗಿ ಮಾರು ಹೋದರು. ಅವರ ಅಭಿಪ್ರಾಯದಂತೆ ಭಾರ ತೀಯ ಸಂಗೀತದಲ್ಲಿ ಈ ಮೇಲಿನ ಗುಣಗಳು ಕಡಿಮೆ.

ಧ್ರುಪದ್ ಅಥವಾ ಕೀರ್ತನೆಯಲ್ಲಿಯೇ ನಿಜವಾದ ಭಾರ ತೀಯ ಸಂಗೀತವಿರುವುದು ಎಂಬುದು ಸ್ವಾಮೀಜಿಯವರ ಖಚಿತ ಅಭಿಪ್ರಾಯವಾಗಿತ್ತು. ಅವುಗಳು ಇಸ್ಲಾಂ ಸಂಸ್ಕೃತಿಯ ಪ್ರಭಾವ ವುಂಟಾಗುವ ಮುನ್ನ ಬೆಳವಣಿಗೆ ಹೊಂದುತ್ತ, ಸ್ಥಿರವಾದ ನೆಲೆ ಯಲ್ಲಿ ಪರಿಷ್ಕರಣೆ ಹೊಂದುತ್ತ ಉನ್ನತಿಗೇರುತ್ತಿದ್ದವು; ಆದರೆ ಹೊಸ ಪ್ರಭಾವ ಅದನ್ನು ಹಾಳುಗೆಡವಿತು. ಸ್ವಾಮೀಜಿ ಆಗಾಗ ಈ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. *(ಅಲ್ಲೇ, ಸಂ. ೫, ಪು. ೨೭೭-೯೭)*

ಸ್ವಾಮಿ ವಿವೇಕಾನಂದರು ಒಬ್ಬರು ಕವಿಯೂ ಹೌದು. ಅವರು ಸಂಸ್ಕೃತದಲ್ಲಿ ಹಾಗೂ ಬಂಗಾಳಿಯಲ್ಲಿ ಕೆಲವು ಸ್ತೋತ್ರ ಗಳನ್ನೂ, ಬಂಗಾಳಿಯಲ್ಲಿ ಇನ್ನು ಕೆಲವು ಹಾಡುಗಳನ್ನೂ ರಚಿಸಿ ದ್ದಾರೆ. ಶಿವನ ಮೇಲೆ ಅವರು ರಚಿಸಿದ '**ನಿಖಿಲ- ಭುವನ-ಜನ್ಮ**' ಎಂಬ ರಚನೆ, ಜಗನ್ಮಾತೆಯ ಮೇಲೆ ರಚಿಸಿದ '**ಕಾ ತ್ವಂ ಶಿವೇ ಶುಭಕರೇ**' ಎಂಬ ರಚನೆ, ಹಾಗೂ ಶ್ರೀರಾಮಕೃಷ್ಣರ ಮೇಲೆ ರಚಿಸಿದ '**ಆಚಂಡಾಲಾಪ್ರತಿಹತರಯೋ**' ಎಂಬ ಕೃತಿ – ಇವು ಸಾಹಿತ್ಯ ತತ್ತ್ವ ಹಾಗೂ ಭಕ್ತಿಗಳ ಅಪೂರ್ವ ಸಂಗಮವಾಗಿದೆ. '**ಓಂ ಹ್ರೀಂ ಋತಂ**' ಎಂಬ ಶ್ರೀರಾಮಕೃಷ್ಣರನ್ನು ಕುರಿತ ರಚನೆ ಅವರ ಇನ್ನೊಂದು ಪ್ರಸಿದ್ಧ ಸ್ತೋತ್ರ. ಇದನ್ನು ಶ್ರೀರಾಮಕೃಷ್ಣ ಮಹಾಸಂಘದ ಎಲ್ಲ ಶಾಖೆಗಳಲ್ಲೂ ಸಾಯಂಕಾಲದ ಆರತಿಯ ಸಮಯದಲ್ಲಿ ಹಾಡಲಾಗುತ್ತಿದೆ.

ಸ್ವಾಮೀಜಿಯವರ ಬಂಗಾಳಿ ಕವಿತೆಗಳಲ್ಲೆಲ್ಲ ಅತ್ಯಂತ ಪ್ರಸಿದ್ಧ ವಾದುದು ಅವರ '**ಖಂಡನ ಭವ-ಬಂಧನ**' ಎಂದು ಆರಂಭ ವಾಗುವ ರಚನೆ. ಇದನ್ನು ರಾಮಕೃಷ್ಣ ಮಹಾಸಂಘದ ಆಶ್ರಮ ಗಳಲ್ಲೆಲ್ಲ ಸಂಧ್ಯಾರತಿಯಲ್ಲಿ ಹಾಡಲಾಗುತ್ತಿದೆ. ಈ ರಚನೆಯ ನಾದಗಾಂಭೀರ್ಯವು ಅತ್ಯಂತ ಗಮನಾರ್ಹ. ಸಾಮೂಹಿಕ ಗಾಯನಕ್ಕೆ ಅದು ಅತ್ಯಂತ ಸೂಕ್ತವಾದುದ್ದು. ಬೃಹತ್ತಾದ ಜನ ಸಮುದಾಯದಲ್ಲಿ ಖೋಲ್, ಮೃದಂಗ, ಕರತಾಳಗಳೇ ಮೊದ ಲಾದ ಪಕ್ಕವಾದ್ಯಗಳೊಂದಿಗೆ ಅದನ್ನು ಹಾಡುವಾಗ ಉಂಟಾಗುವ ಆತ್ಮೋದ್ದೀಪನವೂ ಸ್ಫೂರ್ತಿದಾಯಕವೂ ಆಗುವ ಪರಿಣಾಮ ಅದ್ಭುತ! ಪರಬ್ರಹ್ಮನನ್ನು ಕುರಿತು ರಚಿಸಿದ '**ಏಕ ರೂಪ ಅರೂಪ**' ಎಂಬ ರಚನೆ, ಶಿವನನ್ನು ಕುರಿತ ಇನ್ನೂ ಎರಡು ರಚನೆಗಳು – '**ತಾಥೈಯಾ ತಾಥೈಯಾ**' ಹಾಗೂ '**ಹರ ಹರ ಭೂತನಾಥ**' ಇವುಗಳೂ ಅತ್ಯಂತ ಮಧುರ ನಾದದಿಂದ ಕೂಡಿದ, ಪರಿಪೂರ್ಣ ಲಯಬದ್ಧವಾದ ರಚನೆಗಳು. ಹೀಗೆ ಸ್ವಾಮಿ ವಿವೇಕಾನಂದರು ವಿದ್ವಾಂಸರೂ, ಭಾಷಣಕಾರರೂ, ಉತ್ತಮ ಲೇಖಕರೂ ಆಗಿ ದ್ದಂತೆಯೇ ಅತ್ಯಂತ ಶ್ರೇಷ್ಠ ಸಂಗೀತಗಾರರೂ ಆಗಿದ್ದರು. ❋

## ಭೈರವಿ ಕೆಂಪೇಗೌಡರು ಮತ್ತು ಸ್ವಾಮೀಜಿ

**''ಶ್ರೀ ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ದೇಶಾಟನೆ ಮಾಡುತ್ತಿದ್ದಾಗ ಶ್ರೀ ಕೆಂಪೇಗೌಡರು ಹಲ ವಾರು ತಿಂಗಳು ಶ್ರೀ ಸ್ವಾಮಿಗಳ ಜೊತೆಯಲ್ಲಿದ್ದುಕೊಂಡು ಅಸ್ವಾಮಿನ ಗಿರಿಕಂದರಗಳಲ್ಲಿ ಗಾಯನಮಾಡಿ ಶ್ರೀ ಸ್ವಾಮಿ ಗಳನ್ನು ತಲ್ಲೀನರನ್ನಾಗಿ ಮಾಡುತ್ತಿದ್ದರೆಂದು ಶ್ರೀ ಗೌಡ ರಿಂದಲೇ ಕೇಳಿದ್ದೇನೆ. ಶ್ರೀ ಸ್ವಾಮಿಗಳು ಶ್ರೀ ಗೌಡರ ವಿಷಯದಲ್ಲಿ ಸುಪ್ರೀತರಾಗಿ, ತಾವು ಹೊದೆಯುತ್ತಿದ್ದ ಕಾವಿ ನಿಲುವಂಗಿಯೊಂದನ್ನು ಶ್ರೀ ಗೌಡರಿಗೆ ಕೊಟ್ಟಿದ್ದರು. ಅದನ್ನು ಅವರು ಪ್ರಾಣದಂತೆ ತಮ್ಮ ಬಳಿ ಇರಿಸಿಕೊಂಡಿ ದ್ದದ್ದನ್ನು ನಾನು ನೋಡಿದ್ದೇನೆ.''**

**–ಶ್ರೀ ಎಚ್.ಕೆ.ವೀರಣ್ಣಗೌಡರು**

*('ಡಿ.ವಿ.ಜಿ. ಅವರ 'ಕಲೋಪಾಸಕರು', ಪು. ೧೨೭, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೬೮ರ ಮುದ್ರಣ)*

೧೦. ಅಲ್ಲೇ, ಸಂ.೭, ಪು.೩೫೫, ೩ನೇ ಮುದ್ರಣ, ೧೯೪೭.

# ಸ್ವಾಮಿ ವಿವೇಕಾನಂದರ 'ಸಂಗೀತ ಕಲ್ಪತರು'

ಮೂಲ: **ಡಾ. ಶರ್ವಾನಂದ ಚೌಧುರಿ**

ಕನ್ನಡಕ್ಕೆ: **'ವಿನಾಭ'**




ಸ್ವಾಮಿ ವಿವೇಕಾನಂದರು ಶ್ರೇಷ್ಠ ಸಂಗೀತಗಾರರಾಗಿದ್ದರೆಂಬುದು ಬಹಳ ಜನರಿಗೆ ತಿಳಿದಿರದು. ಅವರು '**ಸಂಗೀತ ಕಲ್ಪತರು**' ಎಂಬ ಗ್ರಂಥವನ್ನು ಸಂಪಾದಿಸಿ, ಅದಕ್ಕೆ ವಿದ್ವತ್ಪೂರ್ಣವಾದ ಸುದೀರ್ಘ ಮುನ್ನುಡಿಯೊಂದನ್ನು ಬರೆದಿದ್ದರು ಎಂಬ ಸಂಗತಿ ಇನ್ನೂ ಕಡಿಮೆ ಜನರಿಗೆ ತಿಳಿದಿದೆ. ೧೮೮೭ರಲ್ಲಿ ಮೊದಲ ಮುದ್ರಣ ಕಂಡ ಈ ಗ್ರಂಥ ೨೦೦೦ರ ಜನವರಿಯಲ್ಲಿ ಮರುಮುದ್ರಣಗೊಂಡಿತು. ಈ ಹೊಸ ಆವೃತ್ತಿಯ ಸಂಪಾದಕರು ಕೊಲ್ಕತ್ತದ ನೇತಾಜಿನಗರ ಕಾಲೇಜಿನಲ್ಲಿ ಪ್ರಾಧ್ಯಾಪಕರಾದ ಡಾ. ಶರ್ವಾನಂದ ಚೌಧುರಿಯವರು. ಬಂಗಾಳಿಯಲ್ಲಿ ಅವರು ಬರೆದ ಲೇಖನದ ಆಂಗ್ಲ ಅನುವಾದ 'Vedanta Kesari' ಪತ್ರಿಕೆಯ ೨೦೦೬ರ ಜನವರಿ ಸಂಚಿಕೆಯಲ್ಲಿ ಪ್ರಕಟವಾಯಿತು. ಇದನ್ನು ಆಂಗ್ಲಭಾಷೆಗೆ ಅನುವಾದಿಸಿದವರು ಕೋಲ್ಕತ್ತದ ಭಕ್ತರಾದ ಶ್ರೀಮತಿ ಮಾಲತಿ ಸೇನ್‌ಗುಪ್ತಾ ಅವರು. ಇದರ ಕನ್ನಡಾನುವಾದ ಮಾಡಿಕೊಟ್ಟ 'ವಿನಾಭ' (ವಿಜಯನಾಥ ಭಟ್, 'ಕೌಂಡಿನ್ಯ') ಅವರು ಅವರು ರಾಷ್ಟ್ರೀಕೃತ ಬ್ಯಾಂಕಿಂಗ್ ಸಂಸ್ಥೆಯೊಂದರ ಉಚ್ಚ ಅಧಿಕಾರಿಯಾಗಿದ್ದು ಈಗ ನಿವೃತ್ತರಾಗಿದ್ದಾರೆ. ಆಂಗ್ಲ, ಕನ್ನಡ ಎರಡೂ ಭಾಷೆಗಳಲ್ಲಿ, ಗದ್ಯ-ಪದ್ಯ ಎರಡೂ ಪ್ರಕಾರಗಳಲ್ಲಿ ಪರಿಣತರಾಗಿರುವ ಅವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.

''**ಸಂಗೀತ ಕಲ್ಪತರು**'' ಹೊತ್ತಿಗೆ, ಬಂಗಾಲಿ ಗೀತೆಗಳ ಇತಿಹಾಸದಲ್ಲಿ ಒಂದು ಬಹು ಪ್ರಮುಖ ಕೃತಿ. ಆದ್ದರಿಂದಲೇ ಬಂಗಾಲಿ ಹಾಡುಗಳ ಬಗೆಗೆ ಸಂಬಂಧಿಸಿದಂತೆ ಪ್ರಕಟವಾಗಿರುವ ಎಲ್ಲಾ ಅಸಂಖ್ಯ ಪುಸ್ತಕಗಳ ಸಾಲಿನಲ್ಲಿ ಈ ಒಂದು ಪುಸ್ತಕ ಮಾತ್ರ, ಈ ವಿಷಯದಲ್ಲಿ ಅಪೂರ್ವ ಪರಿಣಿತಿಯನ್ನು ಸಾಧಿಸಿದ ಸ್ವಾಮಿ ವಿವೇಕಾನಂದರ ಜೀವನದ ಇನ್ನೊಂದು ಮುಖವನ್ನು ಜಗತ್ತಿಗೆ ಪರಿಚಯಿಸಿದೆ ಎಂದರೆ ಅತಿಶಯೋಕ್ತಿಯಲ್ಲ.

### ಸಂಗೀತದಲ್ಲಿ ಸ್ವಾಮಿ ವಿವೇಕಾನಂದರ ಪ್ರಾವೀಣ್ಯ

ನರೇಂದ್ರನಾಥನ ಬಹುಮುಖ ಪ್ರತಿಭೆಯ ವಿಷಯದಲ್ಲಿ ಶ್ರೀರಾಮಕೃಷ್ಣರ ಈ ಒಂದು ಉದ್ಗಾರ ಔಚಿತ್ಯಪೂರ್ಣವಿದೆ: ''ಅವನೊಂದು ಅದ್ಭುತ ಭಂಡಾರ. ಒಬ್ಬ ವ್ಯಕ್ತಿಯಲ್ಲಿ ಅಷ್ಟೊಂದು ವಿಶೇಷ ಗುಣಗಳು! ಅದು ಹಾಡುವುದಾಗಲಿ, ವಾದ್ಯಗಳನ್ನು ನುಡಿಸುವುದಾಗಲೀ, ಬರೆಯುವುದಾಗಲೀ, ವಾಚಿಸುವುದಾಗಲೀ ಅವನದು ಎಲ್ಲದರಲ್ಲೂ ಒಂದೇ ತೆರನ ಸಿದ್ಧಹಸ್ತ.'' ವಿವೇಕಾನಂದರ ಅನೇಕ ಅದ್ಭುತ ಕೌಶಲ್ಯಗಳಲ್ಲಿ ಸಂಗೀತದಲ್ಲಿ ಪ್ರಾವೀಣ್ಯವೂ ಒಂದು.

ಅವರು ಸ್ವತಃ ಪ್ರತಿಭಾವಂತ ಹಾಡುಗಾರರಾಗಿದ್ದರು, ಮಾತ್ರವಲ್ಲ, ಅಂತಹ ಸಂಗೀತ ಸಾಧನೆಗೆ ಪೂರಕವಾದ ವಾತಾವರಣದಲ್ಲಿಯೇ ಅವರು ಜನ್ಮತಾಳಿದ್ದರು. ಅವರ ತೀರ್ಥರೂಪರಾದ ವಿಶ್ವನಾಥ ದತ್ತರು ಸ್ವತಃ ನುರಿತ ಉಸ್ತಾದರಲ್ಲಿ ಶಾಸ್ತ್ರೀಯ ಸಂಗೀತವನ್ನು ಕಲಿತಿದ್ದರಲ್ಲದೆ ತನ್ನ ಮಗನಿಗೂ ಬೇಣಿಪ್ರಸಾದ, ಅಹಮದ್ ಖಾನ್‌ರಂತಹ ಖ್ಯಾತ ಸಂಗೀತಗಾರರಿಂದ ಶಿಕ್ಷಣ ಲಭಿಸುವಂತೆ ವ್ಯವಸ್ಥೆ ಮಾಡಿದ್ದರು. ಶಾಸ್ತ್ರೀಯ ಸಂಗೀತದ ಹಾಡುಗಾರಿಕೆಯ ಜತೆಜತೆಗೆ ನರೇಂದ್ರನಾಥ, ಮುರಾರಿ ಗುಪ್ತರಿಂದ ಪಖವಾಜ್ ಬಾರಿಸುವುದನ್ನೂ ಬ್ರಹ್ಮಸಮಾಜದ ಕಾರ್ಯಕರ್ತರಲ್ಲೊಬ್ಬರಾದ ಕಾಶೀ ಘೋಷಾಲ್‌ರಿಂದ ತಬಲಾವಾದನವನ್ನೂ ಕಲಿತುಕೊಂಡಿದ್ದರು. ಇದರಿಂದಾಗಿ ಅವರು ತಮ್ಮ ಸಣ್ಣ ವಯಸ್ಸಿನಲ್ಲಿಯೇ ಸಂಗೀತದ ಮೇಲೆ ಸಾಕಷ್ಟು ಪ್ರಭುತ್ವವನ್ನು ಸಾಧಿಸಿಕೊಂಡಿದ್ದರು ಎಂದು ಅವರ ಜೀವನಚರಿತ್ರೆಯನ್ನು ಬರೆದ ಪ್ರಮಥನಾಥ ಬಸು ಅವರು ಸ್ಪಷ್ಟವಾಗಿ ನಮೂದಿಸಿದ್ದಾರೆ.

ಆದರೆ, ಆಶ್ಚರ್ಯವೆಂಬಂತೆ, ಸ್ವಾಮೀಜಿಯವರ ಬಹುಮುಖೀ ವಿಚಾರಗಳನ್ನು ಮತ್ತು ಚಿಂತನೆಗಳನ್ನು ಅವರ ಶಿಕ್ಷಣ

ಮತ್ತು ಸಾಧನೆಗಳನ್ನು ಸವಿಸ್ತಾರವಾಗಿ ದಾಖಲಿಸಿದ ಪ್ರಕಟಣಾ ಪ್ರಪಂಚ ಅವರ ಸಂಗೀತ ಸಾಧನೆಯ ಬಗ್ಗೆ ಸಾಕಷ್ಟು ಗಮನ ಕೊಟ್ಟಿಲ್ಲ. ಸಾಮಾನ್ಯವಾಗಿ ಸ್ವಾಮೀಜಿಯವರ ಸಂಗೀತದಲ್ಲಿಯ ಆಸಕ್ತಿಯ ಬಗ್ಗೆ ಅವರು ಉತ್ತಮವಾಗಿ ಹಾಡುತ್ತಿದ್ದರು ಮತ್ತು ಕೆಲವು ಹಾಡುಗಳನ್ನು ಸಂಯೋಜಿಸಿದ್ದರು ಕೂಡ ಎಂದಷ್ಟೆ ದಾಖಲಿಸಲ್ಪಟ್ಟಿದೆ. ಆದರೆ ಸಂಗೀತದ ಬಗ್ಗೆ ಅವರಿಗಿದ್ದ ಅಪಾರ ಜ್ಞಾನ ಮತ್ತು ಐತಿಹಾಸಿಕ ದೃಷ್ಟಿಯಿಂದ ಅವರು ಸಂಗೀತ ಕ್ಷೇತ್ರಕ್ಕೆ ಕೊಡಮಾಡಿದ ವಿಶೇಷ ಕೊಡುಗೆ ಇವುಗಳ ಬಗ್ಗೆ ನಮಗಿದ್ದ ಅಜ್ಞಾನ ಎಷ್ಟು ಖಂಡನೀಯವೆಂದರೆ ಅವರ ಅಪೂರ್ವ ಸಂಗ್ರಹಣೆಯಾದ '**ಸಂಗೀತ ಕಲ್ಪತರು**' ಕೃತಿ ಮೊದಲ ಆವೃತ್ತಿಯ ನಂತರ ೧೧೨ ವರ್ಷಗಳಿಗೂ ದೀರ್ಘಕಾಲ ಬೆಳಕಿಗೆ ಬರಲೇ ಇಲ್ಲ. ಅದಕ್ಕೆಂದೇ ನಾವು ಈ ಪುಸ್ತಕದ ಮರುಮುದ್ರಣ ಮಾಡಿದ Ramakrishna Mission institute of Culture ಸಂಸ್ಥೆಗೆ ಚಿರಋಣಿಯಾಗಿರಬೇಕು. ಈ ಪುಸ್ತಕ ಮರುಮುದ್ರಣದಿಂದ ಬೆಳಕಿಗೆ ಬಾರದಿದ್ದರೆ ಸ್ವಾಮೀಜಿಯವರ ಜೀವನದ ಒಂದು ಬಹು ಮುಖ್ಯ ಮಗ್ಗಲು ಕತ್ತಲಲ್ಲೇ ಹೂತುಹೋಗುತ್ತಿತ್ತು, ಮಾತ್ರವಲ್ಲ ಬಂಗಾಳೀ ಗೀತೆಗಳ ಚರಿತ್ರೆಯೂ ಅಪೂರ್ಣವಾಗಿ ಉಳಿಯುತ್ತಿತ್ತು. ಅಷ್ಟು ಸಣ್ಣ ವಯಸ್ಸಿನಲ್ಲೇ ಸಂಗೀತದ ಬಗ್ಗೆ ಅವರು ಪ್ರಕಟಿಸಿದ ವಿಚಾರಗಳ ಪಕ್ವತೆ ಯಾರನ್ನೂ ಅಚ್ಚರಿಗೀಡು ಮಾಡುತ್ತದೆ. ಸ್ವರ್ಗೀಯ ರಬೀಂದ್ರನಾಥ ಠಾಗೋರರೊಬ್ಬರನ್ನು ಹೊರತು ಪಡಿಸಿದರೆ ಅಷ್ಟು ಚಿಕ್ಕ ವಯಸ್ಸಿನಲ್ಲಿ ಸಂಗೀತದ ಬಗ್ಗೆ ಅಷ್ಟು ಪ್ರೌಢ ವಿಚಾರಗಳನ್ನು ಪ್ರಕಟಿಸಿದ ಅವರ ಸಮಕಾಲೀನ ವ್ಯಕ್ತಿ ಬೇರೊಬ್ಬರಿಲ್ಲ ಎಂದು ನಮಗೆ ಮನದಟ್ಟಾಗದಿರದು.

### ಕೃತಿ

ಈ ಕೃತಿಯನ್ನು ಸಂಪಾದಿಸುವ ಕೆಲಸದಲ್ಲಿ ತೊಡಗಿದ್ದಾಗ ಅವರು ಇನ್ನೂ ೨೩ರ ಎಳೆಯ ವಯಸ್ಸಿನ ನರೇಂದ್ರನಾಥರಾಗಿದ್ದರು. ಹಾಗೆಂದರೆ ಇದು ಸುಮಾರು ೧೮೮೬ರ ಇಸವಿ ಶ್ರೀರಾಮಕೃಷ್ಣರ ಚಿರಸಮಾಧಿಯ ಸ್ವಲ್ಪ ಕಾಲ ಮೊದಲು ಅಥವಾ ಅನಂತರ. ಪ್ರಸಿದ್ಧ ಪುಸ್ತಕ ವ್ಯಾಪಾರಿಯಾಗಿದ್ದ ವೈಷ್ಣವ ಚರಣ ಬಸಕ್ ಅವರು ಈ ಪ್ರಯತ್ನದ ಕೊನೆಯ ಘಟ್ಟದಲ್ಲಿ ನರೇಂದ್ರನಾಥನನ್ನು ಕೂಡಿಕೊಂಡರು. ಈ ಪುಸ್ತಕದಲ್ಲಿನ ಕೆಲವು ಹಾಡುಗಳನ್ನು ಅವರು ಸಂಪಾದಿಸಿದರೂ, ಸ್ವಾಮೀಜಿಯವರ ಉದ್ದಾಮ ವ್ಯಕ್ತಿತ್ವದ ಪ್ರಭಾವವನ್ನು ಹೊತ್ತಿರುವ ಅವರ ವಿಚಾರ ಮತ್ತು ಚಿಂತನೆಗಳ ಪ್ರಾಬಲ್ಯವನ್ನು ಪುಸ್ತಕದಲ್ಲಿ ಕಡೆಗಣಿಸುವುದು ವೈಷ್ಣವ ಚರಣನಿಗೆ ಸಾಧ್ಯವಾಗಲಿಲ್ಲ. ೧೮೮೭ರಲ್ಲಿ ಈ ಪುಸ್ತಕ ಮೊದಲ ಬಾರಿಗೆ ಬೆಳಕು ಕಂಡಿತು.

ಈ ಪುಸ್ರಕವು ನರೇಂದ್ರನಾಥರು ಬರೆದ ಸುಮಾರು ೯೦ ಪುಟಗಳಷ್ಟು ದೀರ್ಘವಾದ '**ಸಂಗೀತ ಓ ವಾದ್ಯ**'(ಸಂಗೀತ ಮತ್ತು ಸಂಗೀತ ವಾದ್ಯಗಳು) ಎಂಬ ಪ್ರೌಢ ಪ್ರಬಂಧದೊಂದಿಗೆ ಆರಂಭಗೊಳ್ಳುತ್ತದೆ. ಅದರ ನಂತರ ಬರುವುದು ಹಾಡುಗಳು ಮತ್ತು ಕೊನೆಯಲ್ಲೊಂದು ಅನುಬಂಧ – ಸುಮಾರು ೧೭ ಗೀತಕಾರರ ಹ್ರಸ್ವ ಪರಿಚಯದೊಂದಿಗೆ. ಈ ಪುಸ್ತಕದ ಈ ತೆರನ ವಿನ್ಯಾಸದ ಹಿಂದೆ ಕೇವಲ ನರೇಂದ್ರನಾಥರ ಸಂಗೀತದ ವಿಷಯದಲ್ಲಿದ್ದ ಪ್ರೌಢಿಮೆಯ ಪ್ರಭಾವವಲ್ಲದೆ ಬೇರೇನೂ ಇಲ್ಲವೆಂದು ನಮಗೆ ಮನದಟ್ಟಾಗದಿರದು. ಅದರಲ್ಲೂ ಸಂಗೀತದ ಎರಡು ಮುಖಗಳಾದ ಮನರಂಜನೆ ಮತ್ತು ಶಾಸ್ತ್ರ ಇವೆರಡರ ಬಗೆಗೂ ಅವರು ಕೊಟ್ಟ ಸಮಾನ ಪ್ರಾಮುಖ್ಯತೆಯನ್ನು ನಾವು ಮನಗಾಣಬೇಕು. ಇದು, ಮುಖ್ಯವಾಗಿ ಸಂಗೀತದ ಚೊಚ್ಚಲ ಅಭ್ಯಾಸಿಗಳಿಗಾಗಿಯೇ ಬರೆದ ಸಂಗೀತ ಶಾಸ್ತ್ರದ ಅಪೂರ್ವ ಪಠ್ಯಪುಸ್ತಕದಂತಿರುವ ಈ '**ಸಂಗೀತ ಓ ವಾದ್ಯ**' ಗ್ರಂಥದಲ್ಲಿ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿದೆ. ಇದು, ಆರಂಭಿಕರಿಗೆ, ಮೊದಲು ಸಂಗೀತ ಶಾಸ್ತ್ರದ ಮೂಲ ತತ್ತ್ವಗಳನ್ನು ಪರಿಚಯಿಸುವುದಷ್ಟೇ ಅಲ್ಲದೆ, ಆ ಹಾಡನ್ನು ಹಸ್ತಾಂತರಿಸುವ ಮೊದಲು ಆ ಹಾಡಿನ ಹಿಂದಿರುವ ಚರಿತ್ರೆಯ ಮೇಲೂ ಸಾಕಷ್ಟು ಬೆಳಕು ಚೆಲ್ಲುವುದಕ್ಕೆ ಶ್ರಮಿಸುತ್ತದೆ. ಸಂಗೀತ ಶಾಸ್ತ್ರ ಮತ್ತು ಹಾಡುಗಳ ಸಂಕಲನ ಇವೆರಡೂ ಈ ಪುಸ್ತಕದ, ಒಂದಕ್ಕೊಂದು ಪೂರಕವಾದ ಅಭಿನ್ನ ಅಂಶಗಳು. ಈ ಮೊದಲು ಬೆಳಕು ಕಂಡ '**ಸಂಗೀತ ತರಂಗ**', '**ಸಂಗೀತರಾಗ ಕಲ್ಪದ್ರುಮ**', ಅಥವಾ '**ವಿಕ್ಟೋರಿಯಾ ಗೀತಮಾಲಾ**' ಇತ್ಯಾದಿ ಪುಸ್ತಕಗಳು ಹಾಡುಗಳ ಸಂಕಲನದ ಜತೆಗೆ ಸ್ವಲ್ಪಮಟ್ಟಿನ ಸಂಗೀತ ಶಾಸ್ತ್ರದ ಬಗೆಗಿನ ಚರ್ಚೆಗಳನ್ನು ಸ್ಥೂಲವಾಗಿ ಒಳಗೊಂಡಿದ್ದರೂ, ಆರಂಭಿಕ ಕಲೆಗಾರರರ ಉಪಯೋಗಕ್ಕಾಗಿ ಅಗತ್ಯವಾಗಿರುವ ಮೂಲತತ್ತ್ವಗಳ ಬಗ್ಗೆ ಸಾಕಷ್ಟು ಬೆಳಕು ಚೆಲ್ಲುವಲ್ಲಿ '**ಸಂಗೀತ ಓ ವಾದ್ಯ**'ದಷ್ಟು ಯಶಸ್ವಿಯಾಗಿಲ್ಲ. ಕಾಲಾಂತರದಲ್ಲಿ, ಆರಂಭಿಕ ಅಭ್ಯಾಸಗಳಿಗಾಗಿಯೇ ಉಪಯುಕ್ತವಾಗುವಂತೆ ಹಾಡುಗಳ ಸಂಕಲನದ ಜತೆಗೆ ಸಂಗೀತ ಶಾಸ್ತ್ರದ ಬಗೆಯೂ ಸಂಬಂಧಿಸಿದಂತಹ ಪ್ರವಚನಗಳನ್ನೊಳಗೊಂಡ ಇನ್ನೊಂದು ಪುಸ್ತಕ '**ನವ ಸಂಗೀತ ಕಲ್ಪತರು**' ಕೃತಿಯನ್ನು ಬರೆದ ಕೃಷ್ಣಧನ ವಿದ್ಯಾಪತಿಗೆ, '**ಸಂಗೀತ ಕಲ್ಪತರು**' ಕೃತಿಯು ಆಕರ ಗ್ರಂಥವಾಗಿ ಪರಿಣಮಿಸಿತು.

### ಭಾರತೀಯ ಸಂಗೀತದ ವಿಸ್ತಾರ ಬಗೆಗೆ ಸ್ವಾಮೀಜಿಯವರಿಗೆ ಸಿದ್ಧಿಸಿದ್ದ ಒಳನೋಟ

ಪ್ರಾಚೀನ ಭಾರತೀಯ ಸಂಗೀತ ಶಾಸ್ತ್ರದ ಸಮಗ್ರ ಪುನರುಜ್ಜೀವನವು ಬಹಳ ಪ್ರಾಮುಖ್ಯವಾದ ಕೆಲಸ ಎಂದು ಸ್ವಾಮೀಜಿಯವರು ಪರಿಗಣಿಸಿದ್ದರೂ, ಅವರು ಈ ದಿಸೆಯಲ್ಲಿ ಅಷ್ಟೇನೂ ಪ್ರತ್ಯಕ್ಷ ಪ್ರಯತ್ನವನ್ನು ಮಾಡಿದಂತೆ ಕಾಣುವುದಿಲ್ಲ. ಆಧುನಿಕ ಅಭ್ಯಾಸಗಳಿಗೆ ಸಹಕಾರಿಯಾಗುವಂತೆ ಸಂಗೀತ ಶಾಸ್ತ್ರದ ವಿಶ್ಲೇಷಣೆ ಮತ್ತು ಪ್ರಚಾರ ಅಷ್ಟೇ ಅವರ ಸದ್ಯದ ಗುರಿಯಾಯಿತು. ಸಂಕುಚಿತ ಮನೋಭಾವದ ಮತ್ತು ಸಾಂಪ್ರದಾಯಿಕತೆಗೆ ಅನಗತ್ಯ ಶರಣು ಬಿದ್ದು ಒದ್ದಾಡುವ ತಥಾಕಥಿತ ಉಸ್ತಾದ ಅಥವಾ ಸಂಗೀತಗಾರರ ಮೊಂಡುತನವನ್ನು ಪ್ರಬಲವಾಗಿ ವಿರೋಧ ವ್ಯಕ್ತಪಡಿಸುತ್ತಿದ್ದ ಸ್ವಾಮೀಜಿಯವರ ವ್ಯಕ್ತಿವಿಶೇಷಣವೇ ಇದಕ್ಕೆ ಕಾರಣ

ವಾಯಿತು. ಸ್ವಾಮೀಜಿಯವರ ಶಬ್ದಗಳಲ್ಲಿ ಹೇಳುವದಾದರೆ ''ಇಂತಹ ಕುರುಡು ಆಚರಣೆ – ಸಕ್ಕರೆಯ ಮೂಟೆಗಳನ್ನು ಹೊರುವ ಕತ್ತೆಗಳಂತೆ ಅಥವಾ ಅಗ್ರೇಸರನನ್ನು ಕುರುಡು ಕುರುಡಾಗಿ ಹಿಂಬಾಲಿಸುವ ಕುರಿಮಂದೆಯಂತೆ.'' ಸಂಗೀತದಲ್ಲಿ ಮೂಲಭೂತವಾದ ಅಥವಾ ಅಂಧಾನುಕರಣೆಯನ್ನು ಅವರು ಎಂದೂ ಮೆಚ್ಚುತ್ತಿರಲಿಲ್ಲ. ಇದನ್ನೇ ಗಮನದಲ್ಲಿರಿಸಿಕೊಂಡು ಅವರು ಆರಂಭಿಕ ಅಭ್ಯಾಸಿಗಳಿಗೆ ಸ್ವರಗ್ರಾಮ(ವ್ಯಾಪ್ತಿ) ಬಗ್ಗೆ ಸ್ಪಷ್ಟವಾದ ಜ್ಞಾನ, ವಾದ್ಯಗಳನ್ನು ಸರಿಯಾಗಿ ಶ್ರುತಿ ಜೋಡಿಸುವುದು, ಸ್ವರ ಸಾಧನ (ಕಂಠ ತರಬೇತಿ), ಪಕ್ಕವಾದ್ಯಗಳ ನಿಯಮಗಳು ಮತ್ತು ಅಂತಹ ಇತರ ವಿಷಯಗಳನ್ನು **'ಸಂಗೀತ ಓ ವಾದ್ಯ'** ವಿಭಾಗದಲ್ಲಿ ತಿಳಿಹೇಳಲು ಪ್ರಯತ್ನಿಸಿದರು. ಅದೇ ವೇಳೆಯಲ್ಲಿ, ಹತ್ತೊಂಬತ್ತನೇ ಶತಮಾನದಲ್ಲಿ ಪ್ರಚಲಿತವಿದ್ದ ಸಾಮಾನ್ಯ ಸಂಗೀತ ಕಲಾ ಸಾಧನೆಯ ಬಗ್ಗೆ, ಸ್ವಾಮೀಜಿಯವರಿಗಿದ್ದ ಸ್ವತಂತ್ರ ವಿಶಾಲ ಮತ್ತು ಸತರ್ಕ ಮನೋಧರ್ಮವನ್ನು ನಾವು ಅರಿತುಕೊಳ್ಳಲು ಈ ಕೃತಿಯು ತುಂಬಾ ಸಹಕಾರಿಯಾಗಿದೆ. ಆ ಕಾಲದ ಪಟ್ಟಭದ್ರರು ಮತ್ತು ದುರಭಿಮಾನದಿಂದ ವರ್ತಿಸುತ್ತಿದ್ದ ಉಸ್ತಾದರ ಬಗೆಗೆ ಅವರು ಪ್ರಕಟಿಸಿದ ವಿರೋಧ ಒಂದು ಸ್ವಾಗತಾರ್ಹ ಕ್ರಾಂತಿಗೇನೂ ಕಡಿಮೆಯಾಗಿರಲಿಲ್ಲ. ಸ್ವಾಮೀಜಿಯವರ ಈ ಅಭಿಪ್ರಾಯಗಳೊಂದಿಗೆ ಸಹಮತ ವ್ಯಕ್ತಪಡಿಸುತ್ತಿದ್ದ ರಬೀಂದ್ರನಾಥ ಠಾಗೂರರಿಗೂ ಉಸ್ತಾದರ ದೋಷಖಂಡನೆಯ ತೀವ್ರತೆಯ ಪರಿಮಾಣದಲ್ಲಿ ಸ್ವಾಮೀಜಿಯವರನ್ನು ಸರಿಗಟ್ಟಲು ಸಾಧ್ಯವಾಗಲಿಲ್ಲ.

ಸ್ವಾಮೀಜಿಯವರ ಶಬ್ದಗಳಲ್ಲಿ: ''ನಮ್ಮ ದೇಶದಲ್ಲಿ, ಎಲ್ಲಾ ರಂಗಗಳಲ್ಲಿ ಇಂದು ಕಾಣಬರುವ ಮಡುಗಟ್ಟಿರುವ ಸ್ವತಂತ್ರ ಚಿಂತನೆಯ ಹರಿವು ಸಂಗೀತ ಶಾಸ್ತ್ರರಂಗದಲ್ಲಿಯೂ ಸ್ಪಷ್ಟವಾಗಿ ಕಂಡುಬರುತ್ತದೆ. ನಮ್ಮ ರಾಷ್ಟ್ರೀಯ ಮನೋಧರ್ಮದಲ್ಲಿ, ನಮ್ಮ ಭೂತಕಾಲದ ಸಾಧನೆಗಳನ್ನು ಮೀರಿಸುವುದು ಎಷ್ಟಕ್ಕೂ ಸಾಧ್ಯವಿಲ್ಲವೆಂಬ ನಂಬುಗೆ ಬಲವಾಗಿ ಬೇರೂರಿದೆ. ಅಜ್ಞಾನವೇ ಅಂತಹ ನಂಬಿಕೆಗಳನ್ನು ಹುಟ್ಟು ಹಾಕುತ್ತದೆ. ಅಂತಹ ಅಪೂರ್ವ ರಾಗರಾಗಿಣಿಗಳನ್ನು ಸೃಷ್ಟಿಸಿದ ನಮ್ಮ ಪೂರ್ವಜರಿಗೆ ಯಾವ ಚಿಂತೆ, ಚಿಂತನೆಗಳು ಮಾರ್ಗದರ್ಶಿಗಳಾಗಿದ್ದವು ಎಂಬುದನ್ನು ವಿವೇಚಿಸಲು ಯತ್ನಿಸದೆ, ಕೇವಲ ಅವರು ನಮಗಾಗಿ ಬಿಟ್ಟು ಹೋದುದಷ್ಟನ್ನೇ ಅನುಷ್ಠಾನಿಸಿದರೆ ಸಾಕೆನ್ನುವಷ್ಟರ ಮಟ್ಟಿಗೆ ನಮ್ಮ ಯೋಚನೆಗಳು ಘನೀಕರಿಸಿಕೊಂಡಿವೆ. ಇನ್ನೊಂದು ಕಡೆ, ವಾಯುವ್ಯ ಪ್ರಾಂತ್ಯಗಳಲ್ಲಷ್ಟೇ ಸಂಗೀತ ಸಾಧನೆ ವಿಶಾಲವಾಗಿ ವ್ಯಾಪಿಸಿರುವುದರಿಂದ, ಬಹುತೇಕ ಗೀತರಚನೆ ಹಿಂದೂಸ್ಥಾನಿ ಭಾಷೆಗಷ್ಟೇ ಸೀಮಿತವಾಗಿದೆ. ಹೆಚ್ಚಿನ ಕಲೆಗಾರರು, ಯಾವುದೇ ಗೀತೆ ಹಿಂದೀ ಭಾಷೆಯಲ್ಲಿರದಿದ್ದರೆ ಅದನ್ನು ಗೀತೆಯೆಂದು ಹೇಳಲೇ ಆಗದು ಎನ್ನುವಷ್ಟರ ಮಟ್ಟಿಗೆ ನಂಬಿಕೊಂಡಿದ್ದಾರೆ. ಬಂಗಾಳಿ ಗೀತೆಗಳನ್ನು ಅದೇ ರಾಗ ಮತ್ತು ತಾಳಗಳಲ್ಲಿ ಹಾಡಿದರೂ ಅದು ಅಧಃಪತನವೇ ಎಂದು ಪರಿಗಣಿಸುತ್ತಾರೆ. ಅಂಥವರಿಗೆ ಸಂಗೀತಶಾಸ್ತ್ರದ ಮೂಲಭೂತ ಪ್ರಾಥಮಿಕತೆಯ ಅರಿವೇ ಇಲ್ಲ ಎನ್ನಬೇಕಾಗುತ್ತದೆ... ಎಲ್ಲರಿಗೂ ಖ್ಯಾತಿಗಳಿಸುವ ಧಾವಂತ; ಸಾರ್ವಜನಿಕರು ಬಂಗಾಳಿ ಹಾಡುಗಳನ್ನು ಮೆಚ್ಚಲಾರರು ಮತ್ತು ಉಸ್ತಾದರ ಪಾಳೆಯ ಅಂತಹ ಪ್ರಯತ್ನಗಳನ್ನು ಕೀಳಾಗಿ ಕಂಡಾರು ಎಂಬ ಹೆದರಿಕೆ. ಆದರೆ ಈಗ ಈ ಪಕ್ಷಪಾತದ ಪರದೆಯನ್ನು ಸೀಳಿ ಎಸೆಯುವ ಕಾಲ ಸನ್ನಿಹಿತವಾಗಿದೆ ... ಖಯಾಲ್‌ಗಳನ್ನು ಬಂಗಾಳಿ ಭಾಷೆಯಲ್ಲಿ ಏಕೆ ಹಾಡಲಾಗದು? ಬ್ರಹ್ಮ ಸಮಾಜದಲ್ಲಿ ಹಾಡಲು ಬಳಸಲಾಗುತ್ತಿರುವ ಬಂಗಾಳಿ ಭಾಷೆಯಲ್ಲಿ ಸಂಯೋಜಿಸಲ್ಪಟ್ಟಿರುವ ದ್ರುಪದ್‌ಗಳು ಹಿಂದೀ ಭಾಷೆಯ ದ್ರುಪದ್‌ಗಳಿಗಿಂತಲೂ ಕೀಳು ಮಟ್ಟದ್ದಾಗಿವೆಯೆ? ಅಷ್ಟೇ ಅಲ್ಲದೆ, ಸಂಗೀತ ಸಾಧನೆಯ ಸಂಪ್ರದಾಯಗಳು ಈ ಭಾಗದಲ್ಲಿ ಪ್ರಾಬಲ್ಯಗಳಿಸಿದರೆ, ಬಂಗಾಳಿಯಲ್ಲಿ ಹೊಸ ಹೊಸ ರಾಗರಾಗಿಣಿಗಳನ್ನು ಸೃಷ್ಟಿಸಿ, ಹಾಡಬಲ್ಲವಾದರೆ, ಅದು ಹಿಂದೀ ಹಾಡುಗಳನ್ನೂ ಬಂಗಾಳಿಯಲ್ಲಿ ಹಾಡಲು ಪ್ರಚೋದಿಸುವ ಕಾಯಕಕ್ಕೆ ನಾಂದಿಯಾಗಬಲ್ಲದು...''

ಸಾರ್ವತ್ರಿಕ ಆನಂದದ ಉಗಮಸ್ಥಾನವೇ ಎಂದು ಪರಿಗಣಿಸಬಹುದಾದ, ಎಲ್ಲಾ ದುಃಖಮಯ ಸನ್ನಿವೇಶಗಳಲ್ಲೂ ಪರಿಹಾರವನ್ನು ಒದಗಿಸಬಲ್ಲ ಮತ್ತು ಭೌತಿಕ ಬಂಧನಗಳಿಂದ ಮುಕ್ತಿಯನ್ನು ಕರುಣಿಸಬಲ್ಲ ಸಂಗೀತಕಲೆ, ಸಾಮಾನ್ಯ ಮೂಲಭೂತವಾದಿಗಳಾದ ಉಸ್ತಾದರ ಕಪಿಮುಷ್ಟಿಯಿಂದ ಹೊರಬಾರದಷ್ಟು ನಿರ್ಬಲವೆ?

೧೯ನೇ ಶತಮಾನದಲ್ಲಿ, ಸಂಗೀತಕಲೆಯನ್ನು ತಥಾಕಥಿತ ಉಸ್ತಾದರ ಬಿಗಿ ಮುಷ್ಟಿಯಿಂದ ಬಿಡುಗಡೆಗೊಳಿಸಿ, ಶಾಸ್ತ್ರೀಯವಾಗಿ ಅದರ ಸಂರಕ್ಷಣೆ ಮತ್ತು ವಿಸ್ತಾರವನ್ನು ಹೆಚ್ಚಿಸಲು ಅನೇಕ ಪ್ರಯತ್ನಗಳು ನಡೆದವು. ಇವುಗಳಲ್ಲಿ ಸ್ವರಲಿಪಿ ಅಥವಾ ಸ್ವರಾಂಕದ ಪದ್ಧತಿ ಆವಿಷ್ಕಾರ ಬಹು ಪ್ರಮುಖವಾದುದು. ಆಧುನಿಕ ಸಂಗೀತ ಪದ್ಧತಿಯಲ್ಲಿ ಕ್ಷೇತ್ರ ಮೋಹನ ಗೋಸ್ವಾಮಿಯವರಿಂದ ಮೊದಲು ಪರಿಚಯಿಸಲ್ಪಟ್ಟು, ಪಾಶ್ಚಾತ್ಯ ಸಂಗೀತಗಾರರೂ ಉತ್ಸಾಹದಿಂದ ಸ್ವಾಗತಿಸಿ ಗೌರವಿಸಿದ ಈ ತಂತ್ರವನ್ನು **'ಸಂಗೀತ ಓ ವಾದ್ಯ'** ಪರಿಚ್ಛೇದದಲ್ಲಿ ಸ್ವಾಮೀಜಿಯವರು ಅಳವಡಿಸಿಕೊಂಡರು.

ಅಂತೆಯೇ ೧೯ನೆಯ ಶತಮಾನದಲ್ಲಿ, ಪಾಶ್ಚಾತ್ಯ ಸಂಗೀತದ ಬೆನ್ನೆಲುಬಾಗಿದ್ದ ಸ್ವರಮೇಳ (harmony) ಭಾರತೀಯ ಸಂಗೀತ ಶಾಸ್ತ್ರಜ್ಞರ ಮೇಲೂ ಸಾಕಷ್ಟು ಪ್ರಭಾವ ಬೀರಿತ್ತು. ಕೃಷ್ಣಧನ ಬಂದೋಪಾಧ್ಯಾಯ, ದಕ್ಷಿಣಚರಣ ಸೇನ್, ಪ್ರಮೋದ್ ಠಾಕೂರ್ ಮತ್ತಿನ್ನಿತರರು ಪಾಶ್ಚಾತ್ಯ ಪದ್ಧತಿಯ ಸ್ವರಮೇಳವನ್ನು ಭಾರತೀಯ ಸಂಗೀತದಲ್ಲಿ ಅಳವಡಿಸಿಕೊಂಡಿದ್ದರು. ಬಂಗಾಲದಲ್ಲಿ ಸಂಗೀತ ಸಾಧನೆಯ ಕ್ಷೇತ್ರದಲ್ಲಿ ನಡೆಯುತ್ತಿದ್ದ ಅತ್ಯಾಧುನಿಕ ಪ್ರಯೋಗಗಳನ್ನೂ **'ಸಂಗೀತ ಕಲ್ಪತರು'** ಕಡೆಗಣಿಸಲಿಲ್ಲ. **'ಗ್ರಾಮ'** ಅಥವಾ ಭಾರತೀಯ ಸಂಗೀತದ ಸ್ತರಗಳನ್ನು ವಿವರಿಸುವಾಗ

ಸ್ವಾಮೀಜಿಯವರು ಈ ಸ್ವರಮೇಳದ ಖಚಿತವಾದ ರೂಪರೇಷೆಗಳನ್ನು ಒದಗಿಸಿದರು. ಕಾಲಾಂತರದಲ್ಲಿ ಅವರು ಪಾಶ್ಚಾತ್ಯ ಸಂಗೀತವನ್ನು ಚರ್ಚಿಸುವಾಗ ಭಾರತೀಯ ಸಂಗೀತದಲ್ಲೂ ಅಂತಹ ಸ್ವರಮೇಳದ ಅಗತ್ಯವನ್ನು ಪ್ರತಿಪಾದಿಸುತ್ತಿದ್ದರು.

ಸಂಗೀತಕ್ಕೆ ಸಂಬಂಧಿಸಿದಂತೆ, ಸ್ವರಲಿಪಿ ಮತ್ತು ಸ್ವರಮೇಳಗಳಂತಹ ಪ್ರಸ್ತುತ ವಿಕಸನ ಪ್ರಯೋಗಗಳ ಪ್ರಾಮುಖ್ಯತೆಯತ್ತ ಬೊಟ್ಟು ಮಾಡುವಾಗಲೂ, ವಾದ್ಯಸಂಗೀತಕ್ಕೆ — ಅದರಲ್ಲೂ ತಾಳ ವಾದ್ಯಗಳಿಗೆ — ಸ್ವಾಮೀಜಿಯವರು ಅರ್ಹ ಪ್ರಾಮುಖ್ಯತೆಯನ್ನು ಕಲ್ಪಿಸಿದರು. **'ಸಂಗೀತ ಓ ವಾದ್ಯ'** ಪುಸ್ತಕದ ಪೂರ್ವಭಾಗವನ್ನು ಹಾಗೆ ಹೆಸರಿಸುವಾಗ ಅದರಲ್ಲಿದ್ದ ಸಂಗೀತ ಪದವು ಗಾಯನ, ವಾದ್ಯಸಂಗೀತ ಮತ್ತು ನೃತ್ಯಗಳ ಸಂಯೋಗ ಸಮನ್ವಯವನ್ನು ಸೂಚಿಸುತ್ತದಾದರೂ, ವಾದ್ಯ ಎಂಬ ಪದವನ್ನು ಪ್ರತ್ಯೇಕವಾಗಿ ಜೋಡಿಸಿ. ನಮೂದಿಸಲಾಗಿದೆ. ಆ ಮಹಾ ಪ್ರಬಂಧವು ವಿವಿಧ ತಾಳಗಳಿಗೆ ಸಂಬಂಧಿಸಿದಂತೆ **'ಠೇಕ'** ಮತ್ತು ಅವುಗಳ **'ಪ್ರಕ್ರಮಣಿಕೆ'**ಗಳು ಮತ್ತು **'ಬೋಲ್ ವಿಸ್ತಾರ'**ಗಳ ಅನುಸೂಚಿಗಳಿಂದ ಕೊನೆಗೊಳ್ಳುತ್ತದೆ. ೧೮೭೩ರಲ್ಲಿ ಪ್ರಕಟಿತವಾದ **'ಮೃದಂಗ ಮಂಜರಿ'**ಯಲ್ಲಿ ಸುರೇಂದ್ರ ಮೋಹನ ಠಾಕೂರರು, ಮೃದಂಗ ನುಡಿಸುವುದರಲ್ಲಿ ಬೇಕಾಗಿರುವ ಚೌತಾಳ ಮೊದಲಾದ ೧೮ ತಾಳಗಳನ್ನು, ಅವುಗಳ ಪ್ರಕ್ರಮಣಿಕೆಗಳ ಸಹಿತ ಸಂಕಲಿಸಿ ಒದಗಿಸಿದ್ದರು. **'ಸಂಗೀತ ಕಲ್ಪತರು'**ವಿಗಿಂತಲೂ ಪೂರ್ವದಲ್ಲಿ ಇಂತಹ ಪ್ರಕ್ರಮಣಿಕೆಗಳ ವಿವರಗಳನ್ನು ಒದಗಿಸಿಕೊಟ್ಟ ಏಕಮೇವ ಸಂಕಲನದ **'ಮೃದಂಗ ಮಂಜರಿ'** ಯಾಗಿತ್ತು. ಆದರೆ ಈ ಕೃತಿ ಸ್ವಾಮೀಜಿಯವರ ಗಮನಕ್ಕೆ ಬಂದಿತ್ತೋ ಇಲ್ಲವೋ ಎಂಬುದನ್ನು ಖಚಿತವಾಗಿ ಹೇಳಲಾಗದು. ೧೮೮೯ರಲ್ಲಿ ಅಂದರೆ **'ಸಂಗೀತ ಕಲ್ಪತರು'** ಪ್ರಕಾಶಿತಗೊಂಡ ಎರಡು ವರ್ಷಗಳ ನಂತರ ಪ್ರಕಾಶಿತವಾದ **'ಸಂಗೀತ ಪ್ರವೇಶಿಕಾ'** ಕೃತಿಯಲ್ಲಿ ಕಂಡುಬರುವ ಅನೇಕ ತಾಳ ಮತ್ತು ಪ್ರಕ್ರಮಣಿಕೆಗಳು ಸಂಗೀತ ಕಲ್ಪತರುವಿನಲ್ಲಿ ಮುದ್ರಿತವಾದ ಪ್ರಕ್ರಮಣಿಕೆಗಳ ಯಥಾಪ್ರತಿಗಳಾಗಿವೆ. ಆದರೆ ಈ ಪುಸ್ತಕದ ಸಂಕಲನಕಾರರಾದ ಮುರಾರಿ ಗುಪ್ತ ಅವರು, ತಮ್ಮ ಪುಸ್ತಕವನ್ನು ಪರಿಚಯಿಸುವಾಗ **'ಸಂಗೀತ ಕಲ್ಪತರು'**ವನ್ನು ಒಂದು ಋಣಮೂಲ ಗ್ರಂಥವೆಂದು ಎಲ್ಲೂ ಹೇಳಿಕೊಂಡಿಲ್ಲ.

### 'ಸಂಗೀತ ಕಲ್ಪತರು': ಒಂದು ಪಕ್ಷಿನೋಟ

ಇದುವರೆಗೆ ಆ ಪುಸ್ತಕದ ಪೂರ್ವಭಾಗವನ್ನು ಪರಾಂಬರಿಸಿದ್ದಾಯಿತು. ಇಲ್ಲಿ ಸ್ವಾಮೀಜಿಯವರು ಸಂಗೀತದ ವಿವಿಧ ಮಗ್ಗುಲುಗಳನ್ನು ಪರಿಚಯಿಸಿದಂತೆಯೇ, ಹೆಚ್ಚುಕಡಿಮೆ, 'ಸಂಗೀತ ಸಂಗ್ರಹ' ಭಾಗದಲ್ಲೂ ಸ್ವಾಮೀಜಿಯವರು ಕೆಲವೇ ಗೀತೆಗಳ ಸಹಾಯದಿಂದ ವಿಶಾಲ ವಿಷಯ ವೈವಿಧ್ಯಗಳನ್ನು ಬಿಂಬಿಸಿದ್ದಾರೆ. ಸ್ವಾಮೀಜಿಯವರು ಆಧ್ಯಾತ್ಮಿಕ ಸಾಧಕರಾಗಿದ್ದಾಗ್ಯೂ, ಮನುಷ್ಯನ ಭಾವುಕತೆಯ ಅಭಿವ್ಯಕ್ತಿಯ ಅಗತ್ಯತೆಯನ್ನು ಯಾವತ್ತೂ ಕಡೆಗಣಿಸಲಿಲ್ಲ. ಈ ಸಂಕಲನಕ್ಕಾಗಿ ಹಾಡುಗಳ ಸಂಗ್ರಹ ಕಾರ್ಯ ಚುರುಕಾಗಿ ನಡೆಯುತ್ತಿದ್ದಾಗ ಸ್ವಾಮೀಜಿಯವರು ಬಾರಾನಗರ ಮಠವನ್ನು ಸಂಸ್ಥಾಪಿಸುವುದರಲ್ಲಿ ಪ್ರವೃತ್ತರಾಗಿದ್ದರು. ಅಂದರೆ ಅವರು, ತಮ್ಮ ಕುಟುಂಬ ಪರಿಜನರೊಂದಿಗಿನ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡಿರದಿದ್ದರೂ, ಆಧ್ಯಾತ್ಮಿಕ ಸಾಧನೆಯಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡಿದ್ದರು. ಆದರೂ ಸಮಕಾಲೀನ ಬ್ರಹ್ಮೋ ಅಥವಾ ಕ್ರಿಸ್ತೀಯ ಪ್ರಚಾರಕರಂತೆ ಕೇವಲ ಭಕ್ತಿಗೀತೆಗಳನ್ನು ಆಯ್ದುಕೊಳ್ಳದೆ ಅವರು ಮಾತೃಭೂಮಿ, ಪ್ರೀತಿ ಪ್ರೇಮ, ಇತಿಹಾಸ, ಧಾರ್ಮಿಕ ಮತ್ತು ಸಾಮಾಜಿಕ — ಇಂತಹ ವಿವಿಧ ವಿಷಯಗಳನ್ನೊಳಗೊಂಡ ಗೀತೆಗಳನ್ನು ಸಂಗ್ರಹಿಸಿದರು. ಇಂತಹ ಮನೋಧರ್ಮದ ಪ್ರತೀಕವೆಂಬಂತೆ ೧೯ನೇ ಶತಮಾನದ ಇತರ ಗೀತಸಂಗ್ರಹಗಳಾದ **'ವಿಶ್ವ ಸಂಗೀತ'**, **'ಗೀತ ರತ್ನಮಾಲಾ'**, ಅಂತಹ ಪ್ರಕಾಶನಗಳು ಭಕ್ತಿಸಂಗೀತದಿಂದ ತೊಡಗಿದರೆ, ಸ್ವಾಮೀಜಿಯವರ ಸಂಗ್ರಹವು ದೇಶಭಕ್ತಿ ಪ್ರಧಾನ ಗೀತೆಗಳಿಂದ ತೊಡಗಿತ್ತು. **'ಸಂಗೀತ ಕಲ್ಪತರು'** ಸಂಗ್ರಹವು, ೧೭೬ಕ್ಕಿಂತಲೂ ಮಿಕ್ಕಿದ ಸಂಯೋಜಕರು ಸೃಷ್ಟಿಸಿದ, ಧಾರ್ಮಿಕ ಸಿದ್ಧಾಂತಗಳು, ಸಾಮಾಜಿಕ ಸಮಸ್ಯೆಗಳು, ಪ್ರೀತಿಪ್ರೇಮಾಧಾರಿತ ಹಾಡುಗಳು, ಪುರಾಣದ ಕಥಾನಕಗಳು, ದೇಶಭಕ್ತಿಯ ಗೀತೆಗಳು ಇತ್ಯಾದಿ ವೈವಿಧ್ಯಮಯ ವಿಷಯಗಳನ್ನೂ ಕೇಂದ್ರವಾಗಿಟ್ಟುಕೊಂಡು ಹೊಸೆಯಲ್ಪಟ್ಟ ಗೀತೆಗಳ ಅದ್ಭುತ ಸರಮಾಲೆಯೇ ಆಗಿದೆ.

**'ಸಂಗೀತ ಕಲ್ಪತರು'** ಮತ್ತು ಅಂತಹ ಇತರ ಸಂಗ್ರಹ ಗ್ರಂಥಗಳ ತುಲನಾತ್ಮಕ ಅಧ್ಯಯನವನ್ನು ನಡೆಸಿದಾಗ, ಅವುಗಳಲ್ಲಿ ಅನೇಕ ಸ್ವತಂತ್ರ ವೈವಿಧ್ಯತೆ ಹಾಗೂ ಪರಸ್ಪರ ಸಾಮ್ಯತೆಗಳು ಕಂಡುಬರುತ್ತವೆ. ನವಕಾಂತ ಚಕ್ರವರ್ತಿಯವರ 'ಸಂಗೀತ ಸಂಗ್ರಹ' (೧೮೮೨) ಮತ್ತು 'ಭಾರತೀಯ ಸಂಗೀತ ಮುಕ್ತಾವಲೀ'(೧೯೯೧ ಆಟ್ಲಿಜ) ಸಂಗೀತ ಕಲ್ಪತರುವಿಗಿಂತ ಹಿಂದೆ ಪ್ರಕಟವಾದ ಸಂಗ್ರಹಗಳು — ಇವುಗಳಿಂದ ಹಲವಾರು ಹಾಡುಗಳು ಸ್ವಾಮೀಜಿಯವರ ಕೃತಿಯಲ್ಲಿ ಕಾಣಸಿಗುತ್ತವೆ. ಆದರೆ ಕೃಷ್ಣಾನಂದರ 'ಸಂಗೀತರಾಗ ಕಲ್ಪದ್ರುಮ' ದಿಂದ ಕೇವಲ ಮೂರು ಹಾಡುಗಳನ್ನು ಮಾತ್ರ ಸೇರಿಸಿಕೊಳ್ಳಲಾಗಿದೆ. ಒಂದು ಹಾಡಿನ ಸಂಯೋಜಕರ ಹೆಸರನ್ನು ಬದಲಾಯಿಸಲಾಗಿದೆ. 'ಸಂಗೀತರಾಗ ಕಲ್ಪದ್ರುಮ' ಒಂದು ಗಮನಾರ್ಹ ಸಂಗ್ರಹವಾಗಿದ್ದರೂ, 'ಸಂಗೀತ ಕಲ್ಪತರು'ವಿನಲ್ಲಿ ಸೇರಿಸಿರುವ ಹಾಡುಗಳನ್ನು ಆಯುವಾಗ ಅದರ ಪ್ರಭಾವವೇನೂ ಹೇಳುವಷ್ಟಿರಲಿಲ್ಲ. ಆದರೂ, ಅದರಲ್ಲಿ ಹಾಡುಗಳನ್ನು ವಿವಿಧ ಭಾಷೆಗಳಲ್ಲಿ ಪೋಣಿಸಿ ಶ್ರುತಪಡಿಸಿದ ರೀತಿ ಸಂಗೀತ ಕಲ್ಪತರುವಿನ 'ನಾನಾ ವಿಷಯಕ ಸಂಗೀತ' ವಿಭಾಗದಲ್ಲಿ ಸಂಸ್ಕೃತ, ಒರಿಯಾ, ಅಸ್ಸಾಮಿ, ಸಂತಾಲಿ ಇತ್ಯಾದಿ ವಿವಿಧ ಭಾಷೆಗಳಲ್ಲಿ ಹಾಡುಗಳನ್ನು ಪ್ರಕಟಿಸಲು ಮಾದರಿಯಾಗಿತ್ತೆಂದು ಧಾರಾಳವಾಗಿ ಹೇಳಬಹುದು.

**'ಸಂಗೀತ ಕಲ್ಪತರು'** (೧೨೯೪ Beng) ಬೆಳಕಿಗೆ ಬರುವ ಮುನ್ನ **'ಭಾರತೀಯ ಸಂಗೀತ ಮುಕ್ತಾವಲೀ'** (೧೨೯೧ Beng) ಒಂದೇ ಬಂಗಾಲಿ ಗೀತೆಗಳನ್ನು ಪ್ರತಿನಿಧಿಸುವ ಏಕೈಕ ಪ್ರಕಟಣೆಯಾಗಿತ್ತು. ಅದರಿಂದಾಗಿಯೇ ಆ ಪುಸ್ತಕದಿಂದ ೫೧ ಗೀತರಚನೆಕಾರರ ೯೩ ಹಾಡುಗಳನ್ನು **'ಸಂಗೀತ ಕಲ್ಪತರು'**ವಿನಲ್ಲಿ ಸೇರ್ಪಡೆಗೊಳಿಸಲಾಯಿತು. ಹಿಂದಿನ ಪುಸ್ತಕಗಳಲ್ಲಿ ಕಾಣೆಯಾಗಿದ್ದ ಹಲವು ರಚನಕಾರರ ಹೆಸರುಗಳನ್ನು ಈ ಪುಸ್ತಕದಲ್ಲಿ ಪ್ರಕಟಗೊಳಿಸಲಾಯಿತು. ಕೆಲವು ಭಾವಗೀತೆಗಳಲ್ಲಿ ಕೆಲವು ಹೊಸ ವಿಷಯಗಳನ್ನು ಸೇರಿಸಿಕೊಂಡಿರುವುದನ್ನು ಕಾಣಬಹುದು. **'ಭಾರತೀಯ ಸಂಗೀತ ಮುಕ್ತಾವಲೀ'**ಯಲ್ಲಿರುವ ಎಲ್ಲಾ ವರ್ಗಗಳ ಹಾಡುಗಳನ್ನು **'ಸಂಗೀತ ಕಲ್ಪತರು'**ವಿನಲ್ಲಿ ಸೇರಿಸಿಕೊಂಡಿರುವುದೂ ನಿಚ್ಚಳ. ಎರಡರಲ್ಲೂ ಹಾಡುಗಳ ಅನುಕ್ರಮಣಿಕೆಯಲ್ಲಿ ಸ್ವಲ್ಪ ವ್ಯತ್ಯಾಸಗಳನ್ನು ಕಾಣಬಹುದಾದರೂ, ಎರಡೂ ಪುಸ್ತಕಗಳು ರಾಷ್ಟ್ರಭಕ್ತಿಯ ಗೀತೆಗಳಿಂದ ತುಂಬಿಕೊಂಡಿದ್ದು, ಎರಡೂ ಪುಸ್ತಕಗಳಲ್ಲಿರುವ ಭಕ್ತಿ ಸಂಗೀತದ ಹಾಡುಗಳ ಸಂಖ್ಯೆ ಉಳಿದೆಲ್ಲ ವರ್ಗಗಳ ಹಾಡುಗಳ ಸಂಖ್ಯೆಗಿಂತ ಅಧಿಕವಾಗಿದೆ.

ಹೀಗಿದ್ದರೂ, **'ಸಂಗೀತ ಕಲ್ಪತರು'**ವಿನಲ್ಲಿ ಕಾಣಸಿಗುವ ಭಕ್ತಿಗೀತೆಗಳಲ್ಲಿನ ವೈವಿಧ್ಯತೆ, ಶ್ರೀಮಂತಿಕೆ (ಬ್ರಹ್ಮ ಸಮಾಜ, ಶಾಕ್ತ, ವೈಷ್ಣವ, ಬಾವುಲ್, ದೇಹತತ್ತ್ವ, ಕ್ರಿಸ್ತೀಯ, ಮಹಮ್ಮದೀಯ ಇತ್ಯಾದಿ) ಎಲ್ಲಾ ಮತಪಂಥಗಳ ಭಾವೈಕ್ಯತೆಯನ್ನು ಸಮಷ್ಟೀಕರಿಸುತ್ತ , ಆ ಕಾಲದ ಉಳಿದೆಲ್ಲ ಪ್ರಕಟಣೆಗಳನ್ನು ಮೀರಿಸಿದೆ. ಇದರ ಪ್ರಭಾವ, ಇದರ ನಂತರ ಬಂದ ಇತರ ಸಂಗ್ರಹಗಳ ಮೇಲೆ ಬೀರಿರುವುದರಲ್ಲಿ ವಿಶೇಷವೇನಿಲ್ಲ.

ಇದರಲ್ಲಿನ ಇನ್ನೊಂದು ವಿಶೇಷವೆಂದರೆ ಅದರಲ್ಲಿ ಸೇರಿಸಿಕೊಳ್ಳಲಾದ ಶ್ರೀರಾಮಕೃಷ್ಣರಿಗೆ ಸಂಬಂಧಿಸಿದಂತೆ ಮತ್ತು **ಚರಿತ ಸಂಗೀತ** (ಜೀವನ ಚರಿತ್ರೆಗೆ ಸಂಬಂಧಿಸಿದ ಹಾಡುಗಳು) ದಂತಹ ಭಕ್ತಿಗೀತೆಗಳು. ೧೯ನೇ ಶತಮಾನದ ಕೊನೆಯಲ್ಲಿ ಉದಯವಾದ ಶ್ರೀರಾಮಕೃಷ್ಣರ ಸುತ್ತ ಹೆಣೆದ ಬಂಗಾಲಿ ಹಾಡುಗಳ ಹೊಸತೊಂದು ಶ್ರೇಣಿಯನ್ನೇ **'ಸಂಗೀತ ಕಲ್ಪತರು'** ಜಗತ್ತಿಗೆ ಪರಿಚಯಿಸಿಕೊಟ್ಟಿತು.

**'ಸಂಗೀತ ಕಲ್ಪತರು'**ವಿನಲ್ಲಿ ಭಕ್ತಿಗೀತೆಗಳ ಜತೆಜತೆಗೆ ಪ್ರೇಮಗೀತೆಗಳು ಇರುವುದನ್ನು ಕಾಣಬಹುದು. ಮೊದಮೊದಲು **'ಭಾರತೀಯ ಸಂಗೀತ ಮುಕ್ತಾವಳಿ'**ಯಲ್ಲಿ ಇಂತಹ ಗೀತೆಗಳು ಜತೆಜತೆಯಾಗಿರುವುದು ಕಂಡುಬರುವುದಿಲ್ಲ. ಬ್ರಹ್ಮಸಮಾಜದ ನೇತಾರನಾಗಿದ್ದ ನಬಕಾಂತ ಚಟ್ಟೋಪಾಧ್ಯಾಯರಿಗೆ ಪ್ರೇಮಗೀತೆಗಳು ಸುತರಾಂ ಹಿಡಿಸುತ್ತಿರಲಿಲ್ಲದಿದ್ದರೂ **'ಮುಕ್ತಾವಳಿ'**ಯ ಎರಡನೇ ಖಂಡದಲ್ಲಿ ಅಂತಹ ಗೀತೆಗಳನ್ನು ಅವರಿಂದ ಸೇರಿಸಿಕೊಳ್ಳಲಾಯಿತು. ಅವರೇ ಇನ್ನೊಂದು ವಿಶಿಷ್ಟವಾದ **'ಗ್ರಾಮ್ಯ ಸಂಗೀತ'**ವನ್ನು ಪ್ರಚುರಪಡಿಸಿದರು. ಇಂತಹ ವಿಶಿಷ್ಟ ಪ್ರಕಾರವನ್ನು ನಾವು ಕಲ್ಪತರುವಿನ ಮುಖ್ಯ ಕಕ್ಷೆಯಲ್ಲಿ ಕಾಣುವುದಿಲ್ಲವಾದರೂ ಅದರ **'ನಾನಾ ವಿಷಯಕ ಸಂಗೀತ'** ವಿಭಾಗದಲ್ಲಿ **'ಗ್ರಾಮ್ಯಗೀತೆ'**ಯನ್ನು ಸೇರಿಸಿಕೊಂಡಿರುವುದನ್ನು ಗಮನಿಸಬಹುದು. **'ಸಂಗೀತ ಕಲ್ಪತರು'** ವಿನ ನಂತರ ಪ್ರಕಾಶಿತವಾದ **'ಭಾರತೀಯ ಸಂಗೀತ ಮುಕ್ತಾವಳಿ'**ಯ ಭಾಗ ೧ ಮತ್ತು ೨ನ್ನು ಸೇರಿಸಿ ಪ್ರಕಟಿಸಿದ ಸಂಯುಕ್ತ ಆವೃತ್ತಿಯಲ್ಲಿ ಬಂಗಾಳಿ ಹಾಡುಗಳು, ಜತೆಜತೆಗೆ ಹಿಂದೀ ಗೀತೆಗಳು, ಧ್ರುಪದ ಖಯಾಲ್ ಮತ್ತು ಧ್ರುಪದಗಳು ಬಂಗಾಳಿ ಹಾಡುಗಳ ಜತೆಗೇ ಮುದ್ರಿತವಾಗಿದ್ದರೂ, ಅದೊಂದು ಭಾರತದ ವಿವಿಧ ಪ್ರದೇಶಗಳಿಂದ, ವಿವಿಧ ಭಾಷೆಗಳಿಂದ ಸಂಗ್ರಹಿಸಿ ಪ್ರಕಟಿಸಿದ ಗೀತೆಗಳ ಶ್ರೀಮಂತ ಸಂಕಲನವಾಗಿತ್ತು. ನಂತರ ಬೆಳಕಿಗೆ ಬಂದ ಬಂಗಾಳಿ ಗೀತೆಗಳ ಸಂಗ್ರಹದಲ್ಲಿ ಹಿಂದೀ ಶಾಸ್ತ್ರೀಯ ಹಾಡುಗಳನ್ನು ಸೇರಿಸಿರುವ ಮತ್ತು ಅವುಗಳಿಗೆ ಕೊಟ್ಟಿರುವ ಪ್ರಾಧಾನ್ಯತೆಗೆ **'ಸಂಗೀತ ಕಲ್ಪತರು'**ವಿನ ಬ್ರಹ್ಮ ನರೇಂದ್ರನಾಥನಿಗೆ ಶಾಸ್ತ್ರೀಯ ಸಂಗೀತದ ಮೇಲಿದ್ದ ಮಮತೆಯೇ ಮೂಲ ಪ್ರಚೋದನೆಯೆಂಬುದನ್ನು ಮರೆಯಲಾಗದು.

ಹಾಡುಗಳ ವಿಚಾರದಲ್ಲಿ **'ಸಂಗೀತ ಕಲ್ಪತರು'** ತೋರಿಸಿದ ನವೀನ ವಿಚಾರ ಸರಣಿ ಸಂಗೀತ ಸಂಯೋಜಕರ ವಿಚಾರಕ್ಕೂ ವಿಸ್ತರಿಸಿದೆ. ಜಯದೇವನಿಂದ ತೊಡಗಿ ರವೀಂದ್ರನಾಥರವರೆಗೆ ಸುಮಾರು ೧೭೬ ಸಂಗೀತ ಸಂಯೋಜಕರ ಪಟ್ಟಿಯಲ್ಲಿನ ಹಲವಾರು ಹೆಸರುಗಳು **'ಸಂಗೀತ ರಾಗ ಕಲ್ಪದ್ರುಮ'**, **'ಸಂಗೀತ ಸಂಗ್ರಹ'**, **'ಭಾರತೀಯ ಸಂಗೀತ ಮುಕ್ತಾವಳಿ'** ಮತ್ತಿತರ ಮುನ್ನಿನ ಪ್ರಕಟಣೆಗಳಲ್ಲಿ ಬಿಟ್ಟುಹೋಗಿದೆ. ಅಂತಹರಲ್ಲಿ ಹಲವಾರು ಮಹನೀಯರನ್ನು **'ಸಂಗೀತ ಕಲ್ಪತರು'** ವಿಸ್ತೃತ ವರ್ತುಲಕ್ಕೆ ಪರಿಚಯಿಸಿಕೊಟ್ಟಿತು ಮತ್ತು ಅವರಲ್ಲಿ ಹಲವರಿಗೆ ಇದು ಸಂಗ್ರಹವೊಂದರಲ್ಲಿ ಲಭಿಸಿದ ಪ್ರಥಮ ಅವಕಾಶ. ಇಂತಹ ಮಹನೀಯರಲ್ಲಿ ಭರತ ಚಂದ್ರರ ಹೆಸರನ್ನು ವಿಶೇಷವಾಗಿ ಉಲ್ಲೇಖಿಸಬೇಕು. **'ಸಂಗೀತಸಾರ ಸಂಗ್ರಹ'** ಭಾಗ ೨ರ (೧೩೦೫, ಬಂಗಾಳಿ ಶಕೆ) ಸಂಪಾದಕರಾದ ಹರಿಮೋಹನ ಮುಖ್ಯೋಪಾಧ್ಯಾಯರು ಪುಸ್ತಕದ ಮುನ್ನುಡಿಯಲ್ಲಿ ಹೀಗೆ ಬರೆಯುತ್ತಾರೆ: ''ಮೊತ್ತಮೊದಲ ಬಾರಿಗೆ ಭರತಚಂದ್ರರ ಗೀತೆಗಳನ್ನು ಸೂರ್ ಮತ್ತು ತಾಲ್‌ಗಳಲ್ಲಿ ಸಂಯೋಜಿಸಲಾಗಿದೆ. ಇದರಿಂದಾಗಿ ಅವರ ಹಾಡುಗಳನ್ನು ಬಂಗಾಳದಾದ್ಯಂತ ಜನರು ಹೆಚ್ಚುಹೆಚ್ಚಾಗಿ ರಸಗ್ರಹಣ ಮಾಡಿ ಹೆಚ್ಚುಹೆಚ್ಚಾಗಿ ಹಾಡಬಹುದೆಂದು ಆಶಿಸಲಾಗಿದೆ.'' ನಿಜಕ್ಕೂ, ಭರತ ಚಂದ್ರರ ಸೂರ್ ಮತ್ತು ತಾಲ್‌ಗಳೊಂದಿಗೆ ಸಂಯೋಜಿಸಲ್ಪಟ್ಟ ಹಾಡುಗಳು, ಇದಕ್ಕೂ ಬಹು ಮುಂಚಿತವಾಗಿ **'ಸಂಗೀತ ಕಲ್ಪತರು'**ವಿನಲ್ಲಿ ಪ್ರಕಟವಾಗಿದ್ದು, ಬಹುಶಃ ಅವುಗಳು ಒಂದು ಸಂಗ್ರಹದಲ್ಲಿ ಸೇರಿಕೊಂಡಿದ್ದುದು ಮೊದಲ ಬಾರಿಗೆ ಇರಬೇಕು.

ಹೇಗೆ ಭರತಚಂದ್ರರು ಮಧ್ಯಕಾಲದ ಬಂಗಾಳಿ ಸಾಹಿತ್ಯದ **'ಮಂಗಲಕಾವ್ಯ'** ಪ್ರಕಾಶದ ಕೊನೆಯ ಪ್ರತಿನಿಧಿಯಾಗಿದ್ದರೋ ಹಾಗೆಯೇ ಬಿಹಾರಿಲಾಲರು ಅರ್ವಾಚೀನ ಬಂಗಾಳಿ ಗೀತ ಸಾಹಿತ್ಯದ ಹರಿಕಾರರಾಗಿದ್ದರು. ಆದುದರಿಂದಲೇ ಅವರಿಬ್ಬರ

ಗೀತೆಗಳನ್ನು '**ಸಂಗೀತ ಕಲ್ಪತರು**'ವಿನಲ್ಲಿ ಜತೆಜತೆಯಾಗಿ ಕೊಡ ಮಾಡಲಾಗಿದೆ. ಇದರಿಂದಾಗಿ ಗೀತರಚನಾಕಲೆಯಲ್ಲಿ ಪ್ರಾಚೀನ ಮತ್ತು ಆಧುನಿಕತೆಯನ್ನು ಸುಮಧುರವಾಗಿ ಮೇಳೈಸುವ ಕೆಲಸ ಸಾಧ್ಯವಾಯಿತು. ಅವರು ಸಾಂಪ್ರದಾಯಿಕತೆಗೆ ಮನ್ನಣೆ ಕೊಟ್ಟಿದ್ದರೂ, ಪುಸ್ತಕದಲ್ಲಿ ಭರತಚಂದ್ರರ ಎರಡೇ ಎರಡು ಹಾಡುಗಳಿದ್ದು, ಬಿಹಾರಿಲಾಲರ ೧೬, ಅಂದರೆ ರಾಮಪ್ರಸಾದರ ಹಾಡುಗಳ ಸಂಖ್ಯೆ(೧೧)ಕ್ಕಿಂತಲೂ ಜಾಸ್ತಿ ಇರುವುದನ್ನು ಗಮನಿಸಿದರೆ, ಸಂಗೀತ ಕಲ್ಪತರುವಿನ ಸಂಪಾದಕರ ಮನೋಧರ್ಮ ಹಾಡುಗಳ ಆಯ್ಕೆಯಲ್ಲಿ ಎಷ್ಟು ಪ್ರಗತಿಪರವಾಗಿತ್ತು ಎಂಬುದು ನಿರ್ವಿವಾದ. ೧೯ನೇ ಶತಮಾನ ಮತ್ತು ೨೦ನೇ ಶತಮಾನದ ಆದಿಯಲ್ಲಿ ಪ್ರಕಟಗೊಂಡ ಯಾವುದೇ ಸಂಗ್ರಹದಲ್ಲೂ ಬೇರೆಯವರ ಕೃತಿಗಳ ತುಲನೆಯಲ್ಲಿ ಬಿಹಾರಿಲಾಲರ ಕೃತಿಗಳ ಸಂಖ್ಯೆ ಅಷ್ಟು ವಿಪುಲವಾಗಿರುವುದು ಕಂಡುಬರುವುದಿಲ್ಲ.

ಕೇವಲ ಆಯ್ಕೆಗೊಂಡ ಕೃತಿಗಳ ಸಂಖ್ಯೆಯ ಮೇಲೆ ನಿರ್ಧರಿಸುವುದಾದರೆ '**ಸಂಗೀತ ಕಲ್ಪತರು**'ವಿನಲ್ಲಿ ಸೇರಿಸಿಕೊಂಡ ರಚಯಿತರ ಶ್ರೇಣಿಯಲ್ಲಿ ಬಿಹಾರಿಲಾಲ ಆರನೇ ಸ್ಥಾನದಲ್ಲಿರುವುದು ಮಾತ್ರವಲ್ಲ ತರುಣ ರವೀಂದ್ರನಾಥರು ರಚಿಸಿದ ಹನ್ನೊಂದು ಹೊಸ ಹಾಡುಗಳೂ ಈ ಪುಸ್ತಕದ ಮೂಲಕ ಬೆಳಕು ಕಂಡವು. ಅವರು ಬರೆದರೆನ್ನಲಾದ ಇನ್ನೊಂದು ಹಾಡು (ದೇಖೋರೇ ಜಗತ್) ನಿಜವಾಗಿ ಜ್ಯೋತೀಂದ್ರನಾಥರೇ ಬರೆದುದೆಂದು ಹೇಳಲಾಗುತ್ತಿತ್ತು. ಬಿಹಾರಿಲಾಲ ಮತ್ತು ರವೀಂದ್ರನಾಥರ ರಚನೆಗಳಿಗೆ ಕೊಟ್ಟ ಪ್ರಾಶಸ್ತ್ಯವನ್ನು ಗಮನಿಸಿದರೆ ಈ ಸಂಗ್ರಹವು ಆಧುನಿಕ ಹಾಡುಗಳಿಗೆ ಕೊಟ್ಟ ಮಹತ್ತ್ವವು ಮನದಟ್ಟಾಗದಿರದು. ಹಾಡುಗಳ ಮತ್ತು ಅವುಗಳ ರಚಯಿತರ ಆಯ್ಕೆಯಲ್ಲಿ ತೋರಿದ ಸೂಕ್ಷ್ಮ ಒಲವು ಈ ಪುಸ್ತಕದ ವಿಶೇಷತೆಗಳಲ್ಲೊಂದು. ಪುಸ್ತಕದ ಇನ್ನೊಂದು ಮುಖ್ಯ ಸಕಾರಾತ್ಮಕ ವಿಶೇಷವೆಂದರೆ ಅದರ ಅಚ್ಚುಕಟ್ಟುತನ. ಹಳೆಯ ಬಂಗಾಳಿ ಹಾಡುಗಳ ಸಂಗ್ರಹಗಳು ಅನೇಕ ವಿದ್ದರೂ, ಒಂದೇ ಅಂಕದಲ್ಲಿ, ಸುಮಾರು ೬೪ಂರಷ್ಟು ಹಾಡುಗಳು ಮತ್ತು ಅದರ ಕರ್ತೃಗಳ ಸ್ತರವೈವಿಧ್ಯತೆಯಿಂದ ಗಮನಿಸಿದರೆ '**ಸಂಗೀತ ಕಲ್ಪತರು**'ವಿಗೆ ಸಾಟಿಯಾದ ಪ್ರಕಾಶನವೇ ಇಲ್ಲವೆನ್ನಬಹುದು. ಆ ದಿನಗಳಲ್ಲಿ ಬಂಗಾಳಿ ಗೀತೆಗಳ ಸಂಗ್ರಹದ ಸಮಗ್ರತೆಯ ಕುರುಹಾಗಿ ಈ ಪುಸ್ತಕವು ವಿಶೇಷ ಬೇಡಿಕೆಯಲ್ಲಿತ್ತು; ಅಲ್ಲಿಯವರೆಗೆ ಬೆಳಕುಕಂಡ ಬಂಗಾಳಿ ಗೀತೆಗಳ ಸಂಗ್ರಹ ಪುಸ್ತಕಗಳ ಚರಿತ್ರೆಯಲ್ಲೇ ವಿರಳವೆನ್ನಬಹುದಾದ, ಒಂಬತ್ತು ತಿಂಗಳ ಕಿರುಅವಧಿಯಲ್ಲೇ ಮೂರು ಬಾರಿ ಮರುಮುದ್ರಣಗೊಂಡ ಏಕಮೇವ ಪುಸ್ತಕ '**ಸಂಗೀತ ಕಲ್ಪತರು**' ಎನ್ನುವುದು ಒಂದು ಸರ್ವಕಾಲೀನ ದಾಖಲೆಯೇ ಸರಿ.

### ಪುಸ್ತಕಕ್ಕೆ ಸಂಬಂಧಿಸಿದಂತೆ ಇತ್ತೀಚಿಗಿನ ವಿದ್ಯಮಾನಗಳು

ಆದರೆ ಅದರ ನಾಲ್ಕನೆಯ ಆವೃತ್ತಿಯಲ್ಲಿ ನರೇಂದ್ರನಾಥರ ಸಹಯೋಗಿ ವೈಷ್ಣವ ಚರಣ ಕೆಲವು ಬದಲಾವಣೆಗಳನ್ನು ಮಾಡಿದುದೇ ಅಲ್ಲದೆ ಪುಸ್ತಕದ ಹೆಸರನ್ನು '**ಸಂಗೀತ ಕಲ್ಪತರು**'ವಿನಿಂದ '**ವಿಶ್ವಸಂಗೀತ**'ಕ್ಕೆ ಬದಲಾಯಿಸಿ, ನರೇಂದ್ರನಾಥರ ಹೆಸರಿನ ಜಾಗದಲ್ಲಿ ತನ್ನ ಹೆಸರನ್ನೇ ಸಂಪಾದಕನೆಂದು ಪಲ್ಲಟಗೊಳಿಸಿದ. ಪುಸ್ತಕದ ಜಾಹೀರಾತಿನಲ್ಲಿ ''ಇದು '**ಸಂಗೀತ ಕಲ್ಪತರು**'ವಿನ ಪರಿಷ್ಕೃತ, ನವೀಕರಿಸಿದ ಮತ್ತು ವಿಸ್ತೃತ ರೂಪವಾಗಿರುವುದರಿಂದ, ಭವಿಷ್ಯದಲ್ಲಿ '**ಸಂಗೀತ ಕಲ್ಪತರು**'ವಿನ ಮುದ್ರಣವನ್ನು ಸ್ಥಗಿತಗೊಳಿಸಲಾಗಿದೆ'' ಎಂದೂ ವೈಷ್ಣವ ಚರಣ ಘೋಷಿಸಿದ. ಹೀಗೆ '**ಸಂಗೀತ ಕಲ್ಪತರು**' ಪ್ರಸಾರದಿಂದ ಕಣ್ಮರೆಯಾಯಿತು. ಮತ್ತು ಕಾಲಾಂತರದಲ್ಲಿ, ಸಂಗೀತ ಕ್ಷೇತ್ರಕ್ಕೆ ಸ್ವಾಮೀಜಿಯವರು ನೀಡಿದ ಅಮೂಲ್ಯ ಕೊಡುಗೆಯು ಜನಮನದಿಂದ ಮಾಸಿಹೋಯಿತು. ಆದರೆ, ಅದೃಷ್ಟವಶಾತ್, ರಾಮಕೃಷ್ಣ ಮಿಷನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್‌ನ ಅವಿರತ ಶ್ರಮದ ಫಲವಾಗಿ, ಸುಮಾರು ೧೧೨ ವರ್ಷಗಳ ನಂತರ ಈ ಪುಸ್ತಕದ ನವೀನ ಮುದ್ರಿತ ಪ್ರಕಾಶನ ನಮಗೆ ಸಿಗುವಂತಾಗಿದೆ. ಡಾ. ಶರ್ವಾನಂದ ಚೌಧುರಿಯವರಿಗೆ ಈ ಪುಸ್ತಕವನ್ನು ಮತ್ತೊಮ್ಮೆ ಸಂಪಾದಿಸುವ ಸೌಭಾಗ್ಯ ದೊರೆಯಿತು. ೨೭ ಫೆಬ್ರವರಿ ೨೦೦೦ ದಿನಾಂಕದಂದು ಅಂತಾರಾಷ್ಟ್ರೀಯ ಖ್ಯಾತಿಯ ಸಂಗೀತ ವಿದ್ವನ್ಮಣಿ ಪಂಡಿತ್ ರವಿಶಂಕರ್ ಅವರು ಸಂಸ್ಥೆಯ ವಿವೇಕಾನಂದ ಸಭಾಗೃಹದಲ್ಲಿ ಈ ಪುಸ್ತಕವನ್ನು ಲೋಕಾರ್ಪಣೆ ಮಾಡಿದರು. ಈ ಸಮಾರಂಭದ ನಂತರ ಈ ಪುಸ್ತಕದ ಬಗ್ಗೆ ಸಾರ್ವಜನಿಕ ಆಸಕ್ತಿಯ ಪ್ರವಾಹ ಎಷ್ಟರ ಮಟ್ಟಿಗೆ ಹೆಚ್ಚಿತೆಂದರೆ ಇದರ ನೂತನ ಆವೃತ್ತಿಯ ಮೊದಲ ಮುದ್ರಣದ ಪ್ರತಿಗಳು ಕೇವಲ ಮೂರು ತಿಂಗಳುಗಳಲ್ಲೇ ಮುಗಿದು ಹೋದವು. ಚರಿತ್ರೆಯ ಮುಖ್ಯವಾಹಿನಿಯಿಂದ ದೀರ್ಘಕಾಲ ಸರಿದು ಹೋದ ಈ ಪುಸ್ತಕ ಮತ್ತೊಮ್ಮೆ ಆ ವಾಹಿನಿಗೆ ಮರಳಿದಂತಾಯಿತು.

ಮಹಾನ್ ಆಧ್ಯಾತ್ಮಿಕ ಚೇತನದ ಸ್ವಾಮಿ ವಿವೇಕಾನಂದರು ಬಹುಮುಖ ಪ್ರತಿಭೆಯ ವ್ಯಕ್ತಿತ್ವದವರಾಗಿದ್ದರು. ಅವರ ಸಂಗೀತ ವೈದುಷ್ಯ, ಅವರ ಅಸೀಮ ವ್ಯಕ್ತಿತ್ವದ ಒಂದು ಕಿರು ಮಗ್ಗುಲಾಗಿದ್ದರೂ, ಅದು ಈ ಪುಸ್ತಕ ಮಾತ್ರದಿಂದ ಜಗತ್ತಿಗೆ ಪರಿಚಯಿಸಲ್ಪಟ್ಟಿತು. ❋

## ಶಬ್ದ-ಬ್ರಹ್ಮ

ಶ್ರೀರಾಮಕೃಷ್ಣರ ನೇರ ಶಿಷ್ಯರಾದ ಸ್ವಾಮಿ ಬ್ರಹ್ಮಾನಂದರು ಹೇಳುತ್ತಾರೆ: ''ನೋಡು, ನೀನು ಭಜನೆ ಮತ್ತು ಸಂಗೀತವನ್ನು ಪ್ರೀತಿಸಬೇಕು. ಸಂಗೀತದ ಮೂಲಕವೂ ಭಗವಂತನನ್ನು ಸೇರಬಹುದು ಎಂಬುದನ್ನು ನೀನು ಎಂದೆಂದಿಗೂ ನೆನಪಿನಲ್ಲಿಟ್ಟುಕೋ. ಸಂಗೀತವು '**ಶಬ್ದ-ಬ್ರಹ್ಮ**'ವೇ ಆಗಿದೆ. ಒಬ್ಬ ವ್ಯಕ್ತಿ ಧ್ಯಾನದ ಮೂಲಕ ಇದನ್ನು ಅನುಭವಿಸುತ್ತಾನೆ.''

(Edith D. Tipple,*'What the Disciples Said About It'*, Kolkata, Advaita Ashrama, 2015, p.384.)

# ಶ್ರೀ ರಾಮಕೃಷ್ಣರು ಮತ್ತು ಸಂಗೀತ

**ಸ್ವಾಮಿ ಮಂಗಳನಾಥಾನಂದ**



**ಅವತಾರ ವರಿಷ್ಠರೆಂದೇ ಸ್ತುತಿಸಲ್ಪಟ್ಟಿರುವ ಶ್ರೀರಾಮಕೃಷ್ಣರು ಭಗವಂತನ ಮೇಲೆ ರಚಿತವಾದ ಹಾಡುಗಳನ್ನು ಹಾಡುತ್ತ ಭಾವಪರವಶರಾಗುತ್ತಿದ್ದರು, ಉನ್ಮತ್ತರಾಗಿ ನರ್ತಿಸುತ್ತ ಸಮಾಧಿಯ ಸ್ಥಿತಿಗೇರುತ್ತಿದ್ದರು. ಅವರ ಹಾಡಿನ ನಾದ ಮಾಧುರ್ಯಕ್ಕೆ ಮರುಳಾಗದವರೇ ಇರಲಿಲ್ಲ. ಸಂಗೀತದ ಸೂಕ್ಷ್ಮ ವಿಚಾರಗಳನ್ನು ಅರಿತಿದ್ದ ಅವರು ಅನೇಕ ಮಂದಿ ಗಾಯಕರ ಹಾಡುಗಳನ್ನು ಕೇಳಿ ಆನಂದಿಸುತ್ತಿದ್ದರು, ಆ ಗಾನದಲ್ಲೇ ಒಂದಾಗಿ ಮೈಮರೆತುಬಿಡುತ್ತಿದ್ದರು. ಅವರ ಜೀವನ, ಉಪದೇಶಗಳಲ್ಲಿ ಕಂಡುಬರುವ ಸಂಗೀತದ ವಿಚಾರಗಳನ್ನು ಕುರಿತು ವಿಶ್ಲೇಷಿಸಿರುವ ಲೇಖಕರು ಬೆಂಗಳೂರು ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಉತ್ತಮ ಭಾಷಣಕಾರರೂ, ಬರಹಗಾರರೂ ಆಗಿರುವ ಅವರು ಉತ್ತಮ ಗಾಯಕರೂ ಆಗಿದ್ದಾರೆ. ಅವರ ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

‘‘ದೇವರನ್ನು ಸದಾ ಜ್ಞಾಪಕದಲ್ಲಿಟ್ಟುಕೊಳ್ಳುವ ಅಭ್ಯಾಸಕ್ಕೆ ಬಹಳ ಸಹಕಾರಿಯಾದುದು ಸಂಗೀತ. ಭಕ್ತಿಯ ಮಹಾನ್ ಬೋಧಕನಾದ ನಾರದನಿಗೆ ಭಗವಂತನು ಹೀಗೆ ಹೇಳುತ್ತಾನೆ, ‘ನಾನು ಸ್ವರ್ಗದಲ್ಲಿಯೂ ಇಲ್ಲ, ಯೋಗಿಯ ಹೃದಯದಲ್ಲಿಯೂ ಇಲ್ಲ. ಎಲ್ಲಿ ನನ್ನ ಭಕ್ತರು ನನ್ನನ್ನು ಭಜನೆ ಮಾಡುವರೋ ಅಲ್ಲಿ ನಾನು ಇರುವೆನು.’ ಮನುಷ್ಯನ ಮನಸ್ಸಿನ ಮೇಲೆ ಸಂಗೀತಕ್ಕೆ ಅಷ್ಟು ಅದ್ಭುತವಾದ ಪ್ರಭಾವವಿದೆ. ಮನಸ್ಸನ್ನು ಅದು ಕ್ಷಣಮಾತ್ರದಲ್ಲಿ ಏಕಾಗ್ರಗೊಳಿಸುತ್ತದೆ. ಸಾಧಾರಣ ಕಾಲದಲ್ಲಿ ಮನಸ್ಸನ್ನು ಕ್ಷಣಕಾಲವಾದರೂ ಏಕಾಗ್ರಗೊಳಿಸಲಾರದ ಮೂರ್ಖರು, ಮೂಢರು ಮತ್ತು ಒರಟು ಸ್ವಭಾವದವರು ಕೂಡ ಮಧುರವಾದ ಗಾನವನ್ನು ಕೇಳಿದಾಗ ಆಕರ್ಷಿತರಾಗಿ ಏಕಾಗ್ರತೆಯನ್ನು ಹೊಂದುವನು. ನಾಯಿ, ಸಿಂಹ, ಬೆಕ್ಕು, ಸರ್ಪ ಮುಂತಾದವು ಕೂಡ ಸಂಗೀತಕ್ಕೆ ಒಲಿಯುತ್ತವೆ.’’ *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೧, ಪು. ೧೩೨)*

‘‘After silence that which comes nearest to expressing the inexpressible is music’’— Aldous Huxlay.

ಈ ಜಗತ್ತಿನಲ್ಲಿ ಭಗವಂತನನ್ನು ಬಿಟ್ಟರೆ ಸಮಾನವಾದ ವಸ್ತು ಒಂದು ಇದ್ದರೆ ಅದು ಸಂಗೀತವೇ. ಏಕೆಂದರೆ ದೇಶ ಯಾವುದೇ ಇರಲಿ, ಭಾಷೆ ಯಾವುದಾದರೂ ಪರವಾಗಿಲ್ಲ, ಜಾತಿಯ ಪ್ರಶ್ನೆಯೂ ಇಲ್ಲ. ಸಂಗೀತದ ವಿಚಾರದಲ್ಲಿ ರಾಗದ ಸ್ವರ, ಶ್ರುತಿ ಎಲ್ಲರಿಗೂ ಒಂದೇ ಸ,ರಿ,ಗ – ಗಳು ಮುಸ್ಲಿಮರಿಗೂ ಒಂದೇ, ಬ್ರಾಹ್ಮಣರಿಗೂ ಒಂದೇ, ಅಮೆರಿಕದವರಿಗೂ ಒಂದೇ, ಐರೋಪ್ಯರಿಗೂ ಒಂದೇ.

ಸಂಗೀತದ ಮೂಲ ವೇದವೇ. ಋಗ್ವೇದದ ಮಂತ್ರಗಳ ಅಥವ ‘ಋಕ್’ಗಳನ್ನು ಮಧುರವಾಗಿ ಹಾಡಿದಾಗ ಅಥವಾ ಹಾಡಿಗೆ ಅಳವಡಿಸಿದಾಗ ‘ಸಾಮ’ ಅಥವ ‘ಸಾಮವೇದ’ವೆನಿಸಿದೆ. ಇದರಿಂದ ಮುಂದುವರೆದು, ಬೆಳೆದು ನಮ್ಮ ಇಂದಿನ ಹಲವು ಸಂಗೀತದ ರೂಪವನ್ನು ತಾಳಿದೆ.

ಈ ಜಗತ್ತು ಪ್ರಕಟವಾಗಿರುವುದೇ ಭಗವಂತನಿಂದ ಅಥವಾ ಬ್ರಹ್ಮನಿಂದ. ಬ್ರಹ್ಮವೇ ಜಗತ್ತಿಗೆ ಮೂಲ ಕಾರಣ. ‘ಏಕ’ ದಿಂದ ‘ಅನೇಕವು’. ‘ಸತ್ಯ’ ಒಂದೇ. ನಾಮ-ರೂಪಾತ್ಮಕವಾದ ಈ ಜಗತ್ತಿಗೆ ಬ್ರಹ್ಮವೇ ಮೂಲ ಕಾರಣ. ಹೀಗಿದ್ದಾಗ ‘ನಾದ’ ಅಥವ ‘ಶಬ್ದ’ವೂ ಈ ಜಗತ್ತಿನ ಒಂದು ಅಂಶ. ಇದೂ ಕೂಡ ‘ಅವನ’ ವ್ಯಕ್ತರೂಪವೇ. ಇದಕ್ಕೆ ಪೂರಕವಾಗಿ ಸ್ವಾಮಿ ಬ್ರಹ್ಮಾನಂದರ ಒಂದು ಅನುಭವವನ್ನು ನೋಡೋಣ. ಒಮ್ಮೆ ಅವರೇ ಹೇಳುತ್ತಾರೆ: ‘‘ಒಂದು ದಿನ ಶ್ರೀರಾಮಕೃಷ್ಣರು ತಮ್ಮ ಉಪದೇಶದ

ಸಮಯದಲ್ಲಿ ಬ್ರಹ್ಮನು ಶಬ್ದವಾಗಿ ಅಭಿವ್ಯಕ್ತವಾಗುವುದನ್ನು ಹೇಳಿದರು. ಇದನ್ನೇ ನಾನು ಮಧ್ಯಾಹ್ನದ ಧ್ಯಾನದ ವಿಷಯವಾಗಿ ತೆಗೆದುಕೊಂಡೆ. ನಾನು ಧ್ಯಾನಕ್ಕೆ ಕುಳಿತುಕೊಂಡಿದ್ದಾಗ ಇದ್ದಕ್ಕಿದ್ದಂತೆ ಶಬ್ದ ಬ್ರಹ್ಮನ ಸತ್ಯತೆಯ ಅರಿವಾಯಿತು ನನಗೆ.''

ಭಾರತದಲ್ಲಿ ಶಬ್ದತತ್ತ್ವವು ಪ್ರಾರಂಭವಾದದ್ದು ವ್ಯಾಕರಣದಿಂದ ಎಂಬ ಮಾತಿದೆ. ಅವರು ಅದನ್ನು 'ಸ್ಫೋಟ'ವೆಂದು ಕರೆದರು. ಮುಂದೆ ತಂತ್ರಶಾಸ್ತ್ರದ ಒಂದು ಭಾಗವಾದ ಮಂತ್ರ ಶಾಸ್ತ್ರವು ವಿಶ್ವವೇ ಸ್ಪಂದನದಿಂದ ಸೃಷ್ಟಿಸಲ್ಪಟ್ಟಿದೆ ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದೆ. ನಾವು ಕೇಳುವ ಧ್ವನಿ ಬಾಹ್ಯ ಭೌತಿಕ ಸ್ಪಂದನ. ಶ್ರಾವ್ಯ ಶಬ್ದಕ್ಕಿಂತ ಸೂಕ್ಷ್ಮವಾದದ್ದು ಆಕಾಶದ (Ether) ಸ್ಪಂದನಗಳು. ಇದಕ್ಕೂ ಸೂಕ್ಷ್ಮವಾದದ್ದು ಆಲೋಚನಾ ತರಂಗಗಳು. ಆದ್ದರಿಂದ ಆಲೋಚನೆಯು ನಾದಬ್ರಹ್ಮನ ಅಥವ ಶಬ್ದ ಬ್ರಹ್ಮನ ವಿಶ್ವಸ್ಪಂದನ ಅಭಿವ್ಯಕ್ತಿ.

ಒಟ್ಟಿನಲ್ಲಿ ದಿವ್ಯ ಚೈತನ್ಯವು ದಿವ್ಯ ಭಾವನೆಯ ಮೂಲಕ ವ್ಯಕ್ತವಾಗಿ, ದಿವ್ಯ ಭಾವನೆಯು ದಿವ್ಯಶಬ್ದದ ಮೂಲಕ ವ್ಯಕ್ತವಾಗುವುದು.

ನಮ್ಮ ಭಾರತೀಯ ಸಾಹಿತ್ಯವು (ವೇದ, ಇತಿಹಾಸ, ಪುರಾಣ) ಸಂಗೀತ 'ನಾದ'ದಿಂದ ಉದ್ಭವವಾಗಿದೆ ಎಂದು ವರ್ಣಿಸಿದೆ. ಶಬ್ದವು ಆಕಾಶತತ್ತ್ವದ ಗುಣ (ಶಬ್ದ ಆಕಾಶ ಸಂಭವಃ). ನಮ್ಮಲ್ಲಿ ಶಬ್ದವು ಪ್ರಾಣವಾಯು ಮತ್ತು ಅಗ್ನಿಯ (ಇಚ್ಛಾಶಕ್ತಿಯ) ಘರ್ಷಣೆಯಿಂದ (friction) ಉತ್ಪನ್ನವಾಗುತ್ತದೆ. ಮೊದಲು ಇದು 'ಅನಾಹತ' (ಕಾರಣ), ನಂತರ 'ಆಹತ' (ಸ್ಥೂಲ)ವಾಗಿ ವ್ಯಕ್ತವಾಗುತ್ತದೆ. ಶಬ್ದಕ್ಕೆ ಅಥವ ಧ್ವನಿಗೆ ಸಾಹಿತ್ಯ, ರಾಗ, ತಾಳ, ಭಾವ, ಭಕ್ತಿ ಸೇರಿದಾಗ ಸಂಗೀತವೆನಿಸುತ್ತದೆ.

ಆದ್ದರಿಂದ ಸಂಗೀತದ ಉಪಾಸನೆ ಎಂದರೆ ಅದು ಆಧ್ಯಾತ್ಮಿಕ ಮಾರ್ಗವೇ ಅಥವಾ ಉಪಾಸನೆಯೇ. ಸಂಗೀತದ ಗುರಿಯೂ ಕೇವಲ ಪಾಂಡಿತ್ಯವಲ್ಲ , ಬದಲಿಗೆ ಕಾರಣವಾದ ಭಗವಂತನನ್ನು ಅಥವ ಬ್ರಹ್ಮನನ್ನು ಅರಿಯುವುದು ಅಥವಾ ಸೇರುವುದು ಎಂದು ಅರ್ಥ. ಸಂಗೀತದಿಂದ, ಇದರ ಕಾರಣವಾದ ನಾದಬ್ರಹ್ಮನ ಮೂಲಕ ಆ ಪರಬ್ರಹ್ಮನನ್ನು ಪಡೆಯುವುದು.

ಪುರಂದರದಾಸರು, ಕನಕದಾಸರು, ತ್ಯಾಗರಾಜರು ಮತ್ತು ಮುತ್ತುಸ್ವಾಮಿ ದೀಕ್ಷಿತರು, ಶ್ಯಾಮಾಶಾಸ್ತ್ರೀ, ಅಣ್ಣಮಾಚಾರ್ಯ, ತುಳಸೀದಾಸರು, ಕಬೀರ್‌ದಾಸರು, ಜಯದೇವ ಮೊದಲಾದವರು ಸಂಗೀತ-ಸಂತರು. ಈ ಸಂತರು ಸಂಗೀತಕ್ಕೆ, ಸಂಗೀತದ ಸಾಹಿತ್ಯಕ್ಕೆ ವಿಶೇಷವಾದ ಕೊಡುಗೆಯನ್ನು ಕೊಟ್ಟಿದ್ದಾರೆ.

ಬೃಹದ್ಧರ್ಮ ಪುರಾಣ, ಅದ್ಭುತ ರಾಮಾಯಣ, ಲಿಂಗ ಪುರಾಣಗಳಲ್ಲಿ ಪ್ರತಿಯೊಂದು ರಾಗಕ್ಕೂ ಒಬ್ಬೊಬ್ಬ ಅಧಿಷ್ಠಾತೃ ದೇವತೆಗಳಿದ್ದಾರೆ ಎಂದು ತಿಳಿಸಲಾಗಿದೆ. ಹಾಗೂ ವಿಕೃತವಾಗಿ ರಾಗಗಳನ್ನು ಹಾಡಿದರೆ, ದೇವತೆಗಳು ಖಿನ್ನರಾಗುತ್ತಾರೆ (ಸೌಂದರ್ಯ ಕಳೆದಂತೆ, ಕುರೂಪಿಗಳಂತೆ) ಎಂದು ನಾರದರ ಕಥೆಯ ಮೂಲಕ ಹೇಳಲಾಗಿದೆ. ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಒಂದು ಶ್ಲೋಕ ಹೀಗಿದೆ:

ವೀಣಾವಾದನತತ್ತ್ವಜ್ಞಃ ಶ್ರುತಿಜಾತಿ ವಿಶಾರದಃ ।
ತಾಳಜ್ಞಾಶ್ಚಾಪ್ರಯಾಸೇನ ಮೋಕ್ಷಮಾರ್ಗಂ ನಿಯಚ್ಛತಿ॥

'ಯಾರಿಗೆ ವೀಣೆಯ ತತ್ತ್ವ ತಿಳಿದಿದೆಯೋ, ಶ್ರುತಿ ಮತ್ತು ಲಯದಲ್ಲಿ (ತಾಳ) ಪರಿಣಿತನೋ, ಆತನು ಮೋಕ್ಷವನ್ನು ಪ್ರಯಾಸವಿಲ್ಲದೆ ಹೊಂದುತ್ತಾನೆ' ಎಂದು.

ಇಲ್ಲಿ ಒಂದು ಬಹು ಮುಖ್ಯವಾದ ವಿಚಾರವನ್ನು ತಿಳಿಯಬೇಕು. ಈ ನಾದಬ್ರಹ್ಮನ ಸ್ಪಂದನವನ್ನು ಕೇಳಲು ಅತಿ ಶುದ್ಧವಾದ ಮನಸ್ಸು ಬೇಕು. ಮನಸ್ಸು ಶುದ್ಧವೂ ಏಕಾಗ್ರವೂ ಆದಾಗ ಇದರ ಆಳ ಅರಿವಾಗುತ್ತದೆ. ಶುದ್ಧ ಮನಸ್ಸಿಗೆ ಮಾತ್ರ ಸಂಗೀತವು ಭಗವಂತನ ಸಾಕ್ಷಾತ್ಕಾರದ ಪಥವಾಗುತ್ತದೆ. ಹಾಗೇನೇ ಸಿದ್ಧನಿಗೆ, ಭಗವಂತನನ್ನು ಕಂಡವನಿಗೆ ಸಂಗೀತವು ಭಗವಂತ ಅಭಿವ್ಯಕ್ತಿಯಾಗಿ ತೋರುತ್ತದೆ. ತ್ಯಾಗರಾಜರು ತಮ್ಮ 'ನಾದಲೋಲುಡೈ' ಹಾಡಿನಲ್ಲಿ ನಾದೋಪಾಸನೆಯ ಮೂಲಕ ಬ್ರಹ್ಮಾನಂದವನ್ನು ಪಡೆ ಎಂದೂ ಕೂಡ ಸೂಚಿಸಿದ್ದಾರೆ.

ಒಂದು ಸಂಸ್ಕೃತ ಸುಭಾಷಿತವು ಹೀಗೆ ಹೇಳುತ್ತದೆ:

ಸಾಹಿತ್ಯ ಸಂಗೀತ ಕಲಾ ವಿಹೀನಃ ।
ಸಾಕ್ಷಾತ್ ಪಶುಃ ಪುಚ್ಛವಿಷಾಣಹೀನಃ ॥

'ಯಾವ ವ್ಯಕ್ತಿಗೆ ಸಂಗೀತ, ಸಾಹಿತ್ಯ, ಕಲೆಯಲ್ಲಿ ಆಸಕ್ತಿ ಇಲ್ಲವೋ ಆತ ಬಾಲ,ಕೊಂಬುಗಳಿಲ್ಲದ ಹಸುವಿನಂತೆ (ಕೊಂಬು ಹಸುವಿಗೆ ಶೋಭೆ).'

ಬಾಲ್ಯದಿಂದಲೂ ಶ್ರೀರಾಮಕೃಷ್ಣರು ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಲಿಲ್ಲ ಅಥವ ತ್ಯಾಗರಾಜರಂತೆ ಕೃತಿಗಳನ್ನು, ಕೀರ್ತನೆಗಳನ್ನು ರಚಿಸಲಿಲ್ಲ. ಅಧ್ಯಾತ್ಮ ಎಲ್ಲಾ ವಿದ್ಯೆಯ ಮೂಲ. ಇದರ ಆಳಕ್ಕೆ ಇಳಿದವರು ಇಚ್ಛೆ ಇದ್ದರೆ, ಬೇರೆ ವಿದ್ಯೆಗಳನ್ನೂ ಕಲಿಯಬಹುದು ಅಥವಾ ಬೆಳೆಸಿಕೊಳ್ಳಬಹುದು. ಶ್ರೀರಾಮಕೃಷ್ಣರು ಶಾಸ್ತ್ರೀಯ ಸಂಗೀತವನ್ನು ಕಲಿಯದಿದ್ದರೂ, ಅದರ ಸಂಪೂರ್ಣ ಜ್ಞಾನ ಅವರಿಗಿತ್ತು. ಶ್ರೀರಾಮಕೃಷ್ಣರು ಬೃಂದಾವನಕ್ಕೆ ಹೋದಾಗ ವೀಣಾವಾದನವನ್ನು ಕೇಳಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದರು. ಆದರೆ ಅಲ್ಲಿ ವೀಣೆ ನುಡಿಸುವವರು ಯಾರೂ ಸಿಗಲಿಲ್ಲ. ನಂತರ ಕಾಶಿಗೆ ಬಂದಾಗ ಮತ್ತೆ ಅವರಿಗೆ ಅದೇ ಇಚ್ಛೆ. ಆಗ ಶ್ರೀರಾಮಕೃಷ್ಣರನ್ನು ಮಹೇಶಚಂದ್ರ ಸರ್ಕಾರನ ಮನೆಗೆ ಕರೆದುಕೊಂಡು ಹೋಗಲಾಯಿತು. ಅಲ್ಲಿ ವೀಣೆಯ ನಾದವನ್ನು ಕೇಳಿದೊಡನೆಯೇ ಅವರು ಸಮಾಧಿಸ್ಥರಾದರು. ಸ್ವಲ್ಪ ಬಾಹ್ಯಜ್ಞಾನ ಮರಳಿದ ಮೇಲೆ ತಾಯಿಗೆ ಪ್ರಾರ್ಥನೆ ಮಾಡುತ್ತಾರೆ ''ಅಮ್ಮ, ನನ್ನನ್ನು ಸಮಾಧಿಸ್ಥನನ್ನಾಗಿ ಮಾಡಬೇಡ, ಸಂಗೀತವನ್ನು ಕೇಳ

ಬೇಕು'' ಎಂದು. ನಂತರ ಅವರು ಸುಮಾರು ಮೂರು ಗಂಟೆಗಳ ಕಾಲ ವೀಣಾನಾದನವನ್ನು ಆಸ್ವಾದಿಸುತ್ತಾರೆ.

ಶ್ರೀರಾಮಕೃಷ್ಣರು ಅದ್ಭುತವಾಗಿ, ಮಧುರವಾಗಿ ಭಾವ ತುಂಬಿ ಹಾಡುತ್ತಿದ್ದರು. ಕಾಳಿಮಂದಿರದಲ್ಲಿ ಅಥವ ಶಿವಮಂದಿರ ದಲ್ಲಿ ಕಮಲಾಕಾಂತನ, ರಾಮಪ್ರಸಾದನ ಹಾಡುಗಳನ್ನು ಹಾಡು ತ್ತಿದ್ದರು. ಶ್ರೀಮಾತೆ ಶಾರದಾದೇವಿಯವರೂ ಕೂಡ ಇದನ್ನು ಅನುಮೋದಿಸಿದ್ದಾರೆ. ಒಮ್ಮೆ ಶ್ರೀರಾಮಕೃಷ್ಣರ ಹಾಡುಗಳನ್ನು ಕೇಳಿದರೆ ಮತ್ತೆ ಇನ್ನಾರ ಹಾಡುಗಳನ್ನೂ ಕೇಳಲು ಸಾಧ್ಯವಿಲ್ಲ ವೆಂದು ಅವರ ಶಿಷ್ಯಂದಿರೇ ಹೇಳಿದ್ದಾರೆ. ಭಾವದಿಂದ, ಪ್ರೇಮೋ ನ್ಮತ್ತರಾಗಿ, ವ್ಯಾಕುಲತೆಯಿಂದ ಶ್ರೀರಾಮಕೃಷ್ಣರು ಹಾಡುತ್ತಿದ್ದರು ಎಂದರೆ ಕಲ್ಲೂ ಕೂಡ ಕರಗಿ ಹೋಗುವಂತೆ ಎಲ್ಲರಿಗೂ ಅನು ಭವವಾಗುತ್ತಿತ್ತು!

ಶ್ರೀರಾಮಕೃಷ್ಣರಿಗೆ ಸುಮಾರು ೧೮೧ ಹಾಡುಗಳು ಬರು ತ್ತಿದ್ದವು. ಭಕ್ತರು ಅವರ ಹಾಡುಗಳನ್ನು ಕೇಳಲು ಕಾತರರಾಗು ತ್ತಿದ್ದರು. ಸ್ವಯಂ ರಾಣಿ ರಾಸಮಣಿ ಕಾಳಿ ಮಂದಿರಕ್ಕೆ ಬಂದಾಗ ಲೆಲ್ಲ, ಶ್ರೀರಾಮಕೃಷ್ಣರನ್ನು ದೇವಿಯ ಹಾಡುಗಳನ್ನು ಹಾಡಲು ಕೇಳಿಕೊಳ್ಳುತ್ತಿದ್ದಳು.

ಶ್ರೀರಾಮಕೃಷ್ಣರ ಹಾಡಿನ ಸಂಬಂಧವಾಗಿ ರಾಮಲಾಲ ಹೀಗೆ ಬರೆಯುತ್ತಾನೆ: ''ಯಾರಾದರೂ ಹಾಡುವಾಗ ತಾಳ ತಪ್ಪಿಸಿದರೆ 'ಓಹ್! ಓಹ್!' ಎಂದು ಕೂಗುತ್ತಿದ್ದರು. ಸಮಾಧಿ ಭಗ್ನವಾಗು ತ್ತಿತ್ತು. ಆದರೆ ಭಕ್ತಿಯಿಂದ ಹಾಗೂ ಏಕಾಗ್ರತೆಯಿಂದ ಹಾಡಿದರೆ ಹಾಗಾಗುತ್ತಿರಲಿಲ್ಲ. ಅವರು ರಾಗ-ರಾಗಿಣಿಗಳಿಗೆ, ಸಂಗೀತದ ಶಾಸ್ತ್ರೀಯತೆಗೆ ಅಷ್ಟಾಗಿ ಗಮನ ಕೊಡುತ್ತಿರಲಿಲ್ಲ. ಭಾವದಲ್ಲಿ ಹಾಡುತ್ತಿದ್ದರು. ಅವರ ಕಂಠ ಮೃದು ಮತ್ತು ಮಧುರ, ಹಾಡು ವಾಗ ಹಲವು ಬಾರಿ ಅವರು ಸಮಾಧಿಸ್ಥರಾಗುತ್ತಿದ್ದರು. ನನ್ನನ್ನು ಮತ್ತು ಸ್ವಾಮೀಜಿಯನ್ನು(ಸ್ವಾಮಿ ವಿವೇಕಾನಂದರು) ಹಾಡಲು ಹೇಳುತ್ತಿದ್ದರು. ಹಾಡುಗಳನ್ನು ಕೇಳುತ್ತಿದ್ದಂತೆ ಮತ್ತೆ ಸಮಾಧಿಸ್ಥ ರಾಗುತ್ತಿದ್ದರು. ''

ಶ್ರೀರಾಮಕೃಷ್ಣರು ಸಂಕೀರ್ತನೆಗೆ, ಭಗವನ್ನಾಮ ಸಂಕೀರ್ತ ನಗೆ ಹೆಚ್ಚು ಮಹತ್ವವನ್ನು ಕೊಡುತ್ತಿದ್ದರು. ಸಂಕೀರ್ತನೆ, ಭಜನೆ ಹೇಗೆ ಹಾಡಬೇಕು ಎಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಎಲ್ಲೆಲ್ಲಿ ಅದ್ಭುತವಾದ ಸಂಕೀರ್ತನೆಯ ವ್ಯವಸ್ಥೆ ಮಾಡಲಾಗಿತ್ತೋ ಅಲ್ಲೆಲ್ಲ ಶ್ರೀರಾಮಕೃಷ್ಣರು ಭಾವಸಮಾಧಿಗೆ ಹಲವು ಬಾರಿ ಹೋಗುವುದನ್ನು ಕಾಣುತ್ತೇವೆ. ಶ್ರೀರಾಮಕೃಷ್ಣರನ್ನು ಬಿಟ್ಟು ಮಿಕ್ಕ ಸಂತರಲ್ಲಿ ಈ ಸಮಾಧಿಯ ವಿಚಾರವನ್ನು ಹೆಚ್ಚು ಕಾಣುವುದಿಲ್ಲ. 'ವಚನವೇದ'ದಲ್ಲಿ ಕಂಡುಬರುವಂತೆ ಸಂಕೀರ್ತನೆಯ ಸಂದರ್ಭ ದಲ್ಲಿ ಶ್ರೀರಾಮಕೃಷ್ಣರು ಹಲವು ಬಾರಿ ಭಾವಸಮಾಧಿಗೆ ಹೋಗು ತ್ತಿದ್ದುದು ಸಾಮಾನ್ಯ ವಿಷಯವಾಗಿತ್ತು. ಕೇವಲ ಶುದ್ಧ ಮನಸ್ಸಿಗೆ ಮಾತ್ರ ಸಾಧ್ಯವಿದು.

ಸಂಕೀರ್ತನೆಯ ಸಂಬಂಧವಾಗಿ ಸ್ವಾಮಿ ಶಿವಾನಂದರು ಹೇಳುತ್ತಾರೆ. ''ಕೆಲವು ದಿನವಂತೂ ಅವರು ತಾಳ, ಮದ್ದಲೆ ಯೊಡನೆ ಸಂಕೀರ್ತನವನ್ನು ಶುರುಮಾಡುತ್ತಿದ್ದರು; ಅವರು ಹಾಡುತ್ತಿದ್ದುದೆಲ್ಲಾ ಹೆಚ್ಚಾಗಿ ದೇವರ ನಾಮಗಳನ್ನೆ: ಅಲ್ಲಲ್ಲಿ ಪದ ಗಳನ್ನು ಪಂಕ್ತಿಗಳನ್ನು ತಾವೇ ರಚಿಸಿ ಸೇರಿಸಿಕೊಳ್ಳುತ್ತಿದ್ದುದೂ ಇತ್ತು. ಒಂದೊಂದು ಸಾರಿ ಭಾವಾನಂದದಲ್ಲಿ ಮತ್ತರಾಗಿ ನರ್ತಿಸು ತ್ತಿದ್ದರು. ಆಃ! ಅವರ ಆ ನಾಟ್ಯದಲ್ಲಿ ಎಂತಹ ದಿವ್ಯಲಾವಣ್ಯ ಶೋಭಿಸುತ್ತಿತ್ತು! ಅವರ ನಿರುಪಮ ದಿವ್ಯೋನ್ಮಾದವನ್ನು ಹೇಗೆ ತಾನೇ ವರ್ಣಿಸಲು ಸಾಧ್ಯ! ಅವರ ಕಂಠದ ದಿವ್ಯ ಮಾಧು ರ್ಯವೋ ಅನನ್ಯ ಮಾನುಷವಾಗಿರುತ್ತಿತ್ತು. ಸಂಕೀರ್ತನೆ ಬೆಳ ಗಾಗಿ ಹೊತ್ತೇರುವವರೆಗೂ ಸಾಗುತ್ತಿತ್ತು. ಗುರುಮಹಾರಾಜರ ಭಾವೋನ್ಮಾದದ ಸಾಂಕ್ರಾಮಿಕ ಪ್ರಭಾವದಿಂದ ಅಲ್ಲಿ ನೆರೆದಿದ್ದವ ರೆಲ್ಲರಿಗೂ ಭಾವ ಸ್ಥಿತಿಯುಂಟಾಗುತ್ತಿತ್ತು. ಗುರುದೇವನೊಡನೆ ಅದೆಂತಹ ಆನಂದದಲ್ಲಿ ದಿನಗಳನ್ನು ಕಳೆಯುತ್ತಿದ್ದೆವು ನಾವಂದು!''

*(ಗುರುವಿನೊಡನೆ ದೇವರಡಿಗೆ, ಪುಟ ೩೨-೩೩)*

ಇದೇ ರೀತಿ ಪಾನಿಹಾಟಿಯ ಮಹೋತ್ಸವವನ್ನು ನೆನೆದರೆ ಹಾಗೂ 'ವಚನವೇದ'ವನ್ನು ಓದಿದರೆ ಮೈ ರೋಮಾಂಚನವಾಗು ತ್ತದೆ. ಮಾಸ್ಟರ್ 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ಹೀಗೆ ಬರೆಯುತ್ತಾನೆ: ''ಪರಮಹಂಸರಿಗೆ ಭಾವಾವಿಷ್ಟತೆಯ ವಿವಿಧ ಅವಸ್ಥೆಗಳು ಒಮದಾದ ಮೇಲೊಂದು ಬರುತ್ತಿರುತ್ತವೆ. ಗಾಢ ಸಮಾಧಿಯಲ್ಲಿ ಮುಖದಿಂದ ಪ್ರೇಮಾನಂದವನ್ನು ಹೊರ ಸೂಸುತ್ತ ಪ್ರತಿಮೆಯೋಪಾದಿಯಲ್ಲಿ ಸ್ಥಿರವಾಗಿ ನಿಂತುಕೊಂಡಿರು ತ್ತಾರೆ. ಅರ್ಧ ಬಾಹ್ಯದೆಶೆಯಲ್ಲಿ ಕೆಲವು ವೇಳೆ ಮೆತ್ತಗೆ ಇನ್ನು ಕೆಲವು ವೇಳೆ ಸಿಂಹಪರಾಕ್ರಮದಿಮದ ನರ್ತಿಸುತ್ತಿರುತ್ತಾರೆ. ಬಾಹ್ಯ ದೆಶೆಯಲ್ಲಿ ಎಲ್ಲರನ್ನೂ ಸೇರಿಸಿಕೊಂಡು ಒಟ್ಟಿಗೆ ಹಾಡುತ್ತಿದ್ದಾರೆ.

ಹರಿನಾಮವನು ನುತಿಸಿ, ಆನಂದಬಾಷ್ಪವನು
ಕರೆವಣ್ಣತಮ್ಮಂದಿರು, ಇವರು ನೋಡು! ...

... ಅವರ ಸುತ್ತ ನೆರೆದಿದ್ದ ನೂರಾರು ಜನ ಭಗವನ್ನಾಮವನ್ನು ಕೂಗಿ ಹೇಳುತಿದ್ದಾರೆ. ದೇವಾಲಯದ ಹೊರಗಡೆ ಇದ್ದ ಸಹ ಸ್ರಾರು ಜನಕ್ಕೂ ಆ ಸೋಂಕು ತಗಲಿ ಅವರು ತಮ್ಮ ಕಂಠ ಕಿತ್ತು ಹೋಗುವ ಹಾಗೆ ಭಗವನ್ನಾಮವನ್ನು ಕೂಗಿ ಹೇಳುತ್ತಿದ್ದಾರೆ. ಇಲ್ಲಿಂದ ಹೊರಟ ಧ್ವನಿ ಗಂಗೆಯಲ್ಲಿ ದೋಣಿಯ ಮೇಲೆ ಕುಳಿತ್ತಿದ್ದವರಿಗೆಲ್ಲರಿಗೂ ಕೇಳಿ ಬಂದು ಅವರು ಭಗವನ್ನಾಮವನ್ನು ತಮ್ಮ ಉಚ್ಚ ಕಂಠದಿಂದ ಹೇಳುತ್ತಿದ್ದಾರೆ. ''*(ಶ್ರೀರಾಮಕೃಷ್ಣ ವಚನವೇದ, ಭಾಗ ೧, ಪು. ೨೨೪)*

ಸಂಗೀತವೆಂದರೆ (ಸಂಕೀರ್ತನೆಯೂ ಕೂಡ) ಕೇವಲ ಪಾಂಡಿತ್ಯವಲ್ಲ. ಅದು ಭಗವಂತನನ್ನು ಪಡೆಯುವ ಪಥ ಅಥವಾ ಹಾದಿ. ಇದನ್ನು ಶ್ರೀರಾಮಕೃಷ್ಣರು ಮಿಕ್ಕ ಅವತಾರಕ್ಕಿಂತ ಇಲ್ಲಿ ವಿಶೇಷವಾಗಿ ತೋರಿಸಿಕೊಟ್ಟಿದ್ದಾರೆ. ಈಶ್ವರಚಂದ್ರ ವಿದ್ಯಾಸಾಗರ

ರೊಡನೆ ಮಾತನಾಡುವಾಗ ಭಗವಂತನನ್ನು ಪಾಂಡಿತ್ಯ ವಿಚಾರಗಳಿಂದ ಪಡೆಯಲಾಗುವುದಿಲ್ಲ ಎಂದು ಹೇಳಿ, 'ಕೇ ಜಾನೆರೆ ಕಾಳಿ ಕೇಮೊನ್' (ಕನ್ನಡದಲ್ಲಿ 'ತಾಯಿ ದುರ್ಗೆಯ ನಿಜವನರಿಯಲು') ಹಾಡನ್ನು ಪ್ರೇಮೋನ್ಮತ್ತರಾಗಿ ಹಾಡುತ್ತಾರೆ. ತಮ್ಮ ಗೃಹೀ ಭಕ್ತರಿಗೂ ಹಾಡು-ಪಖವಾಜ್ ಕಲಿಯಲು ಪ್ರೋತ್ಸಾಹಿಸುತ್ತಿದ್ದರು. ಮತ್ತೆ 'ಏಳಮ್ಮ ಕುಂಡಲಿನೀ' ಈ ಹಾಡು ಆಗಾಗ ಹಾಡುತ್ತಿರುವಂತೆ ಹೇಳುತ್ತಿದ್ದರು. ಕಲ್ಕತ್ತಾ ನಗರದಕ್ಕೆ ಗೃಹೀ ಭಕ್ತರ ಮನೆಗೆ ಬಂದಾಗಲೆಲ್ಲ ವಿಶೇಷವಾದ ಸಂಕೀರ್ತನೆಯನ್ನು ಏರ್ಪಡಿಸಲು ಹೇಳುತ್ತಿದ್ದರು. ಯಾರು ಅದ್ಭುತವಾಗಿ ಹಾಡುತ್ತಿದ್ದರೋ ಅವರನ್ನು ಕಂಡರೆ ಶ್ರೀರಾಮಕೃಷ್ಣರಿಗೆ ಆನಂದ. ನರೇಂದ್ರನು ಶ್ರೀರಾಮಕೃಷ್ಣರನ್ನು ಪ್ರಥಮವಾಗಿ ಭೇಟಿಯಾಗಿದ್ದೇ ಹಾಡಿನ ಮೂಲಕ. ನರೇಂದ್ರನ ಹಾಡು ಎಂದರೆ ಶ್ರೀರಾಮಕೃಷ್ಣರಿಗೆ ಅಮೃತಪಾನ. ದಕ್ಷಿಣೇಶ್ವರಕ್ಕೆ ಬಂದಾಗಲೆಲ್ಲ, ನರೇಂದ್ರನ ಹಾಡನ್ನು ಕೇಳಲು ಕಾತರರಾಗುತಿದ್ದರು. ಕೇಳುತ್ತ, ಕೇಳುತ್ತ ಸಮಾಧಿಸ್ಥರಾಗುತ್ತಿದ್ದರು. ಆದ್ದರಿಂದ ಶ್ರೀರಾಮಕೃಷ್ಣರು ಹೇಳುತ್ತಿದ್ದರು, ''ಯಾರಾದರೂ ಸಂಗೀತ ಕಲೆಗಳಲ್ಲಿ ಪರಿಣಿತಿಯನ್ನು ಹೊಂದಿದರೆ ಅಧ್ಯಾತ್ಮದಲ್ಲಿಯೂ ಬೇಗನೆ ಮುಂದುವರಿಯಬಹುದು'' ಎಂದು.

ನೀಲಕಂಠನೆಂಬ ಭಕ್ತನು ದಕ್ಷಿಣೇಶ್ವರಕ್ಕೆ ಬಂದಾಗ ಕೆಲವು ಹಾಡುಗಳನ್ನು ಹಾಡಿದನು. ಇದನ್ನು ಕೇಳಿ ಶ್ರೀರಾಮಕೃಷ್ಣರು ಸಮಾಧಿಸ್ಥರಾದರು. ಸಂಕೀರ್ತನೆ ಮುಗಿದ ನಂತರ ಅವನ ಹಾಡುಗಳು ಇವರಿಗೆ ಆನಂದವನ್ನು ತಂದಿದೆ. ಬಹಳ ಸಂತುಷ್ಟರಾಗಿದ್ದಾರೆ. ಮಾತಿನ ಮಧ್ಯೆ ನೀಲಕಂಠ ಕೇಳಿಕೊಳ್ಳುತಿದ್ದಾನೆ:

ನೀಲಕಂಠ: ''ನಾನು ಏನನ್ನು ತಾನೆ ಹೇಳಲಿ? ನಮ್ಮ ಮೇಲೆ ದಯವಿಟ್ಟು ಕೃಪಾಕಟಾಕ್ಷವನ್ನು ಬೀರಬೇಕು.''

ಶ್ರೀರಾಮಕೃಷ್ಣರು ನಗುತ್ತ: ''ನೀನು ಎಷ್ಟೊಂದು ಜನರನ್ನು ಪಾರುಮಾಡಿಸುತ್ತಿದ್ದೀಯೆ, ಏನು ಕತೆ! ನಿನ್ನ ಹಾಡನ್ನು ಕೇಳಿ ಎಷ್ಟೊಂದು ಜನಕ್ಕೆ ಉದ್ದೀಪನೆ ಆಗುತ್ತಿದೆ!''

ನೀಲಕಂಠ: ''ಪಾರುಮಾಡಿಸುತ್ತಿದ್ದೇನೆ ಎಂದು ಹೇಳುತ್ತಿದ್ದೀರಿ: ಆದರೆ ನಾನೇ ಮುಳುಗಿ ಹೋಗದ ಹಾಗೆ ಆಶೀರ್ವಾದ ಮಾಡಿ.''

ಶ್ರೀರಾಮಕೃಷ್ಣರು ನಗುತ್ತ: ''ನೀನು ಮುಳುಗಿ ಹೋಗುವುದಾದರೆ ಅದು ಅಮೃತ ಸಾಗರದಲ್ಲಿ ಮಾತ್ರ.'' *(ಶ್ರೀರಾಮಕೃಷ್ಣ ವಚನವೇದ, ಭಾಗ ೨. ಪು.೬೬)*

ಏನಾಶ್ಚರ್ಯ! ನೀಲಕಂಠನೇನೂ ಭಗವಂತನ್ನು ಸಾಕ್ಷಾತ್ಕರಿಸಿಕೊಂಡವನಲ್ಲ. ಆದರೂ ಶ್ರೀರಾಮಕೃಷ್ಣರು ಹೇಳುತ್ತಿದ್ದಾರೆ ನೀನು 'ಪಾರು ಮಾಡಿಸುತ್ತಿದ್ದೀಯೆ', 'ಉದ್ದೀಪನೆ ಆಗುತ್ತಿದೆ' ಎಂದು. ಸಂಕೀರ್ತನೆಯ ವಿಶೇಷತೆಯೇ ಇದು.

ಆದ್ದರಿಂದಲೇ ನಮ್ಮ ಎಲ್ಲ ಶ್ರೀರಾಮಕೃಷ್ಣ ಪರಂಪರೆಯಲ್ಲಿ ಸಾಯಂ ಸಂಧ್ಯಾರತಿಯ ಸಮಯಕ್ಕೆ, ಶ್ರೀರಾಮಕೃಷ್ಣರಿಗೆ ಸಂಗೀತದ ಸೇವೆ, ಸ್ವಯಂ ಸ್ವಾಮಿ ವಿವೇಕಾನಂದರಿಂದ ಧ್ರುಪದ್ ಶೈಲಿಯಲ್ಲಿ ರಚಿತವಾದ 'ಖಂಡನ ಭವ ಬಂಧನ' ಎಂಬ ಬಂಗಾಳಿ ಹಾಡಿನ ಮೂಲಕ ನಡೆಯುವುದು. ಮನಸ್ಸನ್ನು ಸಹಜವಾಗಿ ಏಕಾಗ್ರಗೊಳಿಸುವ ಶಕ್ತಿ ಇರುವುದು ಸಂಗೀತಕ್ಕೆ. ಇದನ್ನು ಅರಿತೇ ದಿವ್ಯತ್ರಯರು ತಮ್ಮ ಜೀವನದಲ್ಲಿ ಸಂಗೀತದ ಮಹತ್ವವನ್ನು ತೋರಿಸಿಕೊಟ್ಟಿದ್ದಾರೆ.

ಇಂತಹ ಸಂಗೀತವು - ಸಂಕೀರ್ತನೆಯು ನಮ್ಮ ಆಧ್ಯಾತ್ಮಿಕ ಸಾಧನೆಯಾಗಲಿ ಎಂದು ಪ್ರಾರ್ಥಿಸೋಣ. ❋

*ಗ್ರಂಥ ಋಣ:*

ಶ್ರೀರಾಮಕೃಷ್ಣ ಲೀಲಾಪ್ರಸಂಗ
ಶ್ರೀರಾಮಕೃಷ್ಣ ವಚನವೇದ
ಗುರುವಿನೊಡನೆ ದೇವರಡಿಗೆ
How to Live with God
ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ
The Spiritual Heritage of Tyagaraja



**''ಶ್ರೀರಾಮಕೃಷ್ಣರು ಎಂಥ ಅದ್ಭುತ ಗಾಯಕರಾಗಿದ್ದರು! ಅವರ ಕಂಠ ಅತ್ಯಂತ ಮಧುರವಾಗಿತ್ತು. ಹಾಡುವಾಗ ಅವರು ಹಾಡಿನೊಂದಿಗೆ ಒಂದಾಗಿ ಬಿಡುತ್ತಿದ್ದರು. ಅವರ ಹಾಡಿನ ಧ್ವನಿ ಈಗಲೂ ನನ್ನ ಕಿವಿಯಲ್ಲಿ ಅನುರಣಿಸುತ್ತಿದೆ. ಅದನ್ನು ಕೇಳುವಾಗ ನನಗೆ ಉಳಿದವರ ಧ್ವನಿಯೆಲ್ಲ ಸಪ್ಪೆಯೆನಿಸುತ್ತದೆ.''**

**— ಶ್ರೀಮಾತೆ ಶಾರದಾದೇವಿ**

***

**ಶ್ರೀಮಾತೆ ಚೆನ್ನಾಗಿ ಹಾಡಬಲ್ಲವರಾಗಿದ್ದರು. ದಕ್ಷಿಣೇಶ್ವರದಲ್ಲಿ ಒಂದು ರಾತ್ರಿ ಅವರು ಮತ್ತು ಲಕ್ಷ್ಮೀದೇವಿ ಮೃದುಸ್ವರದಲ್ಲಿ ಅತ್ಯಂತ ಭಾವಪೂರ್ಣವಾಗಿ ಹಾಡುತ್ತಿದ್ದರು. ಶ್ರೀರಾಮಕೃಷ್ಣರಿಗೆ ಅದನ್ನು ಕೇಳಿ ಮಹದಾನಂದವಾಯಿತು. ಮರುದಿನ ಶ್ರೀಮಾತೆಯವರಿಗೆ ಹೇಳಿದರು, 'ನಿನ್ನೆ ನೀವಿಬ್ಬರೂ ಬಹಳ ಚೆನ್ನಾಗಿ ಹಾಡುತ್ತಿದ್ದಿರಿ, ಭೇಷ್, ಭೇಷ್' ಎಂದು.**

*(ಶ್ರೀಮಾತೆ ಶಾರದಾದೇವಿ, ಪು. ೮೦)*




# ರಾಮಕೃಷ್ಣ ಆಶ್ರಮ ಹಾಗೂ ಭಕ್ತರ ಪರಂಪರೆಯಲ್ಲಿ ಕನ್ನಡದ ಭಜನೆಗಳು

**ಸ್ವಾಮಿ ರಘುರಾಮಾನಂದ**

ಭಜನೆ, ಸಂಕೀರ್ತನೆ, ಸಂಗೀತ ಪ್ರಕಾರಗಳು ರಾಮಕೃಷ್ಣ ಮಹಾಸಂಘದ ಆರಂಭಕಾಲದಿಂದಲೇ ಭಕ್ತಿಯ ಅಭಿವ್ಯಕ್ತಿಗಾಗಿ ವಿಪುಲವಾಗಿ ಬಳಕೆಯಾಗುತ್ತಿದೆ. ಈ ಪರಂಪರೆ ವಿವಿಧ ಭಾಷೆಗಳ, ವಿವಿಧ ಪ್ರಾಂತಗಳ ಸಂಗೀತ ಪರಂಪರೆಯೊಂದಿಗೆ ಮೇಳೈಸಿ, ಹೊಸ ಬಗೆಯ ಭಜನೆ ಪರಂಪರೆಗಳನ್ನು ಹುಟ್ಟುಹಾಕಿದೆ. ಕನ್ನಡದಲ್ಲಿ ಇದು ಗೀತರಚನೆ, ರಾಗಸಂಯೋಜನೆ, ಗಾಯನಕ್ರಮ ಮುಂತಾದ ಹೊಸ ಪ್ರಯೋಗಗಳೊಂದಿಗೆ ವ್ಯಕ್ತಗೊಂಡು, ಪ್ರತಿದಿನ ರಾಮಕೃಷ್ಣ ಮಠಗಳಲ್ಲಿ ಹಾಡುವ ಭಜನೆಗಳ ಮೂಲಕ ಅತ್ಯಂತ ಜನಪ್ರಿಯವಾಗಿವೆ. ಅವು ಭಕ್ತಮಂಡಲಿಗಳಲ್ಲೂ ಈ ಭಜನೆಗಳನ್ನು ಹಾಡಲಾಗುತ್ತಿದೆ. ಈ ಕುರಿತು ವಿವರಿಸಿರುವ ಲೇಖಕರು ಬೆಂಗಳೂರು ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಸ್ವತಃ ಉತ್ತಮ ಗಾಯಕರೂ, ತಬಲಾ ವಾದಕರೂ ಆಗಿದ್ದಾರೆ.

ಕಲಿಯುಗದಲ್ಲಿ ಭಗವಂತನ ಸಾಕ್ಷಾತ್ಕಾರಕ್ಕೆ ನಾಮಗುಣ ಸಂಕೀರ್ತನೆ ಸುಲಭವಾದ ಉಪಾಯವೆಂದು ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಉಪದೇಶಗಳಲ್ಲಿ ಸಾರಿ ಹೇಳಿದ್ದಾರೆ. ಭಾರತದ ಸಂಸ್ಕೃತಿಯ ಪರಂಪರೆ ಭಕ್ತಿಮಾರ್ಗಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಿದೆ. ಭಕ್ತಿಪಂಥದಲ್ಲಿ ಬಂದು ಹೋದ ಮಹಾನ್ ಸಂತ ವರೇಣ್ಯರು ಅನೇಕರು. ಈ ಸಂತವರೇಣ್ಯರು ತಮ್ಮ ಹಾಗೂ ಭಗವಂತನ ನಡುವಿನ ಸಂಬಂಧವನ್ನು ಸುಂದರ ಕಾವ್ಯಾಭಿವ್ಯಕ್ತಿಗಳ ಮೂಲಕ ವರ್ಣಿಸಿದ್ದಲ್ಲದೆ, ಜನಸಾಮಾನ್ಯರೂ ನಾಮಗುಣ ಸಂಕೀರ್ತನೆಯಿಂದ ಭಗವಂತನಲ್ಲಿ ನಿಷ್ಕಲ್ಮಶವಾದ ಭಕ್ತಿಯನ್ನು ಪಡೆದುಕೊಳ್ಳುವಂತೆ ಮಾರ್ಗವನ್ನು ಹಾಕಿಕೊಟ್ಟಿದ್ದಾರೆ.

ರಾಮಕೃಷ್ಣ ಮಠ ಅಥವಾ ರಾಮಕೃಷ್ಣಾಶ್ರಮದ ಪರಂಪರೆಯಲ್ಲಿ ಸ್ವತಃ ಶ್ರೀರಾಮಕೃಷ್ಣರೇ ಪ್ರೇರಕಶಕ್ತಿಯಾಗಿದ್ದಾರೆ. ಅವರಿಗೆ ನಾಮಗುಣ ಸಂಕೀರ್ತನೆಯಲ್ಲಿ ಎಷ್ಟು ಅಭಿರುಚಿಯಿತ್ತೆಂದು ನಾವು ಅವರ ಜೀವನವನ್ನು ಅಧ್ಯಯನ ಮಾಡುವುದರ ಮೂಲಕ ತಿಳಿದುಕೊಳ್ಳುತ್ತೇವೆ. ಭಗವಂತನ ನಾಮಸಂಕೀರ್ತನೆ ಕೇಳುತ್ತ ಕೇಳುತ್ತ ಶ್ರೀರಾಮಕೃಷ್ಣರು ಭಾವೋನ್ಮತ್ತರಾಗುತ್ತಿದ್ದರು, ಜೊತೆಗೆ ಆ ಭಗವದಾನಂದದಲ್ಲಿ ನರ್ತಿಸುತ್ತಿದ್ದರು. ಅದನ್ನು ನೋಡಲೆಂದೇ ಕಲ್ಕತ್ತೆಯ ಜನ ಸೇರುತ್ತಿದ್ದರು. ಇನ್ನು ಅವರ ಶ್ರೇಷ್ಠ ಶಿಷ್ಯರಾದ ಸ್ವಾಮಿ ವಿವೇಕಾನಂದರ ಭೇಟಿಯಾದದ್ದು ಗಾಯನದ ಮೂಲಕವೇ. ಒಂದು ಸಂಜೆ ಭಕ್ತರೊಬ್ಬರ ಮನೆಯಲ್ಲಿ ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿ ಹಾಡಲು ಯಾರೂ ಬಂದಿಲ್ಲವೆಂದು ನರೇಂದ್ರನನ್ನು ರಾಮಚಂದ್ರ ದತ್ತ ಕರೆತಂದ. ಅಂದು ನರೇಂದ್ರನ ಹಾಡನ್ನು ಕೇಳಿ ಶ್ರೀರಾಮಕೃಷ್ಣರು ಭಾವಾವಿಷ್ಟರಾದರು. ಸ್ವಾಮಿ ವಿವೇಕಾನಂದರು ಶಾಸ್ತ್ರೀಯ ಸಂಗೀತವನ್ನು ಕಲಿತಿದ್ದರು. ಹಾಡುವುದರಲ್ಲಿ, ತಬಲ, ಪಕವಾಜ್ ಹಾಗು ಸಿತಾರ್ ವಾದನದಲ್ಲಿ ಪರಿಣತಿಯನ್ನು ಪಡೆದಿದ್ದರು. ಶ್ರೀರಾಮಕೃಷ್ಣರು ರಾಮಪ್ರಸಾದ, ಕಮಲಾಕಾಂತ ಹಾಗು ಅನೇಕ ಬಂಗಾಳದ ಸಂತರ ಕೀರ್ತನೆಗಳನ್ನು ಹಾಡುತ್ತಿದ್ದರು. ಸ್ವಾಮಿ ವಿವೇಕಾನಂದರು ಬ್ರಹ್ಮಸಮಾಜದಲ್ಲಿ ಕಲಿತ ಅನೇಕ ನಿರಾಕಾರಬ್ರಹ್ಮದ ಭಜನೆಗಳನ್ನು ಹಾಡುತ್ತಿದ್ದರು. ಬಾರಾನಗರ ಮಠದಲ್ಲಿ ನೆಲೆಸಿದ್ದ ಶ್ರೀರಾಮಕೃಷ್ಣರ ಶಿಷ್ಯವೃಂದ ಪ್ರತಿನಿತ್ಯ ಪ್ರಾತಃಕಾಲ ಹಾಗೂ ಸಂಧ್ಯಾಕಾಲದಲ್ಲಿ ನಾಮಸಂಕೀರ್ತನೆಯನ್ನು ಮಾಡುತ್ತಿತ್ತು. ಹೆಚ್ಚಾಗಿ ಶಿವನ ಕುರಿತಾದ ಭಜನೆಗಳನ್ನು ಅವರು ಹಾಡುತ್ತಿದ್ದರು.

ಅಮೇರಿಕೆಯಿಂದ ಹಿಂದಿರುಗಿ ಬಂದ ಮೇಲೆ ಸ್ವಾಮಿ ವಿವೇಕಾನಂದರು '**ರಾಮಕೃಷ್ಣ ಮಠ ಮತ್ತು ರಾಮಕೃಷ್ಣ ಮಿಷನ್**' ಎಂಬ ಸಂಸ್ಥೆಯನ್ನು ನಿರ್ಮಾಣ ಮಾಡಿದರು. ಮುಂದೆ ಅವರು ಶ್ರೀರಾಮಕೃಷ್ಣರನ್ನು ಕುರಿತಾಗಿ ಸ್ತೋತ್ರಗಳನ್ನು ರಚಿಸಿದರು. ಅದರಲ್ಲಿ ಎರಡು ಸ್ತೋತ್ರವನ್ನು ರಾಮಕೃಷ್ಣ ಮಠದ ಎಲ್ಲಾ ಶಾಖೆಗಳಲ್ಲೂ ಸಂಧ್ಯಾರತಿಯ ಸಮಯದಲ್ಲಿ ಹಾಡಲಾಗುತ್ತಿದೆ.

ಬಂಗಾಳಿ ಭಾಷೆಯಲ್ಲಿ ಶ್ರೀರಾಮಕೃಷ್ಣ, ಶ್ರೀಮಾತೆ ಶಾರದಾ ದೇವಿ ಹಾಗು ಸ್ವಾಮಿ ವಿವೇಕಾನಂದರ ಕುರಿತಾಗಿ ಅನೇಕ ಹಾಡು ಗಳಿವೆ. ಶ್ರೀರಾಮಕೃಷ್ಣರ ನೇರ ಶಿಷ್ಯರಾದ ಸ್ವಾಮಿ ಅಭೇದಾ ನಂದ, ಸ್ವಾಮಿ ಶಾರದಾನಂದ, ಸ್ವಾಮಿ ರಾಮಕೃಷ್ಣಾನಂದರು ಕೆಲವು ಕೃತಿಗಳನ್ನು ರಚಿಸಿದ್ದಾರೆ. ಅನಂತರ ಶ್ರೀರಾಮಕೃಷ್ಣರ ಭಕ್ತವೃಂದ, ಅವರ ಅನುಯಾಯಿಗಳು ಅನೇಕ ಹಾಡುಗಳನ್ನು ರಚಿಸಿದ್ದಾರೆ. ಇಂದಿಗೂ ಕೆಲವು ಶಾಖೆಗಳಲ್ಲಿ ಸಂಧ್ಯಾರತಿಯ ನಂತರ ಕೆಲವು ಹಾಡುಗಳನ್ನು ಹಾಡುವುದು ವಾಡಿಕೆ.

ಬೆಂಗಳೂರಿನ ರಾಮಕೃಷ್ಣಾಶ್ರಮದ ಭಜನೆಗಳು ಬಹಳ ಪ್ರಸಿದ್ಧವಾಗಿವೆ. ೬-೭ ದಶಕಗಳಿಂದ ಬೆಂಗಳೂರಿನ ದೇವಸ್ಥಾನ ದಲ್ಲಿ ನಡೆಯುವ ಭಜನೆಯನ್ನು ಕೇಳಲು ಪ್ರತಿದಿನ ನೂರಾರು ಭಕ್ತರು ಸೇರುತ್ತಾರೆ. ಅಷ್ಟೇ ಅಲ್ಲ, ಅಲ್ಲಿ ಹಾಡುವ ೨೦೦-೩೦೦ ಭಜನೆಗಳಿಗೆ ಭಕ್ತರೂ ಧ್ವನಿಗೂಡಿಸುವುದು ಬೆಂಗಳೂರು ಆಶ್ರಮ ದಲ್ಲಿ ನಡೆಯುವ ಭಜನೆಯ ವಿಶೇಷ. ನಾವು ಪರ ಊರಿಗೆ ಭೇಟಿ ಯಿತ್ತಾಗ ಅಲ್ಲಿನ ಜನ ಅಥವಾ ಸಾಧುವೃಂದ ಪ್ರಶಂಸಿಸುವುದು ಬೆಂಗಳೂರಿನ ಆಶ್ರಮದಲ್ಲಿ ನಡೆಯುವ ಭಜನಾ ಕಾರ್ಯಕ್ರಮ ವನ್ನು. ಇಂದಿಗೆ ಅದು ಬೆಂಗಳೂರಿಗೆ ಸೀಮಿತವಾಗದೆ ಕರ್ನಾ ಟಕದ ರಾಮಕೃಷ್ಣ ಆಶ್ರಮದ ಎಲ್ಲಾ ಶಾಖೆಗಳಲ್ಲೂ, ರಾಮ ಕೃಷ್ಣ-ವಿವೇಕಾನಂದ ಭಾವಪ್ರಚಾರದ ಎಲ್ಲಾ ಸಂಸ್ಥೆಗಳಲ್ಲೂ ಹಾಗೂ ಭಕ್ತ ಸಮುದಾಯಗಳಲ್ಲೂ ಈ ಭಜನೆಗಳನ್ನು ಕೇಳಬಹು ದಾಗಿದೆ. ಈ ಭಜನೆಯ ಸಂಸ್ಕೃತಿ ಹಾಗು ಪರಂಪರೆಯನ್ನು ಬೆಳೆಸುವುದರಲ್ಲಿ ಅನೇಕರ ಪಾತ್ರವಿದೆ. ಅಲ್ಲದೆ ಅದೊಂದು ಇತಿಹಾಸದಂತೆ ನಿರ್ಮಾಣವಾಗಿದೆ.

ಸ್ವಾಮಿ ಯತೀಶ್ವರಾನಂದರು ಆಗಿನ ಕಾಲದಲ್ಲಿ ಬೆಂಗಳೂರಿನ ರಾಮಕೃಷ್ಣಾಶ್ರಮದ ಅಧ್ಯಕ್ಷರಾಗಿದ್ದರು. ಅವರಿಗೆ ಭಜನೆಗಳಲ್ಲಿ ಬಹಳ ಆಸಕ್ತಿಯಿತ್ತು. ಅವರು ಪ್ರತಿದಿನ ನಡೆಯುವ ಭಜನೆಗಳಲ್ಲಿ ಹಾಗೂ ಏಕಾದಶಿಯಂದು ನಡೆಯುವ ರಾಮನಾಮಸಂಕೀರ್ತನೆ ಯಲ್ಲಿ ತಪ್ಪದೆ ಭಾಗವಹಿಸುತ್ತಿದ್ದರು. ಆ ದಿನಗಳಲ್ಲಿ ಪ್ರತಿದಿನದ ಭಜನಾ ಕಾರ್ಯಕ್ರಮಗಳನ್ನು ಪ್ರೊ. ಎನ್. ಕೃಷ್ಣಸ್ವಾಮಿ, ಸ್ವಾಮಿ ಶಾಸ್ತ್ರಾನಂದರು ಹಾಗೂ ಸ್ವಾಮಿ ಹರ್ಷಾನಂದರು ನಡೆಸುತ್ತಿದ್ದರು. ಒಮ್ಮೆ ಸ್ವಾಮಿ ಯತೀಶ್ವರಾನಂದರು ಇವರುಗಳಿಗೆ ಬಂಗಾಳಿ ಭಜನೆಗಳ ಬದಲಾಗಿ ಹೆಚ್ಚಾಗಿ ಕನ್ನಡ ಭಾಷೆಗಳಲ್ಲಿ ಹಾಡುವುದಕ್ಕೆ ಹೇಳಿದರು. ಇದರಿಂದ ಸ್ಥಳೀಯ ಜನರು ಹಾಡುಗಳನ್ನು ಅರ್ಥ ಮಾಡಿಕೊಳ್ಳಬಹುದು ಜೊತೆಯಲ್ಲಿ ಅವರೂ ಧ್ವನಿಗೂಡಿಸ ಬಹುದು. ಅವರ ವಿಶಾಲವಾದ ಈ ಮನೋಭಾವದಿಂದ ಇಂದು ಕನ್ನಡ ಭಾಷೆಯಲ್ಲಿ ಅನೇಕ ಹಾಡುಗಳು ರಚನೆಗೊಂಡಿದೆ. ಸಂನ್ಯಾಸಿ ವೃಂದದಲ್ಲಿ ಸ್ವಾಮಿ ಶಾಸ್ತ್ರಾನಂದರು, ಸ್ವಾಮಿ ತದ್ರೂಪಾ ನಂದರು, ಸ್ವಾಮಿ ಹರ್ಷಾನಂದರು, ಸ್ವಾಮಿ ಪುರುಷೋತ್ತಮಾ ನಂದರು ಹಾಗು ಮತ್ತಿತರರು ಕನ್ನಡದಲ್ಲಿ ರಾಮಕೃಷ್ಣ, ಶಾರದಾ ದೇವಿ ಹಾಗು ವಿವೇಕಾನಂದರನ್ನು ಕುರಿತಾಗಿ ಅನೇಕ ರಚನೆಗಳನ್ನು ಮಾಡಿದ್ದಾರೆ. ಸ್ವಾಮಿ ಶಾಸ್ತ್ರಾನಂದರು ರಚಿಸಿರುವ ಹಾಡುಗಳಲ್ಲಿ ಹೆಸರಿಸಬಹುದಾದ ಕೆಲವೆಂದರೆ 'ತವಕೃಪೆ ಬೆಳಗಲಿ', 'ಸಾರದಾ ರೂಪ ತಾಳಿ', 'ದೊರಕಿತು ಧರಣಿಗೆ'. ಸ್ವಾಮಿ ತದ್ರೂಪಾನಂದರ ಭಾವನಾಪೂರ್ಣವಾದ ಕೃತಿಗಳೆಂದರೆ 'ಮಣಿವೆ ನಿನ್ನ ಕಮಲ ದೆಡೆಗೆ', 'ಅಲೆದಲೆದು ಅತಿದಣಿದು', 'ಸಪ್ತಋಷಿ ಭುವನ ದಿಂದ'. ಸ್ವಾಮಿ ಹರ್ಷಾನಂದರ ಹೃದಯದಾಳದಿಂದ ಬಂದ ಕೀರ್ತನೆಗಳು 'ಎಷ್ಟು ದಿನ ಕಾದಿರಲಿ ನಿನ್ನ ಬಾಗಿಲಲಿ', 'ಸಿರಿ ವಾಣಿ ಗೌರಿ ಹೇ ಶಾರದಾಂಬೆ', 'ದರುಶನ ನೀಡೆನಗೆ ತಾಯೆ', ಹೀಗೆ ಹಲವು. ನಾಮಾವಳಿ ಭಜನೆಗಳಿಗೆ ಹೆಚ್ಚು ಒತ್ತನ್ನು ಕೊಟ್ಟ ವರು ಸ್ವಾಮಿ ಹರ್ಷಾನಂದರು. ಸುಮಾರು ೭೫-೮೦ ನಾಮಾ ವಳಿಗಳು ಸಿ.ಡಿ.ಗಳಲ್ಲಿ ಪ್ರಕಟವಾಗಿದೆ. ಇನ್ನು ಬೆಂಗಳೂರಿನ ಭಜನೆಗೆ ಶೋಭೆಯನ್ನು ಕೊಟ್ಟು, ಸುಶ್ರಾವ್ಯವಾಗಿ ಹಾಡಿ ಭಕ್ತರ ಹೃದಯವನ್ನು ಗೆದ್ದ ಸ್ವಾಮಿ ಪುರುಷೋತ್ತಮಾನಂದರು ದಿವ್ಯ ತ್ರಯರ ಸಂಬಂಧವಾಗಿ ಕನ್ನಡದಲ್ಲಿ ಅನೇಕ ಹಾಡುಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಪ್ರಸಿದ್ಧವಾದವುಗಳೆಂದರೆ 'ಸಿರಿ ರಾಮ ಕೃಷ್ಣ', 'ಅಮ್ಮಾ ಅಮ್ಮಾ ಎಂದು', 'ನನ್ನ ಜನನಿ', 'ಉತ್ತಿಷ್ಠತ ಜಾಗ್ರತ । ಮನುಜ' ಮೊದಲಾದವುಗಳು.

ಕನ್ನಡದಲ್ಲಿ ರಾಮಕೃಷ್ಣ, ಶಾರದಾದೇವಿ ಹಾಗೂ ವಿವೇಕಾ ನಂದರನ್ನು ಕುರಿತು ಹಲವು ಕೃತಿಗಳನ್ನು ಅನೇಕ ಭಕ್ತರು ರಚಿಸಿ ದ್ದಾರೆ. ಅದರಲ್ಲಿ ರಾಷ್ಟ್ರಕವಿ ಡಾ. ಕೆ.ವಿ.ಪುಟ್ಟಪ್ಪ (ಕುವೆಂಪು)ನವರ ಕೊಡುಗೆಯಂತೂ ಅಪಾರ. ಎಲ್ಲರಂತೆ ಇಂಗ್ಲೀಷ್ ಸಾಹಿತ್ಯಕ್ಕೆ ಒಲ ವನ್ನು ತೋರಿಸಿದ್ದ ಶ್ರೀ ಕುವೆಂಪುರವರಿಗೆ ಕನ್ನಡ ಸಾಹಿತ್ಯದಲ್ಲಿ ಕೆಲಸ ಮಾಡಲು ಪ್ರೋತ್ಸಾಹಿಸಿದವರು ಮೈಸೂರಿನ ರಾಮಕೃಷ್ಣಾ ಶ್ರಮದ ಅಂದಿನ ಅಧ್ಯಕ್ಷರಾದ ಹಾಗೂ ಕುವೆಂಪುರವರಿಗೆ ಮಾರ್ಗ ದರ್ಶಕರಂತಿದ್ದ ಸ್ವಾಮಿ ಸಿದ್ಧೇಶ್ವರಾನಂದಜಿಯವರು. ಸ್ವಾಮಿ ಶಿವಾನಂದ ಮಹಾರಾಜರ ಬಳಿ ಮಂತ್ರದೀಕ್ಷೆಯನ್ನು ಪಡೆದಿದ್ದ ಶ್ರೀ ಕುವೆಂಪುರವರು ದಿವ್ಯತ್ರಯರ ಜೀವನದಿಂದ ಪ್ರೇರಿತರಾಗಿ ಕನ್ನಡದಲ್ಲಿ ಅಭೂತಪೂರ್ವವಾದ ಸಾಹಿತ್ಯವನ್ನು ಹಾಗೂ ಅನೇಕ ಹಾಡುಗಳನ್ನು ರಚಿಸಿದ್ದಾರೆ. ಅವರ ಕನ್ನಡದ ಬರವಣಿಗೆಯನ್ನು ಕೊಂಡಾಡದೆ ಇರುವವರು ಇಲ್ಲವೇ ಇಲ್ಲ ಎಂದರೆ ತಪ್ಪಾಗ ಲಾರದು. ಅವರು ದಿವ್ಯತ್ರಯರ ಸಂಬಂಧವಾಗಿ ರಚಿಸಿರುವ ಕೃತಿಗಳು ಶಕ್ತಿಯುತವಾದವುಗಳು. 'ಬಾ ಶ್ರೀಗುರುದೇವನೆ ಬಾ', 'ಶ್ರೀಶಾರದಾದೇವಿ ಹೇ ಮಹಾಮಾತೆ', 'ಭರತಖಂಡದ ನೀಲ ಗಗನವ', 'ಸಂಜೆಯಾಗಲು ತವಕಿಪುದು ಮನ', ಹೀಗೆ ಹಲ ವಾರು. ಒಮ್ಮೆ ಶ್ರೀ ಕುವೆಂಪುರವರು ಬೇಲೂರು ಮಠಕ್ಕೆ ಭೇಟಿ ಯಿತ್ತಾಗ ಅವರು 'ಶ್ರೀರಾಮಕೃಷ್ಣ ವಚನವೇದ'ದ ಕರ್ತೃವಾದ ಶ್ರೀ ಮಹೇಂದ್ರನಾಥ ಗುಪ್ತರನ್ನು ಸಂಧಿಸುವ ಸುಯೋಗ ಒದಗಿ ಬಂತು. ಅವರ ಸಂಭಾಷಣೆಯ ಮಧ್ಯದಲ್ಲಿ ಕುವೆಂಪುರವರು 'ಭರತಖಂಡದ ನೀಲಗಗನವ' ಹಾಡನ್ನು ಓದಿದಾಗ ಮಾಸ್ಟರ್ ಮಹಾಶಯರು ಬಹಳ ಪ್ರಭಾವಿತರಾಗಿ, ಅದನ್ನು ಬಂಗಾಳಿ

ಭಾಷೆಗೆ ತರ್ಜುಮೆ ಮಾಡಿ ಕಳಿಸಲು ತಿಳಿಸಿದ್ದರು. ದುರದೃಷ್ಟ ವಶಾತ್ ಅದನ್ನು ಮಾಡಲಾಗಲಿಲ್ಲ ಎಂದು ಶ್ರೀ ಕುವೆಂಪುರವರೇ ಹೇಳಿಕೊಂಡಿದ್ದಾರೆ. ರಾಮಕೃಷ್ಣ ಭಾವಧಾರೆಯಲ್ಲಿ ಬಂದ ಭಕ್ತರು 'ಸಂಜೆಯಾಗಲು ತವಕಿಪುದು ಮನ ದಕ್ಷಿಣೇಶ್ವರ ಯಾತ್ರೆಗೆ' ಈ ಒಂದು ಹಾಡನ್ನು ಕಲಿಯಲೇಬೇಕೆಂಬುದು ನನ್ನ ಅಭಿಪ್ರಾಯ. ಇಲ್ಲಿ ಕವಿ ನಾಲ್ಕಾರು ಸಾಲುಗಳಲ್ಲಿ, ಶ್ರೀರಾಮಕೃಷ್ಣರು ವಾಸಿಸು ತ್ತಿದ್ದ ಕೊಠಡಿಗೆ ನಮ್ಮನ್ನು ದಕ್ಷಿಣೇಶ್ವರಕ್ಕೆ ಕೊಂಡೊಯ್ಯುತ್ತಾರೆ. 'The Song of the Sannyasin' ಎಂಬ ಗೀತೆಯನ್ನು ಸ್ವಾಮಿ ವಿವೇಕಾನಂದರು ಆಂಗ್ಲ ಭಾಷೆಯಲ್ಲಿ ರಚಿಸಿದ್ದಾರೆ. ಅದನ್ನು ಶ್ರೀ ಕುವೆಂಪುರವರು '**ಸಂನ್ಯಾಸಿ ಗೀತೆ**' ಎಂದು ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಇದರ ರಚನೆಯು ಶಕ್ತಿಶಾಲಿಯಾಗಿದ್ದು ಎಂಥವ ರನ್ನೂ ಬಡಿದೆಬ್ಬಿಸುವ ರೀತಿಯಲ್ಲಿದೆ. ಇಂದು ಈ 'ಸಂನ್ಯಾಸಿ ಗೀತೆ' ನಾಡಿನಾದ್ಯಂತ ಪ್ರಚಲಿತವಾಗಿದೆ. ಬೇಲೂರು ಮಠದಲ್ಲಿ ಬ್ರಹ್ಮಚಾರಿಗಳಿಗಾಗಿ ನಡೆಯುವ ಎರಡು ವರ್ಷದ ತರಬೇತಿ ಕೇಂದ್ರದಲ್ಲಿ ಕರ್ನಾಟಕದಿಂದ ಹೋದ ಬ್ರಹ್ಮಚಾರಿಗಳು ಒಮ್ಮೆ ಈ 'ಸಂನ್ಯಾಸಿ ಗೀತೆ' ಯನ್ನು ಕನ್ನಡದಲ್ಲಿ ಹಾಡಿದರು. ಹಲವಾರು ರಾಜ್ಯದಿಂದ ಬಂದಿದ್ದ ಬ್ರಹ್ಮಚಾರಿಗಳು, ಆಚಾರ್ಯರಾಗಿದ್ದ ಸ್ವಾಮೀಜಿಗಳು ಇದರಿಂದ ಬಹಳಷ್ಟು ಪ್ರಭಾವಿತರಾದರು. ಶಕ್ತಿ ಯುತವಾದ ಸಾಹಿತ್ಯ ಹಾಗೂ ಸ್ವಾಮಿ ಪುರುಷೋತ್ತಮಾನಂದರ ಬಡಿದೆಬ್ಬಿಸುವಂತಹ ರಾಗ ಸಂಯೋಜನೆ ಎಲ್ಲರ ಮನ ಗೆದ್ದು, ಇಂದಿಗೂ ತರಬೇತಿ ಶಿಕ್ಷಣ ಕೇಂದ್ರದಲ್ಲಿ ಈ 'ಸಂನ್ಯಾಸಿ ಗೀತೆ' ಹಾಡು ಪ್ರಚಲಿತವಾಗಿದೆ.

ಕನ್ನಡನಾಡಿನ ಮತ್ತೋರ್ವ ರಾಷ್ಟ್ರಕವಿಗಳಾದ, ನೂತನ ಶೈಲಿಯ ರಚನೆಗಳಿಗೆ ಹೆಸರುವಾಸಿಯಾದ ಡಾ. ಜಿ.ಎಸ್. ಶಿವ ರುದ್ರಪ್ಪನವರು. ಇವರೂ ಕೂಡ ದಿವ್ಯತ್ರಯರ ಜೀವನ-ಸಂದೇಶ ಗಳಿಂದ ಪ್ರೇರೇಪಿತರಾಗಿ ಅನೇಕ ಹಾಡುಗಳನ್ನು ರಚಿಸಿದ್ದಾರೆ. ಅದರಲ್ಲೂ 'ಶ್ರೀರಾಮಕೃಷ್ಣ ವಚನವೇದ'ದಲ್ಲಿ (ಎರಡು ಭಾಗ ಗಳು) ಬರುವ ಎಲ್ಲಾ ಹಾಡುಗಳನ್ನು ಬಂಗಾಳಿಯಿಂದ ಕನ್ನಡಕ್ಕೆ ತರ್ಜುಮೆಗೊಳಿಸಿದ್ದಾರೆ. ಈ ಹಾಡುಗಳ ಮೂಲವು ಬಂಗಾಳಿ ಭಾಷೆಯಾದರೂ ಶ್ರೀರಾಮಕೃಷ್ಣರು ಕನ್ನಡದಲ್ಲೇ ಹಾಡುತ್ತಿದ್ದ ರೇನೋ ಅನ್ನಿಸುವಂತಿದೆ. ಅವರೇ ಸ್ವಂತವಾಗಿ ರಚಿಸಿರುವ ಕೃತಿ ಗಳಲ್ಲಿ ಪ್ರಚಲಿತವಾದದ್ದು, 'ರಾಮಕೃಷ್ಣ ತಪೋಸೂರ್ಯ', 'ಓ ಬಂದ ಶ್ರೀಗುರು ವಿವೇಕಾನಂದ' ಮುಂತಾದವು ಪ್ರಸಿದ್ಧವಾದವು ಗಳು. 'ರಾಮಕೃಷ್ಣ ವಚನವೇದ'ದ ಪುಸ್ತಕದ ಮಧ್ಯೆ ಮಧ್ಯೆ ಬರುವ ಹಾಡುಗಳಲ್ಲಿ ಅದ್ಭುತವಾಗಿ ತರ್ಜುಮೆಗೊಂಡಿರುವಂತಹ ಹಾಡುಗಳೆಂದರೆ 'ತಾಯಿ ದುರ್ಗೆಯ ನಿಜವನರಿಯುವ ಧೀರ ರಾರೋ ಜಗದೊಳು', 'ಸಾಗುತಿಹುದು ಚಿತ್ತಭೃಂಗ', 'ನಿನ್ನ ಬಾಳಿನ ಹೊಲವು ಪಾಳು ಬಿದ್ದಿಹುದಲ್ಲೊ', 'ಎಲ್ಲಿ ಅರಸುವೆ ನೀನು', 'ಅರಿತೆ ನಾನು ಅರಿತೆ ನಾನು', ಹೀಗೆ ಹತ್ತರಿಂದ ನೂರು ಕೃತಿಗಳು ತರ್ಜುಮೆಗೊಂಡಿವೆ. ಶ್ರೀ ಕುವೆಂಪು ಹಾಗು ಶ್ರೀ ಜಿ. ಎಸ್. ಶಿವರುದ್ರಪ್ಪ ಇವರೀರ್ವರಿಗೂ ಕರ್ನಾಟಕ ರಾಜ್ಯದ ರಾಮಕೃಷ್ಣ ಭಕ್ತವೃಂದ ಚಿರಋಣಿಯಾಗಿರುತ್ತದೆ.

ಉತ್ತಮವಾದ, ಭಾವಪೂರ್ಣವಾದ ಸಾಹಿತ್ಯಕ್ಕೆ ಸರಿಯಾದ ಸ್ವರ ಸಂಯೋಜನೆಯಾಗದಿದ್ದರೆ ಆ ಕೃತಿಗಳಿಗೆ ಜೀವ ಬರುವುದಿಲ್ಲ ಅಥವಾ ನೂರಾರು ಜನರಿಗೆ ತಲುಪುವುದಿಲ್ಲ. ಶೃತಿ-ಲಯಬದ್ಧ ವಾದ, ಮಧುರವಾದ ಸಂಗೀತದಿಂದ ಅದೆಷ್ಟೋ ಜೀವಿಗಳಿಗೆ ನೆಮ್ಮದಿ, ಶಾಂತಿ ಹಾಗು ಆನಂದ ದೊರಕುತ್ತದೆ. ಸ್ವರ ಸಂಯೋಜನೆ ಮಾಡುವವರು ಸಂಗೀತಕ್ಷೇತ್ರದಲ್ಲಿ ಹೆಚ್ಚಿನ ಸಾಧನೆ ಮಾಡಿ ಸಾಹಿತ್ಯವನ್ನು ಮನದಾಳಕ್ಕೆ ತೆಗೆದುಕೊಂಡು ಭಾವಕ್ಕೆ ತಕ್ಕಂತೆ ರಾಗ ಸಂಯೋಜನೆ ಮಾಡಿದರೆ ಆಗ ಆ ಹಾಡು ಚಿರಕಾಲವಾಗಿ ಉಳಿ ಯುತ್ತದೆ. ಪ್ರೊ.ಎನ್.ಕೃಷ್ಣಸ್ವಾಮಿ (ಕಿಟ್ಟಿ ಮಾಸ್ಟರ್), ಸ್ವಾಮಿ ಹರ್ಷಾನಂದರು ಹಾಗು ಸ್ವಾಮಿ ಪುರುಷೋತ್ತಮಾನಂದರು ಹಾಡುಗಳಿಗೆ ಉತ್ತಮ ರಾಗ ಸಂಯೋಜನೆ ಮಾಡಿ ಅವು ಚಿರ ಕಾಲ ಉಳಿಯುವಂತೆ ಮಾಡಿದ್ದಾರೆ. ಸ್ವರ ಹಾಗೂ ಸಾಹಿತ್ಯಗಳು ಮೇಳೈಸುವಂತೆ ಮಾಡಿ ಜನಸಾಮಾನ್ಯರು, ಅಷ್ಟೇನೂ ಸಂಗೀತ ಜ್ಞಾನವಿಲ್ಲದವರೂ ಈ ಹಾಡುಗಳನ್ನು ಹಾಡುವಂತೆ ರಚಿಸಿದ್ದಾರೆ. ಈ ಕಾರಣದಿಂದ ಇವರೆಲ್ಲರ ಕೊಡುಗೆ ಅಪಾರ.

ರಾಮಕೃಷ್ಣಾಶ್ರಮದ ಪ್ರಾರ್ಥನಾ ಮಂದಿರದಲ್ಲಿ ರಾಮಕೃಷ್ಣ - ವಿವೇಕಾನಂದ ಕುರಿತ ಹಾಡುಗಳನ್ನಲ್ಲದೇ ದಾಸ ಸಾಹಿತ್ಯ, ವಚನ ಸಾಹಿತ್ಯ, ಹಾಗೂ ಜಗತ್ಪ್ರಸಿದ್ಧಿ ಪಡೆದಂತಹ ಹಾಡುಗಳನ್ನು ಹಾಡಲಾಗುತ್ತದೆ. ಅತ್ಯಂತ ಪ್ರಚಲಿತವಾದ ಸ್ತೋತ್ರಗಳನ್ನು ಸ್ವರ ಸಂಯೋಜನೆಯೊಂದಿಗೆ ಹಾಡಲಾಗುತ್ತದೆ. ಬೆಂಗಳೂರಿನ ರಾಮ ಕೃಷ್ಣ ಮಠದಿಂದ ಪ್ರಕಟಗೊಂಡಂತಹ 'ಕೀರ್ತನ ಸಂಗ್ರಹ' ಎಂಬ ಕಿರುಹೊತ್ತಿಗೆಯಲ್ಲಿ ಈ ಹಾಡುಗಳನ್ನು ಕಾಣಬಹುದು.

ಇನ್ನೂ ಅನೇಕ ಸಾಧು-ಸಂತರು, ಭಕ್ತರು ಕನ್ನಡದಲ್ಲಿ ರಾಮ ಕೃಷ್ಣ-ವಿವೇಕಾನಂದ ಸಾಹಿತ್ಯಕ್ಕೆ ಹಾಡಿನ ರಚನೆಗಳನ್ನು ಮಾಡುವು ದರಮೂಲಕತಮ್ಮನ್ನು ದಿವ್ಯತ್ರಯರಲ್ಲಿಸಮರ್ಪಿಸಿಕೊಂಡಿದ್ದಾರೆ. ಉದಾಹರಣೆಗೆ ಡಾ.ಪ್ರಭುಶಂಕರ, ಶ್ರೀ ಪ್ರಭುಪ್ರಸಾದ್, ಡಾ. ಹೆಚ್.ಎನ್.ಮುರಳೀಧರ ಹಾಗೂ ಮತ್ತಿತರರು. ಶ್ರೀ ಮುರಳೀ ಧರರವರು 'ಹಾಡು ಚಾಗಿಯ ಹಾಡನು' ಎಂಬ ಶೀರ್ಷಿಕೆಯನ್ನು ಕೊಟ್ಟು ಸ್ವಾಮಿ ವಿವೇಕಾನಂದರ ಕವನಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಶ್ರೀರಾಮಕೃಷ್ಣರ ಸಂಬಂಧವಾಗಿ ಅನೇಕ ಹಾಡು ಗಳನ್ನು ರಚಿಸಿದ್ದಾರೆ. ಶ್ರೀ ಪ್ರಭುಪ್ರಸಾದ್‌ರವರ 'ಶರಣಾಗು ಶರಣಾಗು ಶರಣಾಗು ಮನವೆ' ಹಾಡು ಭಕ್ತರ ಮನಸ್ಸಿನಲ್ಲಿ ನೆಲೆನಿಂತಿದೆ. ಮುಂಬರುವ ಯುವ ಪೀಳಿಗೆಯು ಇವರೆಲ್ಲರ ಆಶೀರ್ವಾದ ಹಾಗು ಸ್ಫೂರ್ತಿಯನ್ನು ಪಡೆದು ದಿವ್ಯತ್ರಯರ ಜೀವನ-ಸಂದೇಶಗಳನ್ನು ಉತ್ತಮ ಬರವಣಿಗೆಗಳ ಮೂಲಕ ಕೊಡುವಂತಾಗಲಿ ಹಾಗೂ ಕಾವ್ಯ-ಹಾಡುಗಳನ್ನು ಕನ್ನಡದಲ್ಲಿ ರಚಿಸಿ, ಕನ್ನಡನಾಡಿನ ಜನತೆಗೆ ದಿವ್ಯತ್ರಯರ ಸಂದೇಶಗಳು ತಲುಪುವಂತೆ ಮಾಡಲೆಂದು ಆಶಿಸುತ್ತೇವೆ. ❈

# ರಾಮಕೃಷ್ಣ ಮಹಾಸಂಘದಲ್ಲಿ ರಾಮನಾಮ ಸಂಕೀರ್ತನೆ

**ಸ್ವಾಮಿ ವೀರೇಶಾನಂದ**

ಪ್ರತಿ ತಿಂಗಳಲ್ಲಿ ಎರಡು ಬಾರಿ, ಏಕಾದಶಿ ದಿನದಂದು ರಾಮಕೃಷ್ಣ ಮಹಾಸಂಘದ ಎಲ್ಲ ಶಾಖಾಕೇಂದ್ರಗಳಲ್ಲೂ 'ಶ್ರೀರಾಮನಾಮ ಸಂಕೀರ್ತನೆ' ನಡೆಯುವುದು ಹಲವು ವರ್ಷಗಳಿಂದ ಮುಂದುವರಿದುಕೊಂಡು ಬಂದಿರುವ ಸಂಪ್ರದಾಯ. ಈ ಸಂಕೀರ್ತನೆಯ ಹಿಂದಿರುವ ಇತಿಹಾಸವೇ ಒಂದು ರೋಚಕವಾದ ಕಥೆ. ದೈವೀಪ್ರೇರಣೆಯಂತೆ ನಡೆದ ಈ ಘಟನಾವಳಿಗಳ ಎಲ್ಲ ವಿವರಣೆಗಳೊಂದಿಗೆ, ರಾಮನಾಮದ ಮಹತ್ವ, ಸಂಕೀರ್ತನೆಯ ಹಿರಿಮೆ, ಆಂಜನೇಯನ ಆರಾಧನೆ ಈ ವಿಷಯಗಳನ್ನು ಕುರಿತು ವಿಸ್ತೃತವಾಗಿ ಬರೆದಿರುವ ಪೂಜ್ಯ ಸ್ವಾಮೀಜಿಯವರು **'ವಿವೇಕ ಪ್ರಭ'** ಪತ್ರಿಕೆಯ ಹಿಂದಿನ ಸಂಪಾದಕರಾಗಿದ್ದರು. ಉತ್ತಮ ವಾಗ್ಮಿಗಳೂ, ಸಂಸ್ಕೃತ ವಿದ್ವಾಂಸರೂ ಆಗಿರುವ ಅವರು ಈ ಪತ್ರಿಕೆಯಲ್ಲಿ ನಿಯತವಾಗಿ ಹಲವು ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ. ಪ್ರಸ್ತುತ ಬೇಲೂರು ಮಠದಲ್ಲಿರುವ ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.



### ಭಕ್ತಿಸಾಧನೆಯಲ್ಲಿ ಸಂಕೀರ್ತನೆಯ ಮಹತ್ವ

**'ಸ್ನೇಹಪೂರ್ವಮ್ ಅನುಧ್ಯಾನಂ ಭಕ್ತಿರಿತ್ಯಭಿಧೀಯತೇ'** 'ಪರಮಾತ್ಮನಲ್ಲಿನ ತುಂಬು ಸ್ನೇಹದಿಂದ ಅವನನ್ನು ಅನವರತವೂ ಧ್ಯಾನ ಮಾಡುವುದನ್ನು ಅಥವಾ ಚಿಂತಿಸುವುದನ್ನೇ ಭಕ್ತಿ ಎಂದು ಕರೆಯಲಾಗುತ್ತದೆ.' — ಲಿಂಗಪುರಾಣದಲ್ಲಿ ಬರುವ ಈ ಉಕ್ತಿಯನ್ನು ಶ್ರೀರಾಮಾನುಜಾಚಾರ್ಯರು ತಮ್ಮ ಭಗವದ್ಗೀತಾ ಭಾಷ್ಯದಲ್ಲಿ ಉಲ್ಲೇಖಿಸುತ್ತಾರೆ. ಭಕ್ತಿಯು ಎರಡು ಅಂಶಗಳನ್ನು ಹೊಂದಿರಬೇಕು ಎಂದು ಈ ಮಾತು ಪ್ರತಿಪಾದಿಸುತ್ತದೆ: ೧. ಭಗವಂತನ ಮೇಲಿನ ಸ್ನೇಹ ೨. ನಿರಂತರ ಚಿಂತನೆ ಮತ್ತು ಧ್ಯಾನ. ಭಾಗವತವು ನವವಿಧ ಭಕ್ತಿಯನ್ನು ಪ್ರತಿಪಾದಿಸುತ್ತದೆ. ಅದರಲ್ಲಿ ಸ್ಮರಣೆ ಅತ್ಯಂತ ಮುಖ್ಯವಾದುದು – **ಸ್ಮರಣಾದೇವ ಕೇವಲಂ.** ಇದರ ನೇರ ಅನುವಾದದಂತೆ ಪುರಂದರದಾಸರು 'ಸ್ಮರಣೆಯೊಂದೇ ಸಾಲದೆ ಗೋವಿಂದನ' ಎಂದು ತಮ್ಮ ಹಾಡಿನಲ್ಲಿ ಹೇಳುತ್ತಾರೆ. ನವವಿಧ ಭಕ್ತಿಯ ಉಳಿದ ಎಂಟು ಸಾಧನೆಗಳು ಸ್ಮರಣೆ ಎನ್ನುವ ಮುಖ್ಯಸಾಧನೆಗೆ ಸಹಾಯಕಗಳು ಎಂದು ಸ್ವಾಮಿ ತಪಸ್ಯಾನಂದಜಿ ಅವರು ಅಭಿಪ್ರಾಯಪಡುತ್ತಾರೆ.

ಭಗವತ್ಸ್ಮರಣೆಗೆ ಅತ್ಯಂತ ಸುಲಭವಾದ ಸಾಧನೆ ಅದಾವುದು? ಅದಕ್ಕೆ ಭಾಗವತವೇ ಉತ್ತರ ಹೇಳುತ್ತದೆ: **'ಕಲೌ ಸಂಕೀರ್ತನಂ ಹರೇಃ ।'** ಕಲಿಯುಗದಲ್ಲಿ ಹರಿಯ ಸಂಕೀರ್ತನೆಯೇ ಪ್ರಧಾನ ಸಾಧನೆ ಎಂದು. ಶ್ರೀರಾಮಕೃಷ್ಣರು ಕೂಡ ಇದನ್ನು ಮನಃಪೂರ್ವಕವಾಗಿ ಒಪ್ಪುತ್ತಾರೆ. ಸಂಕೀರ್ತನೆ ಎಂದರೇನು? ಇದರ ಮಹತ್ವ ಏನು? ಈ ವಿಷಯವನ್ನು ಭಾಗವತವು ವಿಶದವಾಗಿ ಬಣ್ಣಿಸುತ್ತದೆ. ಸಂಕೀರ್ತನೆ ಎಂದರೆ ಸ್ತೋತ್ರ ಮಾಡುವುದು ಎಂದರ್ಥ. ಭಗವಂತನನ್ನು ಹಾಡು, ಶ್ಲೋಕಗಳ ಮೂಲಕ ಸ್ತವನ ಮಾಡುವುದೇ ಸಂಕೀರ್ತನೆ. ಭಗವಂತನು ಕೀರ್ತನೀಯ ಅಂದರೆ ಸ್ತೋತ್ರ ಮಾಡಲು ಅತ್ಯಂತ ಯೋಗ್ಯನಾದ ಪುರುಷೋತ್ತಮ. ಹೀಗಾಗಿ ಅವನ ಸ್ತೋತ್ರವನ್ನು ಮಾತ್ರ ಮಾಡಬೇಕು. ಇದರಿಂದ ಏನಾಗುತ್ತದೆ? ತೀರ್ಥಪಾದ ಅಂದರೆ ಅತ್ಯಂತ ಪವಿತ್ರಸ್ವರೂಪಿಯಾದ ಪರಮಾತ್ಮನೇ ಕೀರ್ತನೆಯನ್ನು ಕೇಳಿಸಿಕೊಳ್ಳುತ್ತಾನೆ; ಭಕ್ತನು ತನ್ನ ಹೃದಯದೊಳಗೆ ನನ್ನನ್ನು ಆಹ್ವಾನಿಸುತ್ತಿದ್ದಾನೆ ಎಂದು ಭಾವಿಸಿಕೊಂಡು ಭಕ್ತನ ಪವಿತ್ರವಾದ ಮನಸ್ಸಿನಲ್ಲಿ ಕಾಣಿಸಿಕೊಳ್ಳುತ್ತಾನೆ. ಹೀಗಾಗಿ ಸಂಕೀರ್ತನೆಯು ಯಾವುದೇ ವೈದಿಕ ಆಚರಣೆಗಳು, ಯಾಗಯಜ್ಞಗಳಿಗಿಂತ ಶ್ರೇಷ್ಠವಾದುದು. ಅಪಾರವಾದ ಆನಂದ ಮತ್ತು ಉಲ್ಲಾಸಗಳನ್ನು ನಿರಂತರವಾಗಿ ಉಂಟುಮಾಡುವಂಥದ್ದು. ಹೀಗೆ ಭಾಗವತವು ಸಂಕೀರ್ತನೆಯ ಮಹತ್ವವನ್ನು ಒತ್ತಿಹೇಳುತ್ತದೆ.

## ರಾಮನಾಮದ ಮಹಿಮೆ

ಸಂಕೀರ್ತನೆಯಲ್ಲಿಯೂ ಅತ್ಯಂತ ಪ್ರಭಾವಕಾರಿಯಾದದ್ದು ಮತ್ತು ಪ್ರಸಿದ್ಧವಾದದ್ದು ನಾಮ ಸಂಕೀರ್ತನೆ. ವಿಷ್ಣು ಸಹಸ್ರ ನಾಮ ಸ್ತೋತ್ರದ ಪಠಣಾನಂತರ ಉಚ್ಚರಿಸುವ ಕೆಲವು ಶ್ಲೋಕಗಳು ನಾಮ ಸಂಕೀರ್ತನೆಯಿಂದ ಉಂಟಾಗುವ ಅಪೂರ್ವ ಫಲವನ್ನು ತಿಳಿಸುತ್ತವೆ. ಕೀರ್ತನೆಯನ್ನು ಹಾಡುವ ಅಥವಾ ಕೇಳುವ ಮನುಷ್ಯನಿಗೆ ಈ ಜನ್ಮದಲ್ಲಾಗಲಿ, ಮುಂದಿನ ಜನ್ಮದಲ್ಲಾಗಲಿ ಯಾವ ರೀತಿಯ ಅಶುಭವೂ ಉಂಟಾಗದು. ಅಂಥವನು ಎಲ್ಲ ಕಷ್ಟಗಳಿಂದ ಪಾರಾಗುತ್ತಾನೆ. ವಾಸುದೇವನನ್ನೇ ಆಶ್ರಯಿಸಿದ ಅವನು, ವಾಸುದೇವನಲ್ಲಿಯೇ ನಿಷ್ಠೆಯನ್ನು ಬೆಳೆಸಿಕೊಂಡು, ಎಲ್ಲ ಪಾಪಗಳಿಂದಲೂ ವಿಶುದ್ಧನಾಗಿ ಸನಾತನವಾದ ಬ್ರಹ್ಮತತ್ತ್ವದಲ್ಲಿ ಲೀನನಾಗುತ್ತಾನೆ ಎಂದು ಒಂದು ಶ್ಲೋಕವು ಹೇಳುತ್ತದೆ. ಇದೇ ಸಂದರ್ಭದಲ್ಲಿ ಶಿವ ಮತ್ತು ಪಾರ್ವತಿಯರ ನಡುವಿನ ಸಣ್ಣದೊಂದು ಸಂಭಾಷಣೆಯೂ ಬರುತ್ತದೆ. ಪಾರ್ವತಿ ಶಿವನನ್ನು ಕೇಳುತ್ತಾಳೆ: ''ಶ್ರೀವಿಷ್ಣು ಸಹಸ್ರನಾಮವನ್ನು ಯಾವ ಬಹಳ ಸುಲಭವಾದ ಉಪಾಯದಿಂದ ಪಂಡಿತರು ಪಾರಾಯಣ ಮಾಡುತ್ತಾರೆ? ಇದನ್ನು ಕೇಳಲು ನನಗೆ ಬಹಳ ಇಚ್ಛೆಯುಂಟಾಗಿದೆ.'' ಇದಕ್ಕೆ ಶ್ರೀ ಮಹಾದೇವನು ಹೀಗೆ ಉತ್ತರ ಕೊಡುತ್ತಾನೆ:

**ಶ್ರೀರಾಮರಾಮರಾಮೇತಿ ರಮೇ ರಾಮೇ ಮನೋರಮೇ ।**
**ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥**

''ಹೇ ಮನೋರಮೇ, ಸುಂದರವಾದ ಮುಖವುಳ್ಳವಳೇ, ಅಂಥವರು ರಾಮ, ರಾಮ, ರಾಮ ಎಂದು ಹೇಳಿಕೊಳ್ಳುತ್ತಾರೆ. ರಾಮನಾಮವು ಭಗವಂತನ ಸಹಸ್ರನಾಮಗಳಿಗೆ ಸಮವಾದುದು.''

ರಾಮನಾಮವು **ತಾರಕ ಮಂತ್ರ** ಎಂದು ಸಾಂಪ್ರದಾಯಕರಲ್ಲಿ ಪ್ರಸಿದ್ಧವಾಗಿದೆ. ಪುರಂದರದಾಸರು ಕೂಡ ಹೀಗೆ ಹೇಳುತ್ತಾರೆ:

**ರಾಮಮಂತ್ರವ ಜಪಿಸೊ ಮನುಜಾ..**
**ಆ ಮಂತ್ರ, ಈ ಮಂತ್ರ ಜಪಿಸಿ ಕೆಡಲು ಬೇಡ**
**ಸೋಮಶೇಖರ ತನ್ನ ಭಾಮಿನಿಗೆ ಪೇಳಿದ ಮಂತ್ರ..**

### ರಾಮನಾಮ ಮತ್ತು ಶ್ರೀರಾಮಕೃಷ್ಣ

ಇನ್ನು ಶ್ರೀರಾಮಕೃಷ್ಣ ಸಂಪ್ರದಾಯದಲ್ಲಿ ರಾಮನಾಮದ ಮಹತ್ವವನ್ನು ಕುರಿತು ತಿಳಿದುಕೊಳ್ಳೋಣ. ಶ್ರೀರಾಮಕೃಷ್ಣರ ವಂಶಸ್ಥರೆಲ್ಲರೂ ರಾಮಭಕ್ತರು. ಅವರ ಕುಲದೇವತೆ ರಘುವೀರ. ಅವರ ಮನೆಯವರೆಲ್ಲ ರಾಮನ ಹೆಸರು ಹೊತ್ತವರೇ. ಕ್ಷುಧಿರಾಮ, ರಾಮಕುಮಾರ, ರಾಮೇಶ್ವರ ಇತ್ಯಾದಿ. ಶ್ರೀರಾಮಕೃಷ್ಣರು ರಾಮನಾಮ ಮಂತ್ರಕ್ಕೆ ಬಹಳ ಪ್ರಾಧಾನ್ಯತೆ ಕೊಡುತ್ತಿದ್ದರು. ಅವರು ಕರುಣಾಪೂರಿತವಾಗಿ ರಾಮನನ್ನು ಪ್ರಾರ್ಥಿಸುವ ಹಲವು ಪ್ರಸಂಗಗಳನ್ನು ನಾವು 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ಓದುತ್ತೇವೆ. ಸ್ವಾಮಿ ವಿವೇಕಾನಂದರಿಗೆ ಅವರು ರಾಮನಾಮವನ್ನೇ ದೀಕ್ಷಾಮಂತ್ರವಾಗಿ ನೀಡಿದರು.




### ಮಹಾವೀರ ಹನುಮಂತನ ಪೂಜೆ ಮತ್ತು ಸ್ವಾಮಿ ವಿವೇಕಾನಂದರು

ಸ್ವಾಮಿ ವಿವೇಕಾನಂದರು ಭಾರತದಲ್ಲಿ ಶಕ್ತಿಪೂಜೆ ಆರಂಭವಾಗಬೇಕು ಎಂದು ಬಯಸಿದ್ದರು. ದೇವೀಪೂಜೆಯು ಈ ಶಕ್ತ್ಯಾರಾಧನೆಯ ಒಂದು ಪ್ರಕಾರ. ಹಾಗೆಯೇ ಮಹಾವೀರ ಎಂದು ಬಂಗಾಳದಾದ್ಯಂತ ಪ್ರಸಿದ್ಧನಾದ ಭಕ್ತಾಗ್ರೇಸರ ಹನುಮಂತನ ಪೂಜೆ ಕೂಡ ಸ್ವಾಮಿ ವಿವೇಕಾನಂದರು ಬಯಸಿದ ಶಕ್ತ್ಯಾರಾಧನೆಯ ಇನ್ನೊಂದು ಪ್ರಕಾರ. ಅವರು ಒಂದು ಕಡೆ ಹೀಗೆ ಹೇಳುತ್ತಾರೆ: ''ಚಿರಂತನ ಸತ್ಯಗಳನ್ನು ಸಾಕ್ಷಾತ್ಕರಿಸಿಕೊಂಡ ಮಹಾನುಭಾವರನ್ನು ಪಾಲಿಸಬೇಕಾದ ಆದರ್ಶಗಳಾಗಿ ಜನರ ಮುಂದೆ ಪ್ರಸ್ತುತಪಡಿಸಬೇಕು. ಅಂಥವರು ಶ್ರೀರಾಮ, ಶ್ರೀಕೃಷ್ಣ, ಮಹಾವೀರ (ಹನುಮಾನ್), ಶ್ರೀರಾಮಕೃಷ್ಣ ಮುಂತಾದವರು. ಈ ದೇಶದಲ್ಲಿ ಶ್ರೀರಾಮಚಂದ್ರ ಮತ್ತು ಮಹಾವೀರ ಸ್ವಾಮಿಯ ಆರಾಧನೆಯನ್ನು ನಡೆಸಲು ನಿನಗೆ ಸಾಧ್ಯವಾಗುವುದೇನು?

ಶ್ರೀಕೃಷ್ಣನ ಬೃಂದಾವನ ಲೀಲೆಯನ್ನು ಸದ್ಯಕ್ಕೆ ಬದಿಗಿಡಿ. ಗೀತೋಪದೇಶದ ಕಹಳೆಯನ್ನು ಮೊಳಗಿಸಿದ ಶ್ರೀಕೃಷ್ಣನ ಆರಾಧನೆಯನ್ನು ಎಲ್ಲ ಕಡೆ ಪ್ರಚುರಪಡಿಸಿ..'' ಹನುಮಾನ್ ಮತ್ತು ಶ್ರೀರಾಮಚಂದ್ರರು ಭಾರತೀಯರಿಗೆ ಅವಶ್ಯವಾದ ಶಕ್ತಿಯ ಆದರ್ಶವೆಂಬಂತೆ ಬಿಂಬಿಸಬೇಕು. ಈ ಆದರ್ಶ ಪುರುಷರ ಪೂಜೆಯೆಂದರೆ ಶಕ್ತಿಯ ಆರಾಧನೆಯೇ ಆಗಿದೆ. ಇದು ಸ್ವಾಮಿ ವಿವೇಕಾನಂದರ ಅಭಿಪ್ರಾಯ.

ಇನ್ನೊಂದು ಕಡೆ ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ, ''ಮಹಾವೀರನ ಆರಾಧನೆಯನ್ನು ಪ್ರಚುರಪಡಿಸಬೇಕು. ಶಕ್ತಿ ಪೂಜೆಯೆಂಬುದು ನಮ್ಮ ದೈನಂದಿನ ನಡವಳಿಕೆಯಾಗಬೇಕು. ಶ್ರೀರಾಮಚಂದ್ರನನ್ನು ಎಲ್ಲರ ಮನೆಯಲ್ಲಿಯೂ ಪೂಜಿಸಬೇಕು. ಇದರಲ್ಲಿ ಮಾತ್ರ ನಿಮ್ಮ ಒಳಿತು ಅಡಗಿದೆ; ಇದರಲ್ಲಿ ಮಾತ್ರವೇ ದೇಶದ ಕಲ್ಯಾಣ ಅಡಗಿದೆ. ಇದನ್ನು ಬಿಟ್ಟು ಬೇರೆ ಯಾವ ದಾರಿಯೂ ಇಲ್ಲ.''

ಹಾಗೆಯೇ ಭಾರತ ದೇಶದಲ್ಲಿ ಬ್ರಹ್ಮಚರ್ಯ ಆದರ್ಶವನ್ನು ಮತ್ತೆ ಪುನರುಜ್ಜೀವನಗೊಳಿಸಬೇಕು ಎಂಬುದು ಸ್ವಾಮಿ ವಿವೇಕಾನಂದರ ಮನದಾಳದ ಆಶಯವಾಗಿತ್ತು. ರಾಮಕೃಷ್ಣ ಮಹಾಸಂಘದ ಪ್ರಥಮ ಅಧ್ಯಕ್ಷರಾದ ಸ್ವಾಮಿ ಬ್ರಹ್ಮಾನಂದಜಿ ಅವರು **ರಾಮನಾಮ ಸಂಕೀರ್ತನೆ**ಯ ಪುಸ್ತಕಕ್ಕೆ ತಾವು ಬರೆದ ಮುನ್ನುಡಿಯಲ್ಲಿ ಹೀಗೆ ಬರೆದಿದ್ದಾರೆ: ''ಬ್ರಹ್ಮಚರ್ಯದ ಮೂರ್ತಸ್ವರೂಪನಾದ ಮಹಾವೀರ ಆಂಜನೇಯ ಸ್ವಾಮಿಯ ಉಪಾಸನೆ ಹೆಚ್ಚಾಗಬೇಕು ಎನ್ನುವುದು ಪರಮಪೂಜ್ಯ ಸ್ವಾಮಿ ವಿವೇಕಾನಂದರ ಇಚ್ಛೆಯಾಗಿದ್ದಿತು'' ಎಂದು.

### ರಾಮನಾಮ ಸಂಕೀರ್ತನೆ ಮತ್ತು ಸ್ವಾಮಿ ಬ್ರಹ್ಮಾನಂದರು

ಶ್ರೀರಾಮಕೃಷ್ಣರು ಮತ್ತು ಸ್ವಾಮಿ ವಿವೇಕಾನಂದರ ಬೋಧನೆಗಳಲ್ಲಿ ರಾಮ ಮತ್ತು ಆಂಜನೇಯ ಸ್ವಾಮಿಯ ಆರಾಧನೆಗಳು ಎಷ್ಟು ಮಹತ್ವವನ್ನು ಪಡೆದುಕೊಂಡಿದ್ದವು ಎಂಬುದನ್ನು ನೋಡಿದೆವು. ಈ ಹಿನ್ನಲೆಯಲ್ಲಿ ರಾಮಕೃಷ್ಣ ಮಹಾಸಂಘದಲ್ಲಿ ರಾಮನಾಮ ಸಂಕೀರ್ತನೆಯು ಹೇಗೆ ಆರಂಭಗೊಂಡಿತು ಎಂಬುದು ಅತ್ಯಂತ ರೋಚಕವಾದ ಇತಿಹಾಸವಾಗಿದೆ.

ಸ್ವಾಮಿ ಬ್ರಹ್ಮಾನಂದರು ಭಗವದನುಭೂತಿಯನ್ನು ಪಡೆದುಕೊಂಡ ಮಹಾನುಭಾವರು. ಶ್ರೀರಾಮಕೃಷ್ಣರ ಮಾನಸಿಕ ಪುತ್ರ ಎಂದೇ ಹೆಸರಾದವರು. ರಾಮಕೃಷ್ಣ ಮಹಾಸಂಘದಲ್ಲಿ ರಾಮನಾಮ ಸಂಕೀರ್ತನೆಯ ಶುಭಾರಂಭ ಮಾಡಿದವರು ಇವರೇ. ಅದು ಹೇಗೆ ಆಯಿತು ಎನ್ನುವುದೇ ಒಂದು ಸ್ವಾರಸ್ಯದ ಕಥೆ.

೧೯೦೯ರಲ್ಲಿ ಬೆಂಗಳೂರು ರಾಮಕೃಷ್ಣ ಆಶ್ರಮದ ಉದ್ಘಾಟನಾ ಮಹೋತ್ಸವಕ್ಕೆ ಪರಮಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಮಹಾರಾಜರು ಆಗಮಿಸಿದ್ದರು. ಇದೇ ಕಾಲಾವಧಿಯಲ್ಲಿ, ಆಶ್ರಮದ ಸುತ್ತಮುತ್ತಲಿನ ಚಮ್ಮಾರರು ಮತ್ತು ಇತರ ದಲಿತವರ್ಗದ



ಸ್ವಾಮಿ ಬ್ರಹ್ಮಾನಂದರು

ಕೆಲವು ಭಕ್ತರು ಪ್ರತಿ ಭಾನುವಾರ ಆಶ್ರಮದ ಪ್ರಾರ್ಥನಾ ಮಂದಿರದಲ್ಲಿ ನೆರೆಯುತ್ತಿದ್ದರು. ಅಲ್ಲಿ ಅವರು ಶ್ರೀರಾಮಕೃಷ್ಣರ ಚಿತ್ರಪಟದ ಎದುರು ಕುಳಿತುಕೊಂಡು ಪ್ರಾರ್ಥನೆ ಸಲ್ಲಿಸುತ್ತಿದ್ದರು. ಅನಂತರ ಸಾಮೂಹಿಕವಾಗಿ ರಾಮನಾಮ ಸಂಕೀರ್ತನೆಯನ್ನು ಹಾಡುತ್ತಿದ್ದರು. ಅನಂತರ ಅವರೆಲ್ಲರೂ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅವರಿಗೆ ಭಕ್ತಿಪೂರ್ವಕವಾಗಿ ಪ್ರಣಾಮಗಳನ್ನು ಸಲ್ಲಿಸುತ್ತಿದ್ದರು. ಈ ರಾಮನಾಮ ಸಂಕೀರ್ತನೆಯನ್ನು ಕೇಳಿ ಪೂಜ್ಯರು ಬಹಳ ಆನಂದಪಟ್ಟರು. ಆ ಭಕ್ತರನ್ನು ಹರಿಸಿದರು.

ಇನ್ನೊಂದು ಐತಿಹ್ಯದ ಪ್ರಕಾರ, ರಾಮನಾಮವನ್ನು ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಶಿವನಸಮುದ್ರದಲ್ಲಿ ಕೂಡ ಕೇಳಿಸಿಕೊಂಡಿದ್ದರು. ಅಲ್ಲಿನ ಬ್ಲಫ್ ಎಂಬ ಸ್ಥಳದಲ್ಲಿ, ಏಷಿಯಾ ಖಂಡದಲ್ಲಿಯೇ ಮೊದಲ ಬಾರಿಗೆ, ೧೯೦೨ರಲ್ಲಿ ಜಲವಿದ್ಯುತ್ ಯೋಜನೆ ಆರಂಭಗೊಂಡಿತು. ಅಲ್ಲಿ ಶ್ರೀ ವಿ. ರಾಮನಾಥ್ ಕೌಶಿಕ್ ಅವರು ಎಲೆಕ್ಟ್ರಿಕಲ್ ಇಂಜಿನೀರ್ ಆಗಿ ಸೇವೆಗೆ ಸೇರಿಕೊಂಡರು. ರಾಮಕೃಷ್ಣ ಮಿಷನ್ನಿನ ಪರಮ ಭಕ್ತರಾಗಿದ್ದ ಅವರು ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅವರನ್ನು ೧೯೧೬ರಲ್ಲಿ ಬೆಂಗಳೂರಿನಲ್ಲಿ ಭೇಟಿ ಮಾಡಿ, ತಮ್ಮ ಮನೆಗೆ ಆಹ್ವಾನಿಸಿದರು. ಅದರಂತೆಯೇ ಪೂಜ್ಯ ಸ್ವಾಮೀಜಿ ಆಗಮಿಸಿದ್ದರು. ಅವರೊಂದಿಗೆ ಸ್ವಾಮಿ ಶಿವಾನಂದಜಿ, ಸ್ವಾಮಿ ಶಂಕರಾನಂದಜಿ ಮತ್ತು ಹಲವಾರು ಭಕ್ತರು ಕೂಡ ಬಂದಿದ್ದರು. ಅಂದು ಮನೆಯವರೆಲ್ಲ ಸೇರಿ ರಾಮನಾಮ ಸಂಕೀರ್ತನೆಯನ್ನು ಮಾಡಿದರು. ಪ್ರತಿದಿನ ಸಂಜೆ ರಾಮನಾಮ ಸಂಕೀರ್ತನೆಯನ್ನು ಮಾಡುವುದು ಆ ಕುಟುಂಬದವರ ವಾಡಿಕೆಯಾಗಿತ್ತು. ಕರ್ನಾ

ಟಕದ ನೂರಾರು ರಾಮಮಂದಿರಗಳಲ್ಲಿ ಈ ಪದ್ಧತಿ ಇದೆ. ಇಲ್ಲೆಲ್ಲಾ ರಾಮನಾಮವನ್ನು ಸಂಪ್ರದಾಯ ಧಾಟಿಯಲ್ಲಿ ಹೇಳಿಕೊಂಡು ಹೋಗುತ್ತಾರೆಯೇ ಹೊರತು ಹಾಡುವುದಿಲ್ಲ. ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅದನ್ನು ಆಲಿಸಿ ಆನಂದಪಟ್ಟರು. ಈ ವೃತ್ತಾಂತವನ್ನು ರಾಮನಾಥ ಕೌಶಿಕ್ ಅವರ ಪುತ್ರರಾದ ರಾಮಕೃಷ್ಣ ಕೌಶಿಕ್ ಅವರು ತಮ್ಮ ನೆನಪುಗಳಲ್ಲಿ ದಾಖಲಿಸಿದ್ದಾರೆ. *(ವೇದಾಂತ ಕೇಸರಿ, ಡಿಸೆಂಬರ್ ೧೯೯೭ ಸಂಚಿಕೆ)*

೧೯೦೯ನೆಯ ಇಸವಿ ಮೇ ತಿಂಗಳಲ್ಲಿ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಮಹಾರಾಜರು ಚೆನ್ನೈ ನಗರದಿಂದ ಪುರಿ ಪಟ್ಟಣಕ್ಕೆ ಪಯಣಿಸಿದರು. ರಾಮನಾಮ ಸಂಕೀರ್ತನೆಗೆ ಪೂರಕವಾಗಿ ಆರಂಭಿಕ ಪ್ರಾರ್ಥನೆ ಮತ್ತು ಮಂಗಳಾಚರಣಗಳನ್ನು ಸೇರಿಸಿದ್ದು ಅಲ್ಲಿಯೇ. ಸ್ವತಃ ಒಳ್ಳೆಯ ಹಾಡುಗಾರರಾಗಿದ್ದ ಸ್ವಾಮಿ ಅಂಬಿಕಾನಂದರು ರಾಗ ತಾಳಗಳನ್ನು ಸಂಯೋಜಿಸಿದರು. ಸರಳ ಸಂಸ್ಕೃತದಲ್ಲಿ ಸಂಕ್ಷಿಪ್ತವಾಗಿ ಪ್ರಸ್ತುತಪಡಿಸಲಾಗಿದ್ದ ಶ್ರೀರಾಮಚಂದ್ರ ಪ್ರಭುವಿನ ಈ ಲೀಲಾ ನಾಟಕವು, ಸರಾಗ ಛಂದಸ್ಸು ಮತ್ತು ಸುಮನೋಹರ ರಾಗದಲ್ಲಿ, ಎಲ್ಲರೂ ಕೂಡಿ ಹಾಡುವ ಹಾಗೆ ಹೀಗೆ ರಚನೆಗೊಂಡಿತು. ಅವರೆಲ್ಲ ಉಳಿದುಕೊಂಡಿದ್ದ 'ಶಶಿ ನಿಕೇತನ' ಎಂಬ ಮನೆಯ ವಿಶಾಲ ಸಭಾಂಗಣದಲ್ಲಿ ರಾಮನಾಮ ಸಂಕೀರ್ತನೆಯನ್ನು ಆಯೋಜಿಸಲಾಯಿತು. ರಾಮಕೃಷ್ಣ ಮಹಾಸಂಘದ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ನಡೆದ ರಾಮನಾಮ ಸಂಕೀರ್ತನೆ ಇದು. ಅಲ್ಲಿದ್ದ ಸಾಧು, ಬ್ರಹ್ಮಚಾರಿಗಳು ಇದರಲ್ಲಿ ಉತ್ಸಾಹದಿಂದ ಪಾಲ್ಗೊಂಡರು. ಅನಂತರ ಪ್ರಸಿದ್ಧ ಜಗನ್ನಾಥ ದೇವಸ್ಥಾನದಲ್ಲಿ ಕೂಡ ಸಂಕೀರ್ತನೆಯನ್ನು ಏರ್ಪಡಿಸಲಾಯಿತು.

## ಬೇಲೂರು ಮಠದಲ್ಲಿ

೧೯೧೦ನೇ ಇಸವಿಯ ಮಧ್ಯಭಾಗದಲ್ಲಿ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಮಹಾರಾಜರು ಬೇಲೂರು ಮಠಕ್ಕೆ ವಾಪಸ್ಸಾದರು. ಮಠದಲ್ಲಿ ಮೊಟ್ಟಮೊದಲ ಬಾರಿಗೆ ರಾಗಸಂಯೋಜನೆಯೊಂದಿಗೆ ರಾಮನಾಮದ ಗಾಯನ ಏರ್ಪಾಡಾಯಿತು. ಅದರ ದಿನಾಂಕ ಪ್ರಾಯಶಃ ೧೯೧೦ನೇ ಇಸವಿ ಮಾರ್ಚ್ ೧೩ – ಶ್ರೀರಾಮಕೃಷ್ಣರ ಜಯಂತಿ ಮಹೋತ್ಸವದ ಪುಣ್ಯದಿನ. ಅಂದು ಮಠದ ಅಂಗಳವು ಜನರಿಂದ ಕಿಕ್ಕಿರಿದು ತುಂಬಿಹೋಗಿತ್ತು. ಗಿರೀಶ್‌ಚಂದ್ರ ಘೋಷ್, ಮಹೇಂದ್ರನಾಥ ಗುಪ್ತ (ಮಾಸ್ಟರ್ ಮಹಾಶಯ) ಮುಂತಾದ ಅನೇಕ ಗಣ್ಯರು ಉಪಸ್ಥಿತರಿದ್ದರು. ಸಾಧುಬ್ರಹ್ಮಚಾರಿಗಳು ಹಾರ್ಮೋನಿಯಂ ಮುಂತಾದ ವಾದ್ಯಗಳ ಸಹಕಾರದೊಂದಿಗೆ ರಾಗ-ತಾಳ-ಲಯಬದ್ಧವಾಗಿ ರಾಮನಾಮ ಸಂಕೀರ್ತನೆಯನ್ನು ಮಾಡಿದರು. ಇದರಿಂದಾಗಿ ಆನಂದದ ಹೊಳೆಯೇ ಹರಿಯಿತು.

ಹಾಗೆಯೇ ೧೯೧೦, ಮಾರ್ಚ್ ೨೦ರ ಭಾನುವಾರ ಶ್ರೀರಾಮಕೃಷ್ಣ ಜಯಂತಿ ಉತ್ಸವದ ಸಾರ್ವಜನಿಕ ಮಹೋತ್ಸವ ನಡೆಯಿತು. ಅಂದು ಕೂಡ ರಾಮನಾಮ ಸಂಕೀರ್ತನೆ ಏರ್ಪಾಡಾಗಿತ್ತು. ರಾಮಕೃಷ್ಣ ಮಹಾಸಂಘದ ಆಂಗ್ಲ ಮಾಸಪತ್ರಿಕೆಯಾದ **'ಪ್ರಬುದ್ಧ ಭಾರತ'**ದಲ್ಲಿ ಪ್ರಕಟವಾದ ಒಂದು ವರದಿಯ ಪ್ರಕಾರ, ಸುಮಾರು ಒಂದು ಸಾವಿರ ಮಂದಿ ಭಕ್ತರು ಈ ಸಂಗೀತ ಸುಧೆಯಲ್ಲಿ ಮಿಂದು ಪುನೀತರಾದರು. ರಾಮನಾಮ ಸಂಕೀರ್ತನೆಯು ಭಕ್ತವೃಂದವನ್ನು ಮೂಕವಿಸ್ಮಿತರನ್ನಾಗಿ ಮಾಡಿತು.

ಇದಾಗಿ ಸ್ವಲ್ಪ ಕಾಲದಲ್ಲಿಯೇ ರಾಮನಾಮ ಸಂಕೀರ್ತನೆಯನ್ನು ಒಳಗೊಂಡ ಸಣ್ಣಪುಸ್ತಕವು ಬೇಲೂರು ಮಠದಿಂದ ಪ್ರಕಟವಾಯಿತು. ೧೯೧೧ ನೇ ಇಸವಿಯಲ್ಲಿ ಇದರ ಪರಿಷ್ಕೃತ ಆವೃತ್ತಿ ಪ್ರಕಟವಾಯಿತು. ಇದರ ಮುನ್ನುಡಿಯಲ್ಲಿ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿಯವರು ಹೀಗೆ ಬರೆಯುತ್ತಾರೆ: ''ಎರಡು ವರ್ಷಗಳ ಹಿಂದೆ ದಕ್ಷಿಣ ಭಾರತದ ಪ್ರವಾಸದಲ್ಲಿದ್ದಾಗ, ದಾಕ್ಷಿಣಾತ್ಯ ಜನರಿಂದ ಕೇಳಿದ ರಾಮನಾಮ ಸಂಕೀರ್ತನೆಯಿಂದ ನಾನು ಬಹಳ ಆಕರ್ಷಿತನಾಗಿ ಸಂತೋಷಗೊಂಡೆನು. ಇದು ದೇಶದಲ್ಲೆಲ್ಲ ಪ್ರಚಾರವಾಗಬೇಕೆಂಬ ಸದುದ್ದೇಶದಿಂದ ಇದನ್ನು ಈಗ ಈ ರೂಪದಲ್ಲಿ ಪ್ರಕಟಿಸಲಾಗಿದೆ. ಇದರ ಮೊಟ್ಟಮೊದಲ ಸಂಕೀರ್ತನೆಯನ್ನು ಬೇಲೂರು ಮಠದಲ್ಲಿ ಆಯೋಜಿಸಲಾಗಿತ್ತು. ಇಂದು ದೇಶದ ನಾನಾ ಭಾಗಗಳಲ್ಲಿ ಇದನ್ನು ಭಕ್ತಿಪೂರ್ವಕವಾಗಿ, ಉತ್ಸಾಹದಿಂದ ಗಾಯನಮಾಡುತ್ತಿರುವುದು ಬಹಳ ಸಂತೋಷದ ವಿಷಯ.''

## ವಾರಾಣಸಿಯಲ್ಲಿ ಆಂಜನೇಯನ ದರ್ಶನ

ಮುಂದೊಮ್ಮೆ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅವರು ವಾರಾಣಸಿಗೆ ಭೇಟಿಕೊಟ್ಟರು. ರಾಮನಾಮ ಸಂಕೀರ್ತನೆಯ ಕೆಲವು ಪ್ರತಿಗಳನ್ನು ತಮ್ಮ ಜೊತೆಗೆ ತೆಗೆದುಕೊಂಡು ಹೋಗಿದ್ದರು. ಸಾಧು, ಬ್ರಹ್ಮಚಾರಿಗಳು ಅವುಗಳನ್ನು ಉಪಯೋಗಿಸಿಕೊಂಡು, ಪ್ರತಿ ಏಕಾದಶಿಯಂದು ಬಹಳ ಉತ್ಸಾಹದಿಂದ ರಾಮನಾಮವನ್ನು ಹಾಡುತ್ತಿದ್ದರು. ಒಂದು ದಿನ ಏಕಾದಶಿಯಂದು, ಪೂಜ್ಯ ಸ್ವಾಮಿ ಬ್ರಹ್ಮಾನಂದರ ಸಮ್ಮುಖದಲ್ಲಿ ವಿಧಿವತ್ತಾಗಿ ರಾಮನಾಮ ಸಂಕೀರ್ತನೆ ನಡೆಯುತ್ತಿತ್ತು. ಪೂಜ್ಯ ಸ್ವಾಮೀಜಿಯವರು ಹಠಾತ್ತನೆ ಎದ್ದುನಿಂತರು. ಇನ್ನೊಂದು ಪೀಠವನ್ನು ತರುವಂತೆ ಅಲ್ಲಿದ್ದವರೊಬ್ಬರಿಗೆ ಹೇಳಿದರು. ಪೀಠವನ್ನು ಅಲಂಕರಿಸಿ, ಅದರ ಮೇಲೆ ರಾಮನಾಮದ ಪುಸ್ತಕವನ್ನು ಇರಿಸುವಂತೆ ಹೇಳಿದರು. ಸಂಕೀರ್ತನೆಯು ಮುಗಿದ ಮೇಲೆ ಇದಕ್ಕೆ ವಿವರಣೆ ಹೇಳಿದರು: ''ಸಾಕ್ಷಾತ್ ಆಂಜನೇಯ ಸ್ವಾಮಿಯೇ ಕಥಾಶ್ರವಣಕ್ಕಾಗಿ ಆಗಮಿಸಿದ್ದನು. ಅದಕ್ಕಾಗಿಯೇ ನಾನು ಇನ್ನೊಂದು ಪೀಠವನ್ನು ತರಲು ಹೇಳಿದೆ.''

೧೯೨೧ರ ಮಾರ್ಚ್ ೪ರಂದು ಸ್ವಾಮಿ ಬ್ರಹ್ಮಾನಂದಜಿ, ಸ್ವಾಮಿ ತುರೀಯಾನಂದಜಿ, ಸ್ವಾಮಿ ಶಾರದಾನಂದಜಿ ಸೇರಿ ಸುಮಾರು ಎಪ್ಪತ್ತು ಮಂದಿ ಸಾಧುಗಳು ಮತ್ತು ಭಕ್ತರು,



**ಸಂಕಟ ಮೋಚನ ಹನುಮಾನ್ ಮಂದಿರ, ವಾರಣಾಸಿ**

ಗೋಸ್ವಾಮಿ ತುಳಸೀದಾಸರ ಸಾಧನಾಸ್ಥಳವಾದ ಪ್ರಸಿದ್ಧ ಸಂಕಟ ಮೋಚನ ಮಂದಿರದಲ್ಲಿ ರಾಮನಾಮ ಸಂಕೀರ್ತನೆಯನ್ನು ಮಾಡಿದರು. ಇಡೀ ಪರಿಸರದಲ್ಲಿ ಆಧ್ಯಾತ್ಮಿಕ ದಿವ್ಯಭಾವ ಆವರಿಸಿಕೊಂಡಿತ್ತು. ಆಗ ಒಬ್ಬರು ಶ್ವೇತವರ್ಣದ ವೃದ್ಧರು ಬಂದು ಕುಳಿತುಕೊಂಡರು. ಬ್ರಹ್ಮಾನಂದಜಿ ಅವರ ಎದುರುಮುಖವಾಗಿಯೇ ಕುಳಿತುಕೊಂಡಿದ್ದ ಅವರ ಮುಖ ದಿವ್ಯಜ್ಯೋತಿಯಿಂದ ಬೆಳಗುತ್ತಿತ್ತು. ಅನಂತರ ಸ್ವಾಮಿ ಬ್ರಹ್ಮಾನಂದಜಿ ಹೇಳಿದರು, ''ಸಾಕ್ಷಾತ್ ಹನುಮಂತನೇ ದಯಮಾಡಿಸಿದ್ದನು'' ಎಂದು. ಈ ಘಟನೆ ನಡೆದದ್ದು ಫಾಲ್ಗುಣ ಶುದ್ಧ ಏಕಾದಶಿಯಂದು. ಪ್ರತಿವರ್ಷವೂ ಅಂದು ವಿಶೇಷವಾಗಿ ಸಂಕಟಮೋಚನ ಮಂದಿರದಲ್ಲಿ ರಾಮನಾಮ ಸಂಕೀರ್ತನೆಯನ್ನು ಆಯೋಜಿಸಲಾಗುತ್ತದೆ.

### ಸಂಕೀರ್ತನೆಯ ಪ್ರಚಾರ

೧೯೧೪ರ ಶ್ರಾವಣ ಮಾಸದಲ್ಲಿ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಮತ್ತು ಸಂಗಡಿಗರು ಅಯೋಧ್ಯೆಗೆ ಹೋದರು. ಆ ಸಮಯದಲ್ಲಿ ಶ್ರೀರಾಮದೇವರಿಗೆ ಅಲ್ಲಿ ಉಯ್ಯಾಲೋತ್ಸವ ನಡೆಯುತ್ತದೆ. ಪೂಜ್ಯ ಸ್ವಾಮೀಜಿಯವರ ಇಚ್ಛೆಯ ಪ್ರಕಾರ, ಹನುಮಾನ್ ಗಡೀ ಮಂದಿರದಲ್ಲಿ ಸಾಧುಬ್ರಹ್ಮಚಾರಿಗಳೆಲ್ಲ ಸೇರಿ ರಾಮನಾಮ ಸಂಕೀರ್ತನೆಯನ್ನು ಮಾಡಿದರು. ಆ ಸಮಯದಲ್ಲಿ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅವರು ಗಾಢವಾದ ಸಮಾಧಿಸ್ಥಿತಿಗೆ ಏರಿಬಿಟ್ಟರು. ಇದರ ಪರಿಣಾಮವಾಗಿ ಅಲ್ಲಿದ್ದವರಿಗೂ ಅಪೂರ್ವವಾದ ಆನಂದದ ಅನುಭೂತಿ ಉಂಟಾಯಿತು. ಐದು ದಿನಗಳ ನಂತರ ಅವರೆಲ್ಲ ವಾರಾಣಸಿಗೆ ವಾಪಸ್ಸು ಬಂದರು.

ಹೀಗೆ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅವರು ತಾವು ಹೋದ ಕಡೆಯಲ್ಲೆಲ್ಲ ರಾಮನಾಮ ಸಂಕೀರ್ತನೆಯನ್ನು ಏರ್ಪಡಿಸುವಂತೆ ಪ್ರೇರೇಪಿಸುತ್ತಿದ್ದರು. ೧೯೧೬ರ ಜನವರಿ ೧೦ನೆಯ ತಾರೀಖಿನಂದು ಪೂರ್ವ ಬಂಗಾಳದಲ್ಲಿರುವ ಮೈಮನ್‌ಸಿಂಗ್ ಎಂಬ ಊರಿಗೆ ಹೋದರು. ಅಲ್ಲಿನ ದುರ್ಗಾಮಂದಿರದಲ್ಲಿ ಒಂದು ಧಾರ್ಮಿಕ ಸಭೆ ನಡೆಯಿತು. ಜನರು ಸ್ವಾಮೀಜಿಯವರನ್ನು ಭಾಷಣ ಮಾಡುವಂತೆ ಕೇಳಿಕೊಂಡರು. ಆದರೆ ಅವರು ಭಾಷಣ ಮಾಡಲಿಲ್ಲ. ಬೇರೆಯವರಿಗೂ ಭಾಷಣ ಮಾಡಲು ಅನುಮತಿ ನೀಡಲಿಲ್ಲ. ಅದಕ್ಕೆ ಬದಲಾಗಿ, ಆ ಸಂದರ್ಭದಲ್ಲಿ ರಾಮನಾಮ ಸಂಕೀರ್ತನೆ ನಡೆಸುವಂತೆ ಆದೇಶವಿತ್ತರು.

### ಅನುಭೂತಿಯ ಆಕರ

ರಾಮನಾಮ ಸಂಕೀರ್ತನೆಯ ಸಮಯದಲ್ಲಿ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅವರು ಭಾವಸಮಾಧಿಯನ್ನು ಪಡೆಯುತ್ತಿದ್ದರು. ಅವರು ಕೊಲ್ಕತ್ತದ ಉದ್ಬೋಧನ ಕಾರ್ಯಾಲಯದಲ್ಲಿ ಒಮ್ಮೆ ತಂಗಿದ್ದರು. ಆಗ ಅವರಿದ್ದ ಚಿಕ್ಕ ಕೊಠಡಿಯಲ್ಲಿಯೇ ರಾಮನಾಮ ಸಂಕೀರ್ತನೆ ನಡೆಯಿತು. ಅಲ್ಲಿ ಕೇವಲ ಆರು ಜನರಿದ್ದರು. ಆ ಸಮಯದಲ್ಲಿ ಸ್ವಾಮೀಜಿಯವರಿಗೆ ಮತ್ತೆ ಮತ್ತೆ ಭಾವಸಮಾಧಿ ಉಂಟಾಗುತ್ತಿತ್ತು; ಶರೀರ ಕಂಪಿಸುತ್ತಿತ್ತು; ಕೆಲವೊಮ್ಮೆ ನಿಷ್ಪಂದವಾಗಿರುತ್ತಿತ್ತು. ಮಧ್ಯೆ ಮಧ್ಯೆ ತಮ್ಮ ಆನಂದಾತಿಶಯವನ್ನು ಅವರು ಮಾತುಗಳಲ್ಲಿ ವ್ಯಕ್ತಪಡಿಸುತ್ತಿದ್ದರು. ಇಡೀ ಕೊಠಡಿಯು ಆಧ್ಯಾತ್ಮಿಕತೆಯ ಪ್ರಕಾಶದಿಂದ ತುಂಬಿಹೋಗಿತ್ತು. ಇದು ಸ್ವಾಮಿ ಬ್ರಹ್ಮಾನಂದರ ಶಿಷ್ಯರಾದ ಸ್ವಾಮಿ ವಿಶ್ವಾನಂದರ ನೆನಪುಗಳಲ್ಲಿ ಉಲ್ಲೇಖವಾಗಿದೆ.

ಸ್ವಾಮಿ ಅಶೇಷಾನಂದರ ಪ್ರಕಾರ ಬಲರಾಮ ಬಸುವಿನ ಮನೆಯಲ್ಲಿ ಮೊದಮೊದಲು ರಾಮನಾಮ ಸಂಕೀರ್ತನೆ ನಡೆಯುತ್ತಿತ್ತು. ಒಮ್ಮೆ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಅವರು ಸಂಕೀರ್ತನೆಗೆ ಆಗಮಿಸಿದರು. ಸ್ವಲ್ಪಕಾಲ ಕಳೆಯುವುದರಲ್ಲಿಯೇ ಅವರು ಆತ್ಮಸಾಮ್ರಾಜ್ಯದಲ್ಲಿ ಲೀನರಾಗಿ ಹೋಗಿದ್ದರು! ಅವರಿಗೆ ಹೊರ ಜಗತ್ತಿನ ಪರಿವೆಯೇ ಇರಲಿಲ್ಲ. ಸುಮಾರು ೪೫ ನಿಮಿಷಗಳ ಭಾವಸಮಾಧಿಯಲ್ಲಿ ಇದ್ದರು. ಬಳಿಕ ಪೂಜ್ಯ ಸ್ವಾಮಿ ಬ್ರಹ್ಮಾನಂದಜಿ ಹೇಳಿದರಂತೆ, ''ರಾಮನಾಮವು ನನ್ನ ಮನಸ್ಸನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ದಿತ್ತು'' ಎಂದು.

ಪೂಜ್ಯ ಬ್ರಹ್ಮಾನಂದಜಿಯವರ ಸಹೋದರ ಸಂನ್ಯಾಸಿಗಳು ಕೂಡ ರಾಮನಾಮ ಸಂಕೀರ್ತನೆಯಲ್ಲಿ ಭಕ್ತಿ ಆದರಗಳಿಂದ ಪಾಲುಗೊಳ್ಳುತ್ತಿದ್ದರು. ಒಮ್ಮೆ ಸ್ವಾಮಿ ಪ್ರೇಮಾನಂದಜಿ ಅವರ ಸಮ್ಮುಖದಲ್ಲಿ (೧೯೧೫, ಡಿಸೆಂಬರ್ ೩) ಬೇಲೂರು ಮಠದ ಅತಿಥಿಗೃಹದಲ್ಲಿ ಸಾಯಂಕಾಲದ ನಂತರ ಹನುಮಾನ್ ಪೂಜೆ, ಆರತಿ ಮತ್ತು ರಾಮನಾಮ ಸಂಕೀರ್ತನೆ ಏರ್ಪಾಡಿಸಲಾಗಿತ್ತು. ಆ ಸಮಯದಲ್ಲಿ ಸ್ವಾಮಿ ಪ್ರೇಮಾನಂದರು ಗಾಯನವನ್ನು ಭಕ್ತಿಭಾವದಿಂದ ಆಲಿಸುತ್ತಿದ್ದರು; ಆಗಾಗ ಭಾವಪೂರಿತರಾಗುತ್ತಿದ್ದರು. ಅವರ ಪವಿತ್ರ ದೇಹವು ಅಶ್ರುಪೂರಿತವಾಗಿ ಹೋಗಿತ್ತು. ಸಂಕೀರ್ತನೆಯ ನಂತರ ಎಲ್ಲರೂ ಹನುಮಂತನಿಗೆ ಮತ್ತು ಸ್ವಾಮಿ

ಪ್ರೇಮಾನಂದರಿಗೆ ಕೂಡ ಪ್ರಣಾಮಗಳನ್ನು ಸಲ್ಲಿಸಿದರು. ಹೀಗೆ ರಾಮಕೃಷ್ಣ ಮಹಾಸಂಘದಲ್ಲಿ ರಾಮನಾಮ ಸಂಕೀರ್ತನೆಯು ಅತ್ಯಂತ ಉನ್ನತವಾದ ಆನುಭಾವಿಕ ಮಹತ್ವವನ್ನು ಹೊಂದಿದೆ.

### ನಾಮ ರಾಮಾಯಣದ ರಚನಕಾರರು ಯಾರು?

ಇಷ್ಟೊಂದು ಪ್ರಸಿದ್ಧಿ ಗಳಿಸಿದ ರಾಮನಾಮ ಸಂಕೀರ್ತನೆಯನ್ನು ರಚಿಸಿದ ಮಹಾನುಭಾವರು ಯಾರು? ಈ ಬಗ್ಗೆ ಎರಡು ಅಭಿಪ್ರಾಯಗಳಿವೆ. ಒಂದು ಅಭಿಪ್ರಾಯದ ಪ್ರಕಾರ ಮಹಾರಾಷ್ಟ್ರದ ಕರಾಡ್ ನಗರದ ಪಂಡಿತ ವಿಠೋಬಾ ಅಣ್ಣಾ ದಫ್ತರದಾರ್ ಅವರು ಈ ನಾಮರಾಮಾಯಣದ ರಚನಕಾರರು. ಇವರ ಜೀವಿತ ಕಾಲ ೧೮೧೩ ರಿಂದ ೧೮೭೩. ಅವರು ರಚಿಸಿದ ನಾಮ ರಾಮಾಯಣದ ಮುದ್ರಿತ ಪ್ರತಿಯನ್ನು ಹೋಲಿಸಿನೋಡಿದಾಗ, ಬಾಲಕಾಂಡವು ಬಹುತೇಕ ಒಂದೇ ರೀತಿ ಇದೆ. ಉಳಿದ ಭಾಗಗಳು, ರಾಮಕೃಷ್ಣ ಮಹಾಸಂಘದಲ್ಲಿ ಪ್ರಸಿದ್ಧವಾಗಿರುವ ಆವೃತ್ತಿಗಿಂತ ಸಂಪೂರ್ಣ ಭಿನ್ನವಾಗಿರುವುದು ಕಂಡುಬರುತ್ತದೆ. ವಿಠೋಬಾ ಅಣ್ಣಾ ಅಥವಾ ವಿಠಲ ಪಂತ್ ಎಂದು ಹೆಸರಾಗಿರುವ ಈ ಮಹಾನುಭಾವರು ಶ್ರೀರಾಮಚಂದ್ರನ ದೊಡ್ಡ ಭಕ್ತರಾಗಿದ್ದರು. ಸಂಸ್ಕೃತ ಭಾಷೆಯಲ್ಲಿ ಉದ್ದಾಮ ಪಂಡಿತರಾಗಿದ್ದ ಅವರು ಸಂಸ್ಕೃತದಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ.

ಇನ್ನೊಂದು ಅಭಿಪ್ರಾಯದ ಪ್ರಕಾರ ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿರುವಾರೂರು ನಿವಾಸಿಗಳಾಗಿದ್ದ ಶ್ರೀ ಲಕ್ಷ್ಮಣಾಚಾರ್ಯರೆಂಬ ಘನಪಂಡಿತರು ನಾಮರಾಮಾಯಣದ ರಚನಕಾರರು. ಅವರು ೧೯೧೯ರಲ್ಲಿ ಸ್ವರ್ಗವಾಸಿಗಳಾದರು. ಈ ಮಾಹಿತಿಯು ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾದ ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶದಲ್ಲಿ ಉಲ್ಲೇಖವಾಗಿದೆ. ಇದಲ್ಲದೆ ಪ್ರೊ.ಪಿ. ಸಾಂಬಮೂರ್ತಿ ಅವರು ಸಂಪಾದಿಸಿರುವ 'Dictionary of South Indian Music and Musicians' ಗ್ರಂಥದ ಐದನೆಯ ಸಂಪುಟದಲ್ಲಿ ಕೂಡ ಈ ಮಾಹಿತಿ ದೊರಕುತ್ತದೆ. ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದವರು ದಿವಂಗತ ಕೆ.ಆರ್. ಮೋಹನ್ ಅವರು. ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರಾಗಿದ್ದ ಅವರು ಈ ಬಗ್ಗೆ ಬರೆದ ಒಂದು ಲೇಖನವು **'ವಿವೇಕಪ್ರಭ'** ಪತ್ರಿಕೆಯ ೨೦೦೬ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಇದಲ್ಲದೆ ಬೆಂಗಳೂರಿನ ಕಾರ್ತಿಕ್ ಪಬ್ಲಿಕೇಷನ್ಸ್ ಎಂಬ ಸಂಸ್ಥೆಯು ೧೬ ಪುಟಗಳ 'ಶ್ರೀರಾಮನಾಮಾಮೃತ' ಎಂಬ ಸಣ್ಣ ಹೊತ್ತಗೆಯನ್ನು ಹೊರತಂದಿದೆ. ಅದರಲ್ಲಿ ಕರ್ನಾಟಕದ ನೂರಾರು ಗ್ರಾಮಗಳಲ್ಲಿ ಮತ್ತು ಪಟ್ಟಣಗಳಲ್ಲಿನ ಭಜನಾಮಂದಿರಗಳಲ್ಲಿ ಹಾಡುವ ಆವೃತ್ತಿಯನ್ನು ಮುದ್ರಿಸಲಾಗಿದೆ. ಈ ಪಠ್ಯವು ರಾಮಕೃಷ್ಣ ಮಹಾಸಂಘದ ಶಾಖೆಯಲ್ಲಿ ಪ್ರಚಲಿತವಾಗಿರುವ ರಾಮನಾಮ ಸಂಕೀರ್ತನೆಯನ್ನು ಬಹುಮಟ್ಟಿಗೆ ಹೋಲುತ್ತದೆ. ಕೇವಲ ಉತ್ತರಕಾಂಡ ಮಾತ್ರ ಪೂರ್ತಿಯಾಗಿ ಭಿನ್ನರೀತಿಯಲ್ಲಿದೆ.

### ರಾಮನಾಮ ಸಂಕೀರ್ತನೆಯ ಬೆಳವಣಿಗೆ

ಮೊದಮೊದಲು **'ಶುದ್ಧ ಬ್ರಹ್ಮ ಪರಾತ್ಪರ ರಾಮ'** ಎಂದು ಆರಂಭವಾಗುವ ನಾಮರಾಮಾಯಣವನ್ನು ಮಾತ್ರ ಹಾಡಲಾಗುತ್ತಿತ್ತು. ಅನಂತರ **ಭಯಹರ ಮಂಗಲ ದಶರಥ ರಾಮ** ಎಂದು ಆರಂಭವಾಗುವ ಪ್ರಾರ್ಥನೆಯೂ ಸೇರ್ಪಡೆಯಾಯಿತು. ಇದಲ್ಲದೆ **ಕನಕಾಂಬರ ಕಮಲಾಸನ** ಎಂದು ಆರಂಭವಾಗುವ ಸ್ತುತಿ ಅಥವಾ ಸ್ತವ ಕೂಡ ಸೇರಿಕೊಂಡಿತು. ''೧೯೨೧ನೇ ಇಸವಿಯಲ್ಲಿ ಸ್ವಾಮಿ ಬ್ರಹ್ಮಾನಂದಜಿ ಮಹಾರಾಜರು ದಕ್ಷಿಣಭಾರತ ಪ್ರವಾಸ ಮಾಡಿದರು. ಈ ಸಮಯದಲ್ಲಿ **ಭಯಹರ ಮಂಗಲ ದಶರಥ ರಾಮ** ಎಂಬ ಸ್ತೋತ್ರವು ಜೋಡಣೆಗೊಂಡು, ರಾಮನಾಮವು ಸದ್ಯ ಚಲಾವಣೆಯಲ್ಲಿರುವ ರೂಪವನ್ನು ಪಡೆದುಕೊಂಡಿತು'' ಎಂದು ಸ್ವಾಮಿ ಪ್ರಭಾನಂದರು ತಮ್ಮ ಒಂದು ಗ್ರಂಥದಲ್ಲಿ ಬರೆಯುತ್ತಾರೆ. ೧೯೨೧ರಲ್ಲಿ ಪ್ರಕಟವಾದ ರಾಮನಾಮ ಸಂಕೀರ್ತನೆಯ ಏಳನೆಯ ಮುದ್ರಣದಲ್ಲಿ ಇದನ್ನು ಸೇರಿಸಲಾಗಿದೆ.

ಪ್ರಾರ್ಥನೆಯ ಕೊನೆಯ ಎರಡು ಸಾಲುಗಳು ಬಹಳ ಪ್ರಸಿದ್ಧವಾದುವು: **'ರಘುಪತಿ ರಾಘವ ರಾಜಾರಾಮ, ಪತಿತ ಪಾವನ ಸೀತಾರಾಮ'** ಇದನ್ನು ರಚಿಸಿದವರು ಯಾರು ಎಂದು ತಿಳಿದುಬಂದಿಲ್ಲ. ಆದರೆ ಇದನ್ನು ಬಳಕೆಗೆ ತಂದವರು ಪ್ರಖ್ಯಾತ ಹಿಂದೂಸ್ತಾನಿ ಸಂಗೀತಜ್ಞರಾದ ಪಂಡಿತ ವಿಷ್ಣು ದಿಗಂಬರ ಪಲೂಸ್ಕರ್ ಅವರು. ಇದು ಯಾವಾಗ ಸೇರ್ಪಡೆಯಾಯಿತು ಎಂಬುದು ತಿಳಿದುಬಂದಿಲ್ಲ.

### ಉಪಸಂಹಾರ

ಭಗವಂತನ ಸ್ಮರಣೆಗೆ ಭಗವನ್ನಾಮ ಸಂಕೀರ್ತನೆ ಅತ್ಯಂತ ಸುಲಭವಾದುದು ಮತ್ತು ಪರಿಣಾಮಕಾರಿಯಾದುದು. ಸ್ತೋತ್ರಗಳಲ್ಲಿ **ವಿಷ್ಣು ಸಹಸ್ರನಾಮ ಸ್ತೋತ್ರ** ಮತ್ತು **ಲಲಿತಾ ಸಹಸ್ರನಾಮ ಸ್ತೋತ್ರ**ಗಳು ಅತ್ಯಂತ ಪ್ರಸಿದ್ಧವಾದುವು. ಅದೇ ರೀತಿ ಸಂಕೀರ್ತನೆಗಳಲ್ಲಿ **ರಾಮನಾಮ ಸಂಕೀರ್ತನೆ** ಬಹಳ ಮುಖ್ಯವಾದುದು. ಸುಮನೋಹರವಾದ ಸಾಹಿತ್ಯ, ಉದಾತ್ತ ಭಕ್ತಿಭಾವಗಳನ್ನು ಹೊಂದಿರುವ ರಾಮನಾಮ ಸಂಕೀರ್ತನೆಯನ್ನು ರಾಮಕೃಷ್ಣ ಮಹಾಸಂಘದಲ್ಲಿ ಪರಿಚಯಿಸಿದ ಶ್ರೇಯಸ್ಸು ಪೂಜ್ಯ ಸ್ವಾಮಿ ಬ್ರಹ್ಮಾನಂದಜಿಯವರಿಗೆ ಸೇರುತ್ತದೆ. ಹೀಗಾಗಿ ಎಲ್ಲ ಭಗವದ್ಭಕ್ತರೂ ಆ ಮಹಾತ್ಮರಿಗೆ ಚಿರಋಣಿಗಳಾಗಿರಬೇಕು.

ಜೈ ಶ್ರೀರಾಮ್ !

*(ಆಧಾರ: 'ಶ್ರೀರಾಮನಾಮ ಸಂಕೀರ್ತನೆಯ ರೋಚಕ ಸಾಹಿತ್ಯ', ಸ್ವಾಮಿ ವಿದೇಹಾತ್ಮಾನಂದ, **ವಿವೇಕಪ್ರಭ** (ಏಪ್ರಿಲ್ – ಜುಲೈ ೨೦೧೩)*

# ಕಾಳೀಕೀರ್ತನೆ : ಒಂದು ಪರಿಚಯ



ಭವತಾರಿಣೀ ಕಾಳಿ, ದಕ್ಷಿಣೇಶ್ವರ

**ಸ್ವಾಮಿ ಶಾಂತಿವ್ರತಾನಂದ**

ಬಂಗಾಳದಲ್ಲಿ ಮಾತ್ರ ಆರಾಧನೆ, ಅದರಲ್ಲೂ ಕಾಳೀ ಆರಾಧನೆ ಅತ್ಯಂತ ಪ್ರಧಾನವಾದ ಧಾರ್ಮಿಕ ಆಚರಣೆಯಾಗಿದೆ. ಇಡೀ ರಾತ್ರಿ ನಡೆಯುವ ಕಾಳೀಪೂಜೆಯ ಸಂದರ್ಭದಲ್ಲಿ ಭಕ್ತರು ಕಾಳೀಮಾತೆಯನ್ನು ಭಕ್ತಿಪೂರ್ವಕ ಸಾಮೂಹಿಕವಾಗಿ ಹಾಡುತ್ತಾರೆ. ಧ್ರುಪದ್ ಶೈಲಿಯ ಶಾಸ್ತ್ರೀಯ ಸಂಗೀತದ ಹಿನ್ನೆಲೆಯಲ್ಲಿ ರಚಿತವಾದ ಹಾಡುಗಳನ್ನು ಪಖವಾಜ್, ಕರತಾಳಗಳೊಂದಿಗೆ ಹಾಡುವಾಗ ಕಾಳೀ ಆರಾಧನೆಯ ರುದ್ರ-ರಮಣೀಯ, ಭವ್ಯ ಸನ್ನಿವೇಶವೊಂದರ ನಿರ್ಮಾಣವಾಗುತ್ತದೆ. ಈ ಕಾಳೀಕೀರ್ತನೆಗಳನ್ನು ರಾಮಕೃಷ್ಣ ಮಹಾಸಂಘದ ಕೇಂದ್ರಗಳಲ್ಲಿ ನಡೆಯುವ ಕಾಳೀಪೂಜೆಗಳಲ್ಲೂ ಹಾಡಲಾಗುತ್ತಿದೆ. ಈ ಕುರಿತು ವಿವರಿಸಿರುವ ಲೇಖಕರು ಉತ್ತಮ ವಾಗ್ಮಿಗಳು ಮತ್ತು ಲೇಖಕರು; ಪ್ರಸ್ತುತ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಂಗಸಂಸ್ಥೆ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

"ಸಂಗೀತವು ಒಂದು ಉನ್ನತವಾದ ಕಲೆ, ಅದು ಅರ್ಥವಾದವರಿಗೆ ಒಂದು ಉತ್ಕೃಷ್ಟವಾದ ಪೂಜೆ" ಎಂದು ಸ್ವಾಮಿ ವಿವೇಕಾನಂದರು ಸಂಗೀತವನ್ನು ಕುರಿತು ಹೇಳುತ್ತಾರೆ. ಸಂಗೀತವು ಗೀತ, ವಾದ್ಯ ಮತ್ತು ನೃತ್ಯಗಳನ್ನು ಒಳಗೊಂಡಿದೆ. ಶ್ರೀಮನ್ನಾರಾಯಣನು ನಾರದನಿಗೆ ಸಂಗೀತವನ್ನು ಕುರಿತು ಹೀಗೆ ಹೇಳುತ್ತಾನೆ:

**ನಾಹಂ ತಿಷ್ಠಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ ।**
**ಮದ್ಭಕ್ತಾಃ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥**

"ಎಲೈ ನಾರದನೇ, ನಾನು ವೈಕುಂಠದಲ್ಲಿ ವಾಸಿಸುವುದಿಲ್ಲ; ಯೋಗಿಗಳ ಹೃದಯದಲ್ಲಲ್ಲ. ನನ್ನ ಭಕ್ತರು ಎಲ್ಲಿ ಹಾಡುತ್ತಿರುತ್ತಾರೋ ಅಲ್ಲಿ ನಾನು ನೆಲೆಸಿರುತ್ತೇನೆ." ಇಲ್ಲಿ ನಮಗೆ ಭಕ್ತನ ಶ್ರೇಷ್ಠತೆ ಮತ್ತು ಕೀರ್ತನೆ, ಭಜನೆಗಳ ಮಹತ್ವವು ತಿಳಿಯುತ್ತದೆ.

ಮಾನವನು ಭಾವುಕ ಜೀವಿ. ಸಾಮಾನ್ಯವಾಗಿ ಅವನು ಇಂದ್ರಿಯ ಮತ್ತು ಭಾವನೆಗಳ ಸ್ತರದಲ್ಲಿ ನೆಲೆಸಿರುತ್ತಾನೆ. ಆದ್ದರಿಂದ ಸಂಗೀತವು ಅವನಿಗೆ ಉತ್ತಮವಾದ ನೆರವನ್ನು ನೀಡಲು ಸಮರ್ಥವಾಗಿದೆ. ಇದರಿಂದ ಅವನ ಭಾವನೆಗಳು ಪರಿಶುದ್ಧವಾಗುತ್ತವೆ. ಅವುಗಳಿಗೆ ಒಂದು ಉದಾತ್ತವಾದ ನೆಲೆಯನ್ನು ಸಂಗೀತವು ನೀಡುತ್ತದೆ. ಲೌಕಿಕ ಪ್ರಪಂಚದಲ್ಲಿ ಅದು ಮನೋರಂಜನೆಯನ್ನು, ಕೆಲವೊಮ್ಮೆ ಮನಸ್ಸಿಗೆ ಮುದವನ್ನು ನೀಡುವುದನ್ನು ನಾವು ಕಾಣಬಹುದು. ಆದರೆ ಅಲೌಕಿಕ ಜಗತ್ತಿನಲ್ಲಿ ಅದೊಂದು ಅದ್ಭುತವಾದ ಸಾಧನೆಯೇ ಸರಿ. ಸಾಮಾನ್ಯ ಮಾನವನನ್ನು ಅಸಾಮಾನ್ಯನನ್ನಾಗಿ ಮಾಡುವ ಸಾಮರ್ಥ್ಯವನ್ನು ಸಂಗೀತವು ಹೊಂದಿದೆ. ಮೋಕ್ಷವನ್ನು, ಭಗವದ್ದರ್ಶನವನ್ನು ನೀಡುವ ಶಕ್ತಿ ಸಂಗೀತಕ್ಕಿದೆ ಎಂಬುದು ನಮಗೆಲ್ಲ ತಿಳಿದಿರುವ ವಿಷಯ.

ಭಾರತದಲ್ಲಿ ಮುಖ್ಯವಾಗಿ ಹಿಂದೂಸ್ತಾನಿ ಮತ್ತು ಕರ್ನಾಟಕ ಶಾಸ್ತ್ರೀಯ ಸಂಗೀತ ಎಂಬ ಎರಡು ಮುಖ್ಯ ಪ್ರಭೇದಗಳನ್ನು ನಾವು ಕಾಣಬಹುದು. ಆದರೆ ಜಾನಪದ ಶೈಲಿ ಮತ್ತು ಹಲವಾರು ಶೈಲಿಗಳು ಆಯಾ ಪ್ರದೇಶಕ್ಕೆ ಅನುಗುಣವಾಗಿ ಹೊರಹೊಮ್ಮಿವೆ. ಅವು ಕೂಡ ಯಾವುದೇ ಶಾಸ್ತ್ರೀಯ ಸಂಗೀತಕ್ಕಿಂತ ಕಡಿಮೆಯಿಲ್ಲ ಎನ್ನಬಹುದು. ಬಂಗಾಳ ರಾಜ್ಯ ಕಲಾಕಾರರ ನಾಡು. ಅಲ್ಲಿ ಸಂಗೀತ, ಚಿತ್ರಕಲೆ, ಮುಂತಾದವು ಪ್ರತಿಯೊಬ್ಬನಲ್ಲಿ ಹಾಸುಹೊಕ್ಕಾಗಿದೆ. ಪ್ರತಿಯೊಬ್ಬ ಬಂಗಾಳಿಯು ಒಂದಲ್ಲ ಒಂದು ಕಲೆಯನ್ನು ತಿಳಿದಿರುತ್ತಾನೆ ಎಂದರೆ ಅತಿಶಯೋಕ್ತಿಯಾಗದು.

ಅಲ್ಲಿ ಕಾಳೀಕೀರ್ತನೆ ಅಥವಾ ಶ್ಯಾಮಾ ಸಂಗೀತ, ವೈಷ್ಣವ ಕೀರ್ತನೆ ಮತ್ತು ಬಾವುಲ್ ಸಂಗೀತ ಎನ್ನುವ ಹಲವಾರು ಪ್ರಕಾರಗಳಿವೆ.

### ಕೀರ್ತನೆ

ಕೀರ್ತನೆ ಎಂಬ ಶಬ್ದವು 'ಕೀರ್ತ್' ಎಂಬ ಧಾತುವಿನಿಂದ ಬಂದಿದೆ. ಸಾಮಾನ್ಯವಾಗಿ ದೇವ-ದೇವಿಯರ ಗುಣಗಳ ವರ್ಣನೆ, ಲೀಲೆಯ ವರ್ಣನೆ, ಸ್ವರೂಪ ವರ್ಣನೆ ಮತ್ತು ಅವರನ್ನು ನೆನೆಯುವುದನ್ನು ಕೀರ್ತನೆ ಎಂದು ಕರೆಯುತ್ತಾರೆ. ಅಂದರೆ ಸ್ತುತಿ, ಸ್ತೋತ್ರ ಎಂದರ್ಥ. ಇದರ ಮೂಲವನ್ನು ನಾವು ವೇದಸಂಹಿತೆ, ಬ್ರಾಹ್ಮಣ, ಮತ್ತು ವೇದಾಂಗ, ಸೂತ್ರಗಳಲ್ಲೂ ಕಾಣಬಹುದು. ಭಕ್ತಿಶಾಸ್ತ್ರದ ಪ್ರಕಾರ ನವವಿಧ ಭಕ್ತಿಮಾರ್ಗದಲ್ಲಿ ಕೀರ್ತನೆಯೂ ಒಂದು ವಿಧ. 'ಕೀರ್ತನೆ' ಪದವನ್ನು ಹರಿಕಥೆ ಎಂಬ ಅರ್ಥದಲ್ಲಿ ದಾಸರು ಉಪಯೋಗಿಸಿರುವುದನ್ನು ನಾವು ಗಮನಿಸಬಹುದು. ಇದು ಭಾವಪ್ರಧಾನ.

### ಎರಡು ರೀತಿಯ ಕೀರ್ತನೆ

**ನಾಮಕೀರ್ತನೆ:** ಇದು ಭಗವಂತನ ವಿವಿಧ ಹೆಸರುಗಳ, ಗುಣಗಳ ಸ್ತುತಿಯನ್ನು ಒಳಗೊಂಡಿರುತ್ತದೆ.

**ಲೀಲಾಕೀರ್ತನೆ:** ಇಲ್ಲಿ ಭಗವಂತನ ರೂಪ, ಮುಖ್ಯವಾಗಿ ಆತನ ಜೀವನದ ಘಟನೆಗಳನ್ನು, ಚರಿತ್ರೆಯನ್ನು ವಿವರಿಸಲಾಗುತ್ತದೆ. ಇದನ್ನು ರಸಕೀರ್ತನೆ ಎಂದೂ ಕರೆಯುತ್ತಾರೆ.

### ಇತಿಹಾಸ

ಮೊದಲಿಗೆ ದಕ್ಷಿಣ ಭಾರತದಲ್ಲಿ ವೈಷ್ಣವ ಸಂತರು ಮತ್ತು ಶೈವ ಸಂತರು ಭಕ್ತಿಯ ಚಳುವಳಿಯನ್ನು ಆರಂಭಿಸಿದರು. ಅದು ಅದರ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ ಇಡೀ ಭಾರತವನ್ನು ವ್ಯಾಪಿಸಿತು. ಭಾರತದ ಅನೇಕ ಸಾಧು-ಸಂತರು, ಮಹಾತ್ಮರು, ಭಕ್ತರು ಕೀರ್ತನೆಗಳನ್ನು ರಚಿಸಿ ಅದನ್ನು ಶ್ರೀಮಂತಗೊಳಿಸಿದ್ದಾರೆ. ಅದು ಭಕ್ತಿಮಾರ್ಗದ ಪ್ರಮುಖ ಸಾಧನ. ಅಲ್ಲದೆ ಸಾಮಾನ್ಯ ಜನರು ಸುಲಭವಾಗಿ ಗಹನವಾದ ತತ್ತ್ವಗಳನ್ನು ಕೀರ್ತನೆಗಳ ಮೂಲಕ ಅರಿಯಬಹುದಾಗಿದೆ. ಭಗವಂತನನ್ನು ಸುಲಭವಾಗಿ ಕೀರ್ತನೆಗಳ ಮೂಲಕ ಪಡೆಯಬಹುದಾಗಿದೆ. ಆದರೆ ಕೀರ್ತನೆಯ ಇತಿಹಾಸವು ನಮಗೆ ಸರಿಯಾಗಿ ಸಿಗುವುದಿಲ್ಲ. ಅದನ್ನು ಮೂಲತಃ ಯಾರು ಪ್ರಾರಂಭಿಸಿದರು, ಯಾವಾಗ ಮತ್ತು ಎಲ್ಲಿ ಪ್ರಾರಂಭವಾಯಿತು ಎಂದು ನಿಖರವಾಗಿ ಹೇಳಲು ಸಾಧ್ಯವಾಗುತ್ತಿಲ್ಲ. ಸುಮಾರು ೧೦೦೦ ವರ್ಷಗಳ ಹಿಂದೆ ಬಂಗಾಳ ಪ್ರಾಂತ್ಯದಲ್ಲಿ ಬೌದ್ಧಧರ್ಮವು ತನ್ನ ಅವನತಿಯನ್ನು ಕಂಡಿತು. ಆ ಸಮಯದಲ್ಲಿ ಬರುವ ಬೌದ್ಧ ಆಚಾರ್ಯರಾದ ಲ್ಯೂಪಾಡ್, ಮುಂತಾದವರು ಕೀರ್ತನೆಗಳನ್ನು ಹಾಡುತ್ತಿದ್ದರು ಎಂಬ ಉಲ್ಲೇಖವು ನಮಗೆ ತಿಳಿದು ಬರುತ್ತದೆ. ಭಿಕ್ಷು ಮತ್ತು ಭಿಕ್ಷುಣಿಗಳು ವಿವಿಧ ಕೀರ್ತನೆಗಳನ್ನು ಹಾಡುತ್ತಿದ್ದರು ಎಂಬ ಉಲ್ಲೇಖವೂ ಇದೆ. ಕ್ರಿ.ಶ. ೯೦೦– ೧೨೮೦ರಲ್ಲಿ ಚೈನಾ ದೇಶದ ಕೋಯ್ಯಿ ಫಾಂಗ್ ಐರನ್ ದೇಗುಲದಲ್ಲಿ (Koi Fong Iron Temple) ಕಂಡುಬರುವ ಚಿತ್ರಗಳು ಈ ವಿಷಯವನ್ನು ನಮಗೆ ಖಚಿತಪಡಿಸುತ್ತವೆ. ಸುಮಾರು ಹನ್ನೆರಡನೇ ಶತಮಾನದಲ್ಲಿ ಜಯದೇವ ಕವಿಯು ಇದಕ್ಕೆ ಮರುಜೀವವನ್ನು ನೀಡಿದನು ಎಂದು ಕೆಲವರ ಅಭಿಮತ. ಭಾರತದಲ್ಲಿ ಕೀರ್ತನೆಯ ಶೈಲಿಗಳು ಆಯಾ ಪ್ರಾಂತ್ಯಕ್ಕೆ ತಕ್ಕಂತೆ ಅನೇಕ ಹೆಸರುಗಳನ್ನು ಮತ್ತು ರೂಪಗಳನ್ನು ಪಡೆದುಕೊಂಡಿವೆ. ಉದಾಹರಣೆಗೆ ಮಹಾರಾಷ್ಟ್ರದಲ್ಲಿ ಕೀರ್ತನೆಗಳನ್ನು ಅಭಂಗ, ಸಮಾಜ್ ಗಾಯನ್, ಹವೇಲಿ ಸಂಗೀತ ಎಂದು ಕರೆಯುತ್ತಾರೆ. ಅಸ್ಸಾಂ ಮತ್ತು ಈಶಾನ್ಯ ಭಾರತದಲ್ಲಿ 'ಸತ್ರ' ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಕೀರ್ತನೆ ಎಂದರೆ ವೈಷ್ಣವ ಕೀರ್ತನೆ ಎಂದು ಹಲವರ ಅಭಿಪ್ರಾಯ. ಆದರೆ ಕೀರ್ತನೆ ಪರಂಪರೆಯು ಮೊದಲಿಗೆ ವೈಷ್ಣವ ಮತದಲ್ಲಿ ಪ್ರಾರಂಭವಾಗಿ, ಶೈವ ಮತ್ತು ಶಾಕ್ತ ಮತಕ್ಕೂ ಅದು ಹಬ್ಬಿದೆ.

ಕರ್ನಾಟಕ ಸಂಗೀತದ ಪ್ರಕಾರ, ಸಂಗೀತ ಪ್ರಬಂಧಗಳಲ್ಲಿ ಕೀರ್ತನೆ ಅತ್ಯಂತ ಜನಪ್ರಿಯವಾದುದು. ತಾಳ್ಳಪಾಕಂ ಅನ್ನಮಾಚಾರ್ಯರ ಮತ್ತು ನಾರಾಯಣತೀರ್ಥರ ಕೃತಿಗಳಿಂದ ಈ ಮಾತು ಸ್ಪಷ್ಟವಾಗುತ್ತದೆ. ಕೀರ್ತನೆಯಲ್ಲಿ ಪಲ್ಲವಿ, ಅನುಪಲ್ಲವಿ ಮತ್ತು ಚರಣ (ನುಡಿ) ಎಂಬ ತ್ರಿಧಾತುಗಳಿರುತ್ತವೆ. ಕೀರ್ತನೆಗಳಲ್ಲಿ ನಿರ್ದಿಷ್ಟವಾದ ಕ್ರಮ ಮತ್ತು ರಚನೆಯನ್ನು ನಾವು ಕಾಣಬಹುದು. ಅಲ್ಲದೆ ರಚನೆಕಾರರು ತಿಳಿಸಿರುವ ನಿರ್ದಿಷ್ಟವಾದ ರಾಗ ಮತ್ತು ತಾಳಗಳಲ್ಲೇ ಇದನ್ನು ಹಾಡಲಾಗುತ್ತದೆ. ಪದಗಳು, ಭಜನೆ ಅಥವಾ ಹಾಡುಗಳಲ್ಲಿ ಹಾಡುಗಾರನಿಗೆ ಸ್ವಾತಂತ್ರ್ಯವಿರುತ್ತದೆ. ದಾಸರು ಪಲ್ಲವಿಯಲ್ಲಿ ತಾವು ಕಂಡುಕೊಂಡಂಥ ಸತ್ಯವನ್ನು ಪ್ರತಿಪಾದಿಸುತ್ತಾರೆ. ಅದೇ ಅನುಪಲ್ಲವಿಯಲ್ಲಿ ಮುಂದುವರೆದು ನುಡಿಗಳಿಂದ ಪೋಷಿತವಾಗುತ್ತದೆ. ದಕ್ಷಿಣ ಭಾರತದಲ್ಲಿ ಕೀರ್ತನೆಗಳು ಸುಮಾರು ೧೫ನೇ ಶತಮಾನದಲ್ಲಿ ಪ್ರಾರಂಭವಾಗಿ ೧೮ನೇ ಶತಮಾನದವರೆಗೂ ಅನೇಕ ಬೆಳವಣಿಗೆಗಳನ್ನು ಕಂಡಿದೆ. ಆದರೆ ೧೨ನೇ ಶತಮಾನದಲ್ಲಿ ಬಂದ ಶಿವಶರಣರು ಕೀರ್ತನೆಯ ಲಕ್ಷಣಕ್ಕೆ ಹೊಂದಿಕೊಳ್ಳವಂತಹ ಅನೇಕ ರಚನೆಗಳನ್ನು ಮಾಡಿದ್ದಾರೆ. ಸಾಮಾನ್ಯವಾಗಿ ಅಲ್ಲಿ ನಾವು ಅನುಪಲ್ಲವಿಯನ್ನು ಕಾಣದಿರುವುದರಿಂದ ಅದನ್ನು ಹಾಡು, ಗೀತೆ ಎಂದು ಕರೆಯುತ್ತೇವೆ. ಇಂದಿನ ದಿನಗಳಲ್ಲಿ ತ್ಯಾಗರಾಜರೇ ಮೊದಲಾದ ಸಂಗೀತ ವಿದ್ವಾಂಸರ ಕೃತಿಗಳನ್ನೂ ಕೀರ್ತನೆ ಎಂದು ಕರೆಯುವುದು ಪ್ರಚಲಿತವಾಗಿದೆ. ಆದರೆ ಸಂಗೀತಶಾಸ್ತ್ರದ ಪ್ರಕಾರ 'ಕೃತಿ'ಗೂ 'ಕೀರ್ತನೆ'ಗೂ ವ್ಯತ್ಯಾಸವಿದೆ. ೧೫ನೇ ಶತಮಾನದಲ್ಲಿ ಕರ್ನಾಟಕ ಸಂಗೀತದ ಶೈಲಿಯಲ್ಲಿ ಅನ್ನಮಾಚಾರ್ಯರು ಸಂಕೀರ್ತನೆಯನ್ನು ರಚಿಸಿದರು. ತಿರುಪತಿಯ ವೆಂಕಟೇಶ್ವರನನ್ನು ಕುರಿತು ಅವರು ಅನೇಕ ಕೀರ್ತನೆಗಳನ್ನು ರಚಿಸಿದರು. ಇವರು ತೆಲುಗು ಮತ್ತು ಸಂಸ್ಕೃತ ಭಾಷೆಯಲ್ಲಿ ಸುಮಾರು ೩೨೦೦೦ ಕೀರ್ತನೆಗಳನ್ನು ರಚಿಸಿದ್ದಾರೆ.

ವಾರ್ಕರೀ ಸಂಪ್ರದಾಯದ ನಾಮದೇವ ತನ್ನ ಆರಾಧ್ಯ ದೈವವಾದ ವಿಠೋಬಾನನ್ನು ಸ್ತುತಿಸಲು ಕೀರ್ತನ ಶೈಲಿಯನ್ನು ಅನುಸರಿಸಿದನು. ನಂತರ ಮಹಾರಾಷ್ಟ್ರದಲ್ಲಿ ಕೀರ್ತನೆ ಪರಂಪರೆಯು ಗಾನ, ನೃತ್ಯ, ಕಥಾಶ್ರವಣಗಳನ್ನು ಒಳಗೊಂಡಿತು. ಅಲ್ಲಿನ ಏಳು ಪ್ರಸಿದ್ಧ ಸಂತರಾದ ನಿವೃತ್ತಿನಾಥ, ಧ್ಯಾನೇಶ್ವರ, ಸೋಪಾನದೇವ, ಮುಕ್ತಾಬಾಯಿ, ಏಕನಾಥ, ನಾಮದೇವ ಮತ್ತು ತುಕಾರಾಮ ಅವರುಗಳು ರಚಿಸಿರುವ ಪದ್ಯ ಅಥವಾ ಹಾಡುಗಳನ್ನು ಉಪಯೋಗಿಸಿ ಕೀರ್ತನೆಗಳನ್ನು ಹಾಡುತ್ತಾರೆ. ಸಾಂಗ್ಲಿಯ ಕೀರ್ತನ್ ಕುಲ್, ಮುಂಬೈನ ದಾದರಾದಲ್ಲಿರುವ ಅಖಿಲ ಭಾರತೀಯ ಕೀರ್ತನ ಸಂಸ್ಥಾ, ಪುಣೆಯ ನಾರದ ಮಂದಿರ ಮೊದಲಾದ ಕಡೆಗಳಲ್ಲಿ ತರಬೇತಿಯನ್ನು ನೀಡುತ್ತಾರೆ.

೧೬ನೇ ಶತಮಾನದಲ್ಲಿ ಚೈತನ್ಯ ಮಹಾಪ್ರಭು ಶ್ರೀಕೃಷ್ಣನ ಕೀರ್ತನೆಗಳನ್ನು ರಚಿಸಿ ಬಂಗಾಳದಲ್ಲಿ ವಿಖ್ಯಾತಗೊಳಿಸಿದರು. ಆಗ ಬಂಗಾಳದಲ್ಲಿ ಒಂದು ಭಕ್ತಿಯ ಮಹಾ ಆಂದೋಲನವೇ ನಡೆದುಹೋಯಿತು. ಬಂಗಾಳದಲ್ಲಿ ನಾವು ಮುಖ್ಯವಾಗಿ ಮೂರು ರೀತಿಯ ಕೀರ್ತನೆಗಳನ್ನು ಕಾಣಬಹುದು. ಪಾಲಾ ಕೀರ್ತನೆ, ಕಾಳೀಕೀರ್ತನೆ ಮತ್ತು ನಾಮಕೀರ್ತನೆ. ಪಾಲಾ ಕೀರ್ತನೆಯು ಅತ್ಯಂತ ಪ್ರಾಚೀನವಾದುದು. ಅದನ್ನು ವೈಷ್ಣವ ಮತದಲ್ಲಿ ಕಾಣಬಹುದು. ಇದು ಶ್ರೀಕೃಷ್ಣನ ಮತ್ತು ಅವನ ಜೀವನ ಘಟನೆಗಳನ್ನು ಮುಖ್ಯ ವಿಷಯವನ್ನಾಗಿ ಮಾಡಿಕೊಂಡಿದೆ. ಕಾಳೀಕೀರ್ತನೆ ಅಥವಾ ಶ್ಯಾಮಾ ಸಂಗೀತವು ಕಾಳಿಯನ್ನು ಕುರಿತ ರಚನೆಗಳು. ನಾಮಕೀರ್ತನೆಯು ವಿವಿಧ ದೇವ-ದೇವಿಯರ ಕುರಿತ ರಚನೆಗಳಿಂದ ಕೂಡಿದೆ. ಅದೇ ಸಮಯದಲ್ಲಿ ಶಂಕರ ದೇವನು ಅಸ್ಸಾಂನಲ್ಲಿ ಅದ್ವೈತ ತತ್ತ್ವವನ್ನು ಭಾಗವತ ಪುರಾಣದ ಚೌಕಟ್ಟಿನಲ್ಲಿ ಇರಿಸಿ, ನೂತನ ವೈಷ್ಣವ ಕೀರ್ತನ ಪರಂಪರೆಯನ್ನೇ ಸೃಷ್ಟಿಸಿದನು.

ಸಿಖ್ ಧರ್ಮದಲ್ಲಿ ಅವರ ಮುಖ್ಯ ಗ್ರಂಥವಾದ 'ಗುರು ಗ್ರಂಥ ಸಾಹೇಬ್'ನ್ನು ಕೀರ್ತನೆ ಶೈಲಿಗಳಲ್ಲಿ ಹಾಡುವ ಸಂಪ್ರದಾಯವಿದೆ. ಅದನ್ನು 'ಶಬದ್ ಕೀರ್ತನೆ' ಎಂದು ಕರೆಯುತ್ತಾರೆ.

### ಶ್ಯಾಮಾ ಸಂಗೀತ ಅಥವಾ ಕಾಳೀ ಕೀರ್ತನೆ

ಇದು ಶಕ್ತಿ ಗೀತೆ. ಅಂದರೆ ಕಾಳಿಯ ರೂಪ, ಗುಣ, ಮಹಿಮೆಗಳ ವರ್ಣನೆಯನ್ನು ಒಳಗೊಂಡಿದೆ. ಜೊತೆಗೆ ಸಾಧಕರ, ಸಂತರ, ಕವಿಗಳ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸಿರುವುದನ್ನೂ ನಾವು ಇಲ್ಲಿ ಕಾಣಬಹುದು. ಭಕ್ತನು ತನ್ನ ತಾಯಿಯ ಬಳಿ ಮನಸ್ಸು ಬಿಚ್ಚಿ ಮಾತಾನಾಡುವ ರೀತಿಯ ಕೀರ್ತನೆಗಳನ್ನು ನಾವು ಕಾಣಬಹುದು. ಆದ್ದರಿಂದ ಇದು ಜನರಿಗೆ ಅತ್ಯಂತ ಹತ್ತಿರವಾಯಿತು ಎಂದು ಕೆಲವರ ಅಭಿಪ್ರಾಯ. ಶ್ಯಾಮಾ ಸಂಗೀತದಲ್ಲಿ ಎರಡು ರೀತಿಯ ಹಾಡುಗಳನ್ನು ಗಮನಿಸಬಹುದು.

೧. **ಕಾಳೀ ಕೀರ್ತನೆ:** ಇದು ಕಾಳಿಯ ಗುಣ, ಸ್ವರೂಪದ ವರ್ಣನೆಯನ್ನು ಮಾಡುತ್ತದೆ. ತಂತ್ರಶಾಸ್ತ್ರದ ತತ್ತ್ವಗಳು, ವೇದಾಂತ ತತ್ತ್ವಗಳು, ಸಾಧನೆ, ವೈರಾಗ್ಯ, ಪ್ರಪಂಚದ ಸ್ವರೂಪ, ಮೋಕ್ಷವನ್ನು ಕುರಿತ ವಿಚಾರಗಳನ್ನು ಮುಖ್ಯವಾಗಿ ಇಲ್ಲಿ ಕಾಣಬಹುದು.

೨. **ಆಗಮನಿ ಹಾಡುಗಳು:** ಅಸಿತ್ ಕುಮಾರ ವಂದ್ಯೋಪಾಧ್ಯಾಯರು ಹೇಳುತ್ತಾರೆ, 'ಆಗಮನಿ ಹಾಡುಗಳು ಅಂದರೆ ಪುರಾಣದ ಪ್ರಕಾರ ಪಾರ್ವತಿ (ಉಮೆ)ಯು ದಸರಾ ಹಬ್ಬದ ಸಮಯದಲ್ಲಿ ತನ್ನ ತವರುಮನೆಗೆ ಬರುತ್ತಾಳೆ. ಆಗ ಅವಳ ತಾಯಿ ಉಮೆಯ ಬರವಿಗಾಗಿ ಕಾದು ಕುಳಿತಿರುತ್ತಾಳೆ. ಪುರಾಣದ ಆಧಾರದ ಮೇಲೆ ರಚಿತವಾದ ಈ ಹಾಡುಗಳು ಕಾಳೀಕೀರ್ತನೆಗಳಲ್ಲಿ ಒಳಗೊಂಡಿಲ್ಲ.'

### ಕಾಳೀಕೀರ್ತನೆಯ ಸ್ವರೂಪ

ಎಲ್ಲ ಕೀರ್ತನೆಗಳಲ್ಲೂ ಭಕ್ತಿಯೇ ಮುಖ್ಯ ವಸ್ತು. ಕೀರ್ತನೆಗೆ ವಸ್ತುವಾಗದ ವಿಷಯವೇ ಇಲ್ಲ. ಪ್ರಕೃತಿಯಲ್ಲಿ ನಡೆಯುವ ಒಂದು ಸಾಮಾನ್ಯ ವಿಷಯ ಅಥವಾ ಘಟನೆಯಿಂದ ಹಿಡಿದು ಸಚ್ಚಿದಾನಂದ ಭಗವಂತನವರೆಗೆ ಇಲ್ಲಿ ಚರ್ಚಿಸಲಾಗಿದೆ. ಬದುಕಿನ ನೈಜಚಿತ್ರಣವನ್ನು ನಾವು ಇಲ್ಲಿ ಕಾಣಬಹುದು. ಸಮಾಜದಲ್ಲಿರುವ ಅನಿಷ್ಟಗಳು, ನಂಬಿಕೆಗಳು ಹಾಗೂ ಅದರ ತಳಪಾಯ ಕುರಿತು ಇಲ್ಲಿ ಚರ್ಚಿಸಲಾಗಿದೆ. ಸಾಧಕನು ಪ್ರಪಂಚದ ಆಗುಹೋಗುಗಳನ್ನು ಅಚ್ಚರಿಯೆಂಬಂತೆ ವ್ಯಕ್ತಪಡಿಸುತ್ತಾನೆ. ಇಲ್ಲಿ ಕವಿಯು ಜನರಿಗೆ ಕಿವಿ ಹಿಂಡಿ ಕಿವಿಮಾತುಗಳನ್ನು ಹೇಳುವುದನ್ನು ನಾವು ಕಾಣಬಹುದು. ದೇವಿಯ ಸ್ವರೂಪ, ಅವಳು ಸಾಕಾರಳೊ, ನಿರಾಕಾರಳೊ, ಅವಳ ಜನ್ಮರಹಸ್ಯ, ಇತ್ಯಾದಿಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಕಾಳಿಯು ಪ್ರಪಂಚದ ಸೃಷ್ಟಿ-ಸ್ಥಿತಿ-ಪ್ರಳಯದ ಕರ್ತೃ ಎಂದು ಇಲ್ಲಿ ವರ್ಣಿಸಿದೆ. ಮುಖ್ಯವಾಗಿ ಸಾಧಕನು ತನ್ನ ತಾಯಿಯ ಬಳಿ ಮನ ಬಿಚ್ಚಿ ಮಾತನಾಡುವಂತೆ, ಕವಿಯು ತನ್ನ ಎಲ್ಲ ಭಾವನೆಗಳನ್ನು ಇಲ್ಲಿ ಹೊರಹಾಕಿದ್ದಾನೆ. ಅವನ ಕಷ್ಟ-ಸುಖಗಳನ್ನು ತಿಳಿಸುತ್ತಾನೆ. ಅದಕ್ಕೆ ಪರಿಹಾರೋಪಾಯವನ್ನು ಕೇಳುತ್ತಾನೆ. ಅಲ್ಲದೆ ಕಾಳಿಯನ್ನು 'ತನ್ನನ್ನು ಹೊರತುಪಡಿಸಿ ನಿನಗೆ ಭಕ್ತರಾರೂ ಇಲ್ಲ, ನೀನು ನನ್ನನ್ನು ಕಾಪಾಡದಿದ್ದರೆ ನಿನ್ನ ಹೆಸರನ್ನು ಇನ್ನು ಮುಂದೆ ಹೇಳಲು ಯಾರೂ ಇರುವುದಿಲ್ಲ' ಎಂದು ದೇವಿಗೇ ಹೆದರಿಸುತ್ತಾನೆ. ತನ್ನನ್ನು ಭವಸಾಗರದಿಂದ ಪಾರು ಮಾಡಲು ಪ್ರಾರ್ಥಿಸುತ್ತಾನೆ. ಷಟ್ಚಕ್ರಗಳನ್ನು ಕುರಿತು ಹೇಳುತ್ತಾ ತಾಯಿಯು ಅದರ ಅಧಿಷ್ಠಾತೃ ಮತ್ತು ಅವಳ ಕೃಪೆಯಿಂದ ಕುಂಡಲಿನೀ ಶಕ್ತಿಯು ಜಾಗೃತವಾಗುವ ವಿಚಾರಗಳನ್ನು ಇಲ್ಲಿ ಕಾಣಬಹುದು. ಪುರುಷ ಪ್ರಯತ್ನ ಮತ್ತು ದೇವರ ಕೃಪೆಯ ವಿಚಾರವಾಗಿ ಇಲ್ಲಿ ಮಾತಾನಾಡಲಾಗಿದೆ. ಆತ್ಮನಿವೇದನೆ, ವೈರಾಗ್ಯ, ನಾಮಜಪ ಮಾಹಾತ್ಮ್ಯವನ್ನು ಇಲ್ಲಿ ಸುಂದರವಾಗಿ ತಿಳಿಸಲಾಗಿದೆ. ದ್ವೈತದಿಂದ ಅದ್ವೈತದವರೆಗಿನ ತತ್ತ್ವಗಳನ್ನು ಇಲ್ಲಿ ಚರ್ಚಿಸಲಾಗಿದೆ. ನಾವು ವಾಸಿಸುತ್ತಿರುವ ಜಗತ್ತು ಒಂದು ಹುಚ್ಚರ ಸಂತೆ, ಅಥವಾ ಮಾಯಾಜಾಲ, ಆಟದ ಮೈದಾನ ಎಂಬ ಅಂಶಗಳನ್ನೂ ಕಾಳೀಕೀರ್ತನೆಗಳಲ್ಲಿ ನಾವು ಕಾಣಬಹುದು.

### ಕಾಳೀಕೀರ್ತನೆ ನಡೆದು ಬಂದ ದಾರಿ

೧೨-೧೩ನೇ ಶತಮಾನದಲ್ಲಿ ಬಂಗಾಳದಲ್ಲಿ ಶಾಕ್ತ ಮತವು ಎಲ್ಲೆಡೆ ಹಬ್ಬಿತು. ಆಗ ಅನೇಕ ಕವಿಗಳು ಹಾಡುಗಳನ್ನು ರಚಿಸಲು ಮುಂದಾದರು. 'ಕವಿ ಕಂಕಣ', 'ಕವಿಗಳಲ್ಲಿ ಅತ್ಯಂತ ಶ್ರೇಷ್ಠಕವಿ' ಎಂಬ ಕೀರ್ತಿಗೆ ಪಾತ್ರನಾಗಿದ್ದ ಮುಕುಂದರಾಮನು 'ಚಂಡಿ' ಎಂಬ ಹಾಡುಗಳ ಸಂಕಲನ ಕೃತಿಯನ್ನು ರಚಿಸಿದನು. ಆದರೆ ೧೮ನೇ ಶತಮಾನದಲ್ಲಿ ಜೀವಿಸಿದ್ದ ರಾಮಪ್ರಸಾದ ಸೇನನು (೧೭೨೩-೧೭೭೫) ಇದನ್ನು ಎಲ್ಲರಿಗೂ ಆತ್ಮೀಯವಾಗುವಂತೆ ಜೀವತುಂಬಿದನು. ಅದನ್ನು ಸುಂದರವಾದ ಕೀರ್ತನ ಶೈಲಿಯಲ್ಲಿ ರಚಿಸಿ, ಜನಪ್ರಿಯಗೊಳಿಸಿದನು. ಆದ್ದರಿಂದ ರಾಮಪ್ರಸಾದನನ್ನು ಇದರ ನೇತಾರ ಎಂದು ಹೇಳಬಹುದು. ಇವನು ಬರೆದ 'ಕಾಳೀ ಕೀರ್ತನ್', 'ಕೃಷ್ಣ ಕೀರ್ತನ್', 'ಕಾಳಿಕಾಮಂಗಲ್' ಎಂಬ ಮೂರು ಕಾವ್ಯಗ್ರಂಥಗಳು ಕೀರ್ತನೆಯ ಕುರಿತು ನಮಗೆ ದೊರೆಯುತ್ತವೆ. ಆದರೆ ರಾಮಪ್ರಸಾದನ ಕಾಳೀಕೀರ್ತನೆ ಪುಸ್ತಕವು ನಮಗೆ ದೊರೆತಿಲ್ಲ. ೧೯೩೩ರಲ್ಲಿ ಈಶ್ವರ ಗುಪ್ತ ಕಾಳೀ ಕೀರ್ತನೆ ಎಂಬ ಪುಸ್ತಕವನ್ನು ಮುದ್ರಿಸಿದ. ಅದರಲ್ಲಿ ಬಾಯಿಂದ ಬಾಯಿಗೆ ಬಂದ ರಾಮಪ್ರಸಾದನ ಹಾಡುಗಳನ್ನು ಕಲೆಹಾಕಿದ. ರಾಮಪ್ರಸಾದನನ್ನು 'ಗಾನೇರ್ ಸಿದ್ಧ' ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಅಂದರೆ ಸಂಗೀತದಲ್ಲಿ ಸಿದ್ಧಿಯನ್ನು ಪಡೆದಿರುವನು



ರಾಮಪ್ರಸಾದ್ ಸೇನ್



ಆಂದುಲ್ ಕಾಳೀಕೀರ್ತನ ಸಮಿತಿ

ಎಂದರ್ಥ. ಅವನು ಕೀರ್ತನೆಗಳ ಮೂಲಕ ಈಶ್ವರಲಾಭವನ್ನು ಪಡೆದ. ಅವನ ಹಾಡುಗಳು ಮಂತ್ರಗಳಿಗೆ ಸಮಾನ ಎನ್ನುತ್ತಾರೆ. ರಾಮಪ್ರಸಾದನು ಗಂಗೆಯಲ್ಲಿ ತನ್ನ ದೇಹವನ್ನು ತ್ಯಜಿಸುವ ಸಮಯದಲ್ಲಿ ಹಾಡಿದ ಕೀರ್ತನೆಯನ್ನು ಕಂಡಾಗ ಅವನು ಎಂಥ ಮುಂದುವರಿದ ಸಾಧಕ ಎಂದು ತಿಳಿಯುತ್ತದೆ:

**ಕ್ಷಣಹೊತ್ತು ನಿಲ್ಲು ಯಮನೆ!...**
**ದಕ್ಷಿಣಾಬಲದಿಂದ ಮನವು ದೃಢವಾಗಿಹುದು**
**ಓ ತಾಯೆ, ನನ್ನುಸಿರು ನಿಲ್ಲುತಲಿದೆ,**
**ದಕ್ಷಿಣೆಯ ನೀಡಿರುವೆ ನಾನೀಗಲೆ'**

– ಎನ್ನುತ್ತಾ ಆತನು ತಾಯಿಯ ಪ್ರಜ್ಞೆಯಲ್ಲಿ ಒಂದಾದನು.

ಕಮಲಾಕಾಂತ ಭಟ್ಟಾಚಾರ್ಯ (೧೭೭೨-೧೮೨೧), ರಸಿಕ್ ಚಂದ್ರ ರಾಯ್(೧೮೨೦-೧೯೯೩), ರಾಮಚಂದ್ರ ದತ್ತ (೧೮೬೧ – ೧೯೯೯), ನೀಲಕಂಠ ಮುಖೋಪಾಧ್ಯಾಯ, ರವೀಂದ್ರನಾಥ ಠಾಗೋರ್ ಮುಂತಾದ ಅನೇಕ ಕವಿಗಳು ಕಾಳೀಕೀರ್ತನೆಗಳನ್ನು ರಚಿಸಿ ಜನಪ್ರಿಯಗೊಳಿಸಿದ್ದಾರೆ.

ಮಹೇಂದ್ರನಾಥ್ ಭಟ್ಟಾಚಾರ್ಯ (ಪ್ರೇಮಿಕ್) ಅನೇಕ ಕಾಳೀಕೀರ್ತನೆಗಳನ್ನು ರಚಿಸಿದ್ದಾರೆ. ಅದಕ್ಕೆ ಕೃಷ್ಣಚಂದ್ರ ಮಲ್ಲಿಕ್ ಎಂಬುವರು ಸ್ವರ ಸಂಯೋಜನೆಯನ್ನು ಮಾಡಿದ್ದಾರೆ. ಶಿವಪುರದ ಬಾವುಲ್ ಸಂಪ್ರದಾಯದವರು ಇದನ್ನು ಮುಂದುವರೆಸಿದರು. ಆದರೆ ಮಹೇಂದ್ರನಾಥನು ಕೀರ್ತನೆಗಳನ್ನು ರಚಿಸಿದರೂ ತನ್ನ ಹೆಸರನ್ನು ಮೊದಮೊದಲು ಉಲೇಖಿಸುತ್ತಿರಲಿಲ್ಲ. ಆದರೆ ಮುಂದೆ ಅವನ ಅನುಯಾಯಿಗಳು ಒತ್ತಾಯಿಸಿದ್ದರಿಂದ 'ಪ್ರೇಮಿಕ್' ಎಂಬ ಕಲ್ಪನೆಯ ಹೆಸರಿನಿಂದ ಕೀರ್ತನೆಗಳನ್ನು ರಚಿಸಿದನು. 'ಆಂದುಲ್ ಕಾಳೀಕೀರ್ತನೆ ಸಮಿತಿ'ಯು ಇವರ ಹಾಡುಗಳನ್ನು ವಿಶ್ವವಿಖ್ಯಾತಿಗೊಳಿಸಿದೆ. ಶ್ಯಾಮಾಸಂಗೀತದಲ್ಲಿ ಸಾಧಕ್ ಕವಿಯು ತನ್ನ ಕೀರ್ತನೆಗಳಲ್ಲಿ ದ್ವೈತದಿಂದ ಅದ್ವೈತದವರೆಗೆ ವಿವಿಧ ವಿಷಯಗಳನ್ನು ಚರ್ಚಿಸುತ್ತಾನೆ. ಭಕ್ತಿರಸ, ವಿಶೇಷವಾಗಿ ವೀರರಸವು ಇಲ್ಲಿ ಪ್ರಮುಖವಾಗಿದೆ.

ಕಾಳೀಕೀರ್ತನೆಯನ್ನು ಬಾವುಲಾಂಗ ಮತ್ತು ಧ್ರುಪದಾಂಗ ಶೈಲಿಯಲ್ಲಿ ಹಾಡಲಾಗುತ್ತದೆ. ಧ್ರುಪದ್ ಶೈಲಿ ಎಂದರೆ ಅದು

ಶಾಸ್ತ್ರೀಯ ಸಂಗೀತದ ಅತ್ಯಂತ ಪುರಾತನ ಶೈಲಿ. ಅಲ್ಲಿ ಆಧ್ಯಾತ್ಮಿಕ, ವೀರಭಾವ, ಚಿಂತನಶೀಲತೆಯನ್ನು ಮುಖ್ಯವಾಗಿ ಕಾಣಬಹುದಾಗಿದೆ. ರಾಮಕೃಷ್ಣ ಮಹಾಸಂಘದಲ್ಲಿ ಪ್ರತಿನಿತ್ಯ ಹಾಡುವ **ಖಂಡನ-ಭವ-ಬಂಧನ** ಹಾಡನ್ನು ಕೂಡ ಧ್ರುಪದ್ ಶೈಲಿಯಲ್ಲಿ ಸ್ವಾಮಿ ವಿವೇಕಾನಂದರು ರಚಿಸಿದ್ದಾರೆ. ಬಾವುಲ್ ಶೈಲಿಯು ಬಂಗಾಳದ ಜಾನಪದ ಶೈಲಿಯೆಂದು ಹೇಳಬಹುದು. ಸಾಮಾನ್ಯವಾಗಿ ಕಾಳೀಕೀರ್ತನೆಗಳನ್ನು ವಿಲಂಬಿತ ಲಯದಲ್ಲಿ ಹಾಡುತ್ತಾರೆ. ವಿಲಂಬಿತ ಲಯವೆಂದರೆ ತುಂಬಾ ನಿಧಾನವಾದ ಲಯದಲ್ಲಿ ಹಾಡುವುದು. ಧ್ರುಪದಾಂಗ ಕೀರ್ತನೆಗಳನ್ನು ವಿಲಂಬಿತ ಲಯದಲ್ಲಿ ಹಾಡುತ್ತಾರೆ. ಬಾವುಲಾಂಗ ಕೀರ್ತನೆಗಳನ್ನು ವಿಲಂಬಿತ ಲಯದಲ್ಲಿ ಹಾಡಿದರೂ, ಹೆಚ್ಚಾಗಿ ಮಧ್ಯ ಅಥವಾ ದ್ರುತ ಲಯಗಳಲ್ಲಿ ಹಾಡುವುದು ರೂಢಿಯಾಗಿದೆ. ಬಾಗ್‌ಬಜಾರನ ಕಾಳೀ ಕೀರ್ತನ ಗೋಷ್ಠಿ, ಆಂಟ್‌ಪುರ್‌ನ ಶ್ವೇತ ಕಾಳಿ ಮಂದಿರ, ದಕ್ಷಿಣ ೨೪ ಪರಗಣದ ಮೈದಾ ಕಾಳಿ ಬಾಡಿ, ಮುಂತಾದ ಅನೇಕ ಸಂಘಟನೆಗಳು ಕಾಳೀಕೀರ್ತನೆಯನ್ನು ಪ್ರಚುರಪಡಿಸಿವೆ. ವೈಷ್ಣವ ಮತ್ತು ಕಾಳೀಕೀರ್ತನೆಗಳು ಬಂಗಾಳದ ಜೀವನಾಡಿಯಾಗಿವೆ ಎಂದರೆ ಅತಿಶಯೋಕ್ತಿಯಾಗಲಾರದು.

ರಾಮಕೃಷ್ಣ ಮಿಷನ್ ವಿದ್ಯಾಪೀಠ, ದೇವ್‌ಘರ್‌ನಿಂದ ೧೯೩೩ರಲ್ಲಿ ಮುದ್ರಿತವಾದ 'ಸಂಗೀತ ಸಂಗ್ರಹ' ಎಂಬ ಪುಸ್ತಕದಲ್ಲಿ ಸುಮಾರು ೧೭೦ ಕಾಳೀಕೀರ್ತನೆಗಳನ್ನು ನಾವು ಕಾಣಬಹುದು. ೪೪ ಕವಿಗಳ ಹೆಸರುಗಳನ್ನು ಕಾಣಬಹುದು. ಆದರೂ ಅಲ್ಲಿ ಅನೇಕ ಕೀರ್ತನೆಗಳ ಕವಿಗಳ ಹೆಸರು ತಿಳಿದುಬಂದಿಲ್ಲ. ಪ್ರೇಮಿಕ್, ಶಿವಚಂದ್ರ ರಾಯ್, ಆಶುತೋಷ್ ದೇವ್, ಸ್ವಾಮಿ ಚಂಡಿಕಾನಂದ, ಕಮಲಾಕಾಂತ ಚಕ್ರವರ್ತಿ, ನೀರದ್ ರಂಜನ್ ಮಜುಂದಾರ್, ರಾಮಪ್ರಸಾದ ಸೇನ್, ಭವಪ್ರೀತಾನಂದ ಓಝಾ, ಮದನ್ ಮಾಸ್ಟರ್, ತ್ರೈಲೋಕ್ಯನಾಥ ಸಂನ್ಯಾಲ್, ಮಹಾರಾಜ್ ರಾಮಕೃಷ್ಣ, ನಜರುಲ್ ಇಸ್ಲಾಂ, ಸ್ವಾಮಿ ತಪಾನಂದ, ಸ್ವಾಮಿ ಪ್ರೇಮೇಶಾನಂದ, ಗಿರೀಶಚಂದ್ರ ಘೋಷ್, ರಾಮಪ್ರಸನ್ನ ವಂದ್ಯೋಪಾಧ್ಯಾಯ, ಸ್ವಾಮಿ ನಿರ್ವೇದಾನಂದ, ರಾಮದುಲಾಲ್ ನಂದಿ, ಸ್ವಾಮಿ ಅಂಬಿಕಾನಂದ, ಸ್ವಾಮಿ ಕೃಷ್ಣಾನಂದ, ಸ್ವಾಮಿ ಪ್ರಜ್ಞಾನಾನಂದ, ಕಾಳಿಪದ ಘೋಷ್, ಮುಂತಾದವರ ಹೆಸರುಗಳನ್ನು ನಾವು ಕಾಣಬಹುದು.

## ರಾಮಕೃಷ್ಣ ಮಹಾಸಂಘದಲ್ಲಿ ಕಾಳೀಕೀರ್ತನೆಯ ಪರಂಪರೆ

ಭಗವಾನ್ ಶ್ರೀರಾಮಕೃಷ್ಣರು ಕಾಳಿಯ ಮಹಾಭಕ್ತರು. ದಕ್ಷಿಣೇಶ್ವರದ ಭವತಾರಿಣೀ ಕಾಳಿಯನ್ನು ಅವರು ಅರ್ಚಿಸಿದರು. ಅವಳನ್ನು ವ್ಯಾಕುಲತೆಯಿಂದ ಕರೆದು ಪ್ರತ್ಯಕ್ಷವಾಗಿ ಕಂಡರು ಎಂಬುದು ನಮಗೆಲ್ಲಾ ತಿಳಿದಿರುವ ವಿಷಯ. 'ಶ್ರೀರಾಮಕೃಷ್ಣ ವಚನವೇದ'ವನ್ನು ನಾವು ಅವಲೋಕಿಸಿದಾಗ ಪ್ರತಿ ನಾಲ್ಕೈದು ಪುಟಗಳಿಗೆ ಒಂದೊಂದು ಕಾಳೀಕೀರ್ತನೆ, ಭಜನೆಗಳನ್ನು ನಾವು ಕಾಣಬಹುದು. ಆದ್ದರಿಂದ ಶ್ರೀರಾಮಕೃಷ್ಣರ ಜೀವನದಲ್ಲಿ ಕಾಳೀ ಕೀರ್ತನೆಯು ಹಾಸುಹೊಕ್ಕಾಗಿದೆ ಎಂದು ತಿಳಿಯುತ್ತದೆ. ಅದೇ ರೀತಿ ಮಹಾಮಾತೆ ಶ್ರೀಶಾರದಾದೇವಿಯವರು ಕಾಳೀಕೀರ್ತನೆಯನ್ನು ಆಸ್ವಾದಿಸುತ್ತಿದ್ದ ಅನೇಕ ಪ್ರಸಂಗಗಳನ್ನು ಅವರ ಜೀವನದಲ್ಲಿ ನೋಡಬಹುದು. ಸಂಗೀತಗಾರರಾಗಿದ್ದ ಸ್ವಾಮಿ ವಿವೇಕಾನಂದರು ಅನೇಕ ಕಾಳಿಯ ಭಜನೆಗಳನ್ನು ಮತ್ತು ಕೀರ್ತನೆಗಳನ್ನು ಹಾಡುತ್ತಿದ್ದುದನ್ನು ನಾವು ಅವರ ಜೀವನದಲ್ಲಿ ಕಾಣಬಹುದು. ಸ್ವಾಮಿ ಬ್ರಹ್ಮಾನಂದರು, ಸ್ವಾಮಿ ಶಿವಾನಂದರು, ಸ್ವಾಮಿ ಅಖಂಡಾನಂದರು, ಮುಂತಾದ ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರು, ಮತ್ತು ಗೃಹಸ್ಥ ಶಿಷ್ಯರು ಕಾಳೀಕೀರ್ತನೆಗಳನ್ನು ಹಾಡುತ್ತಿದ್ದರು, ಆಸ್ವಾದಿಸುತ್ತಿದ್ದರು. ಸ್ವಾಮಿ ಪ್ರೇಮೇಶಾನಂದರು, ಸ್ವಾಮಿ ಅಂಬಿಕಾನಂದರು, ಸ್ವಾಮಿ ಚಂಡಿಕಾನಂದರು, ಮುಂತಾದ ಅನೇಕ ಸಾಧುಗಳು ಇತ್ತೀಚಿಗೆ ಕಾಳೀಕೀರ್ತನೆಗಳನ್ನು ರಚಿಸಿದ್ದಾರೆ.

ಬೇಲೂರು ಮಠದಲ್ಲಿ ಹಾಗು ಉಳಿದ ಶಾಖಾ ಕೇಂದ್ರಗಳಲ್ಲಿ ವಿಶೇಷ ದಿನಗಳಲ್ಲಿ ಕಾಳೀಕೀರ್ತನೆಗಳನ್ನು ಹಾಡುವ ಪದ್ಧತಿಯಿದೆ. ಸ್ವಾಮಿ ವಿವೇಕಾನಂದರ ಹಾಗು ಭಗವಾನ್ ಶ್ರೀರಾಮಕೃಷ್ಣರ ಜಯಂತಿಯಂದು ವಿವಿಧ ಭಜನೆಗಳ ಜೊತೆ ಅನೇಕ ಕಾಳೀ ಕೀರ್ತನೆಗಳನ್ನು ಹಾಡಲಾಗುತ್ತದೆ. ಅಲ್ಲದೆ ಎರಡು ಜಯಂತಿಗಳ ರಾತ್ರಿಯಂದು ಬೇಲೂರು ಮಠದಲ್ಲಿ ಕಾಳೀಪೂಜೆಯನ್ನು ಮಾಡುತ್ತಾರೆ. ಸುಮಾರು ಮಧ್ಯರಾತ್ರಿ ಎರಡು ಗಂಟೆಯವರೆಗೆ ಸಾಧು-ಬ್ರಹ್ಮಚಾರಿಗಳು ಅನೇಕ ಕಾಳೀಕೀರ್ತನೆಗಳನ್ನು ಹಾಡುವ ಪದ್ಧತಿ ಇಂದಿಗೂ ಇದೆ. ಶ್ರೀರಾಮಕೃಷ್ಣರ ಜಯಂತಿ ಮುಗಿದು, ಅದರ ಮುಂದಿನ ಭಾನುವಾರದಂದು ಬೇಲೂರು ಮಠದಲ್ಲಿ ಸಾರ್ವಜನಿಕ ಉತ್ಸವವನ್ನು (ಜಾತ್ರೆ) ಹಮ್ಮಿಕೊಳ್ಳಲಾಗುತ್ತದೆ. ಪ್ರತಿವರ್ಷ ಆ ದಿನದಂದು 'ಆಂದುಲ್ ಕಾಳೀ ಕೀರ್ತನಾ ಸಮಿತಿ'ಯು ಬೇಲೂರು ಮಠಕ್ಕೆ ಬಂದು ಮಠದ ಆವರಣದಲ್ಲಿ ಶ್ರೀರಾಮಕೃಷ್ಣರ ಹಳೆಯ ದೇವಾಸ್ಥಾನದ ಬಳಿ ಕುಳಿತು ಪ್ರೇಮಿಕ್ ರಚಿಸಿರುವ ಕಾಳೀಕೀರ್ತನೆಗಳನ್ನು ಹಾಡುತ್ತಾರೆ. ಶ್ರೀಮಾತೆ, ಸ್ವಾಮಿ ಬ್ರಹ್ಮಾನಂದರು ಇದ್ದ ಸಮಯದಿಂದ ಈ ಸಂಪ್ರದಾಯವು ಮುಂದುವರಿದುಕೊಂಡು ಬಂದಿದೆ. ಈ ಹಾಡುಗಳನ್ನು ಕೇಳಿ ಅವರುಗಳು ಭಕ್ತಿಯಿಂದ ಭಾವಪರವಶರಾಗುತ್ತಿದ್ದ ಅನೇಕ ಸಂಗತಿಗಳನ್ನು ನಾವು ಅವರ ಜೀವನಚರಿತ್ರೆಗಳಿಂದ ತಿಳಿಯಬಹುದಾಗಿದೆ.

ಶ್ರೀರಾಮಕೃಷ್ಣರು, ''ಕಾಳೀಕೀರ್ತನೆಗಳಲ್ಲಿ ರಾಜಸಿಕ ಭಕ್ತಿಯನ್ನು ಕಾಣುತ್ತೇವೆ'' ಎನ್ನುತ್ತಾರೆ. ಕಾರಣ, ಸಾಧಕ-ಭಕ್ತನು ತಾಯಿಯನ್ನು ದರ್ಶನ ನೀಡೆಂದು ಪ್ರಾರ್ಥಿಸುತ್ತಾನೆ. ಇಲ್ಲದಿದ್ದರೆ ನಾನು ಪ್ರಾಣತ್ಯಾಗ ಮಾಡುತ್ತೇನೆ ಎನ್ನುತ್ತಾನೆ. 'ಅಮಿ ದುರ್ಗಾ ದುರ್ಗಾ ದುರ್ಗಾ ಬೋಲಿ ಮಾ ಜದಿ ಮೊರಿ...' ಎಂಬ ಕಾಳೀ ಕೀರ್ತನೆಯನ್ನು ಉಲ್ಲೇಖಿಸುತ್ತಾ ಭಕ್ತನಿಗೆ ಭಗವಂತನ ನಾಮಜಪದಿಂದ ನಾಶವು ಸಾಧ್ಯವಿಲ್ಲ ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಅದರ ಕನ್ನಡಾನುವಾದ ಹೀಗಿದೆ:

ನಾ ಪಾಪಿಯಾದರೂ ನನ್ನ ಕಡೆಗಾಲದಲಿ
ನಿನ್ನ ಶ್ರೀನಾಮವನು ಜಪಿಸುತಿರಲು
ಮುಕ್ತಿಗೊಯ್ಯದೆ ನೀನು ಬಿಡುವಳೇನು? ...
ಭಾವುಕನ ಭಾವದೊಲು ಅವನೊಳುದಿಸುವ ಒಲವು,
ಆ ಒಲವಿಗನುಸಾರ ಅವನು ಪಡೆಯುವ ಫಲವು;
ಶ್ರದ್ಧೆ ಎಲ್ಲಕು ಮೂಲ; ತಾಯ ಶ್ರೀಪಾದ ಮಧು-
ಸರಸಿಯಲಿ ಮುಳಗಿರುವ ನನಗೇಕೆ ಮತ್ತೆ ಜಪ-
ತಪ ಹೋಮಹವನಾದಿ ಕರ್ಮಗಳ ರಗಳೆ?

ಶ್ರೀರಾಮಕೃಷ್ಣರು ಅವರ ಅಣ್ಣನ ಮಗನಾದ ರಾಮಲಾಲನಿಗೆ ಅನೇಕ ಕಾಳಿಯನ್ನು ಕುರಿತ ಹಾಡುಗಳನ್ನು ಹೇಳಿಕೊಟ್ಟಿದ್ದರು. ಒಮ್ಮೆ ರಾಮಪ್ರಸಾದನ ಹಾಡುಗಳನ್ನು ಆಲಿಸುತ್ತಿದ್ದ ಸಮಯದಲ್ಲಿ ಮಾಸ್ಟರ್ ಮಹಾಶಯನಿಗೆ ಈ ಹಾಡುಗಳನ್ನು ಬರೆದಿಟ್ಟುಕೊಳ್ಳಲು ಹೇಳುತ್ತಾರೆ.

ಸ್ವಾಮಿ ಶಾರದಾನಂದರು 'ಶಿವ ಸಂಗೇ ಸದಾ ರಂಗೇ' ಎಂಬ ಹಾಡನ್ನು ತುಂಬಾ ಇಷ್ಟಪಡುತ್ತಿದ್ದರು. ಅವರು ಕಮಲಾಕಾಂತ ಚಕ್ರವರ್ತಿಯ 'ಮಜಲೋ ಆಮಾರ್ ಮನ ಭ್ರಮರಾ' ಎಂಬ ಹಾಡನ್ನು ಮತ್ತೆ ಮತ್ತೆ ಹಾಡುತ್ತಿದ್ದರು. ಸ್ವಾಮಿ ಅಖಂಡಾನಂದರು ಒಮ್ಮೆ 'ಮಾ ತೋರ್ ತಾರಾ...' ಎಂಬ ಕಾಳೀಕೀರ್ತನೆಯನ್ನು ಇಡೀ ರಾತ್ರಿ ಹಾಡಿರುವ ಪ್ರಸಂಗವನ್ನು ಅವರ ಜೀವನದಲ್ಲಿ ನೋಡಬಹುದು. ಸ್ವಾಮಿ ವಿವೇಕಾನಂದರು ದೇಹವನ್ನು ಬಿಡುವ ದಿನದಂದು 'ಶ್ಯಾಮಾ ಮಾ ಕಿ ಆಮಾರ್ ಕಾಲೊ ರೇ' ಎಂಬ ಹಾಡನ್ನು ಹಾಡಿದ್ದರು. ಸ್ವಾಮಿ ಬ್ರಹ್ಮಾನಂದರು ಕಾಳೀಕೀರ್ತನೆಗಳನ್ನು ಕೇಳುತ್ತಾ ಸಮಾಧಿಸ್ಥರಾಗುತ್ತಿದ್ದ ವಿಷಯವನ್ನು ನಾವು ಅವರ ಜೀವನ ಚರಿತ್ರೆಯನ್ನು ಓದಿದಾಗ ತಿಳಿಯಬಹುದು.

### ಉಪಸಂಹಾರ

ಕಾಳೀ ಎಂದರೆ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಕ್ಷುದ್ರ ದೇವತೆ, ಮಾಟ-ಮಂತ್ರಗಳಿಗೆ ಅಧಿಷ್ಠಾತೃ ದೇವತೆ ಎಂಬ ಭಾವನೆಯು ಪ್ರಚಲಿತವಾಗಿದೆ. ಆದರೆ ಬಂಗಾಳ, ಒಡಿಶಾ, ಈಶಾನ್ಯ ಭಾರತದಲ್ಲಿ ಕಾಳಿಯನ್ನು ಜಗನ್ಮಾತೃ ಸ್ವರೂಪಿಣಿಯಾಗಿ ಪೂಜಿಸುತ್ತಾರೆ. ಶಾಕ್ತಮತದ ಅನುಸಾರ ಅವಳೇ ಜಗತ್ತಿನ ಕರ್ತೃ. ಭಗವಾನ್ ಶ್ರೀರಾಮಕೃಷ್ಣರು ಹೇಳುವಂತೆ ತಾಯಿ ಕಾಳಿ ಮತ್ತು ಸಚ್ಚಿದಾನಂದ ಪರಮಾತ್ಮ ಇಬ್ಬರೂ ಒಂದೇ. ಯಾರು ಸಚ್ಚಿದಾನಂದನೋ ಅವಳೇ ಕಾಳಿಯಾಗಿ ನಮಗೆ ತೋರುತ್ತಿದ್ದಾಳೆ ಎನ್ನುತ್ತಾರೆ. ಜಗನ್ಮಾತೆಯ ಸ್ವರೂಪವನ್ನು ತಿಳಿಸುವ ಕೀರ್ತನೆಗಳನ್ನು ಶ್ಯಾಮಾ ಸಂಗೀತ, ಮಾತೃ ಸಂಗೀತ, ಕಾಳೀಕೀರ್ತನೆ ಮತ್ತು ಶಾಕ್ತ ಪದಾವಳಿ ಎಂದು ಕರೆಯುತ್ತಾರೆ. ಅದು ಕೇಳುವವರ ಮನಸ್ಸನ್ನು ಅತ್ಯುನ್ನತ ಮಟ್ಟಕ್ಕೆ ತೆಗೆದುಕೊಂಡು ಹೋಗುವುದರಲ್ಲಿ ಯಾವುದೇ ಸಂಶಯವಿಲ್ಲ. ಅನೇಕ ಭಾವ-ರಾಗ-ತಾಳಗಳ ಸಮಾಗಮ ಇಲ್ಲಿದೆ. ಕಾಳೀಕೀರ್ತನೆಯು ಸಂಗೀತದ ಒಂದು ವಿಶಿಷ್ಟ ಪ್ರಕಾರವಾಗಿ ಬೆಳೆದು ನಿಂತಿದೆ. ಅನೇಕ ಸಾಧಕರು ಇದರ ಸಹಾಯದಿಂದ ಅಂತಿಮ ಗುರಿಯನ್ನು ತಲುಪಿದ್ದಾರೆ. ರಾಮಕೃಷ್ಣ ಮಹಾಸಂಘವು ಕಾಳೀಕೀರ್ತನೆಯನ್ನು ತನ್ನ ಪರಂಪರೆಯಲ್ಲಿ ಮೈಗೂಡಿಸಿಕೊಂಡು ವಿಶಿಷ್ಟವಾಗಿ ಹೊರಹೊಮ್ಮಿದೆ.

ಅಹುದು, ಶತ ಶತ ಬಾರಿ ಸತ್ಯವು
ವೇದದಂತಿದು ಸತ್ಯವು
ಎನ್ನ ತಾಯಿ ನಿರಾಕಾರಳು
ಅವಳೆ ತಾರಾ ಜನನಿಯು ।

ಕಲ್ಲುಮಣ್ಣಿನ ಮೂರ್ತಿಯೇತಕೆ
ಧಾತು ನಿರ್ಮಿತವೇತಕೆ?
ಮನದ ಮೂರ್ತಿಯ ಮಾಡಿ ನಿಲ್ಲಿಸು
ಹೃದಯ ಪದ್ಮಾಸನದಲಿ, ರಾಮಪ್ರಸಾದ ॥ ❋

## ಸ್ವಾಮಿ ವಿವೇಕಾನಂದರು ಬಯಸುವ ಸಂಗೀತ

''ಖೋಲ್ ಮತ್ತು ಕರ್ತಾಲ್‌ಗಳನ್ನು ನುಡಿಸುತ್ತಾ ತಾಳಕ್ಕೆ ಸರಿಯಾಗಿ ಕುಣಿಯುತ್ತಾ ಜನರೆಲ್ಲಾ ಅಧೋಗತಿಗಿಳಿದಿದ್ದಾರೆ. ಮೊದಲನೆಯದಾಗಿ ಅಜೀರ್ಣವ್ಯಾಧಿಯುಳ್ಳ ಜನಾಂಗ. ಜೊತೆಗೆ ಹೀಗೆ ಕುಣಿತಕ್ಕೂ ಪ್ರಾರಂಭಿಸಿದರೆ ಅವರು ಹೇಗೆ ತಾನೆ ಇಷ್ಟೊಂದು ಕಷ್ಟವನ್ನು ಸಹಿಸಬಲ್ಲರು? ಯಾವುದರ ಪ್ರಥಮ ಗುಣವೇ ಪವಿತ್ರತೆಯಾಗಿದೆಯೋ ಅಂತಹ ಉಚ್ಚ ಸಾಧನೆಯನ್ನು ಅನುಕರಿಸಹೋಗಿ ಸಂಪೂರ್ಣ ತಾಮಸದಲ್ಲಿ ಮುಳುಗಿ ಹೋಗಿರುವರು. ನೀನು ಪ್ರತಿಯೊಂದು ಗ್ರಾಮ ಮತ್ತು ಪಟ್ಟಣಕ್ಕೂ ಹೋಗಿ ನೋಡು. ಎಲ್ಲೆಲ್ಲೂ ನಿನಗೆ ಈ ಕುಣಿತವೇ ಕಂಡುಬರುವುದು. ದೇಶದಲ್ಲಿ ತಮಟೆಗಳನ್ನು ತಯಾರಿಸುವುದಿಲ್ಲವೆ? ಭರತಖಂಡದಲ್ಲಿ ತುತ್ತೂರಿ, ಡಮರುಗಳು ಸಿಗುವುದಿಲ್ಲವೆ? ಹುಡುಗರೆಲ್ಲಾ ಈ ತೂರ್ಯವಾಣಿಯನ್ನು ಕೇಳುವಂತೆ ಮಾಡಿ. ಬಾಲ್ಯದಿಂದ ಈ ಕೋಮಲಸ್ವಭಾವದ ಸಂಗೀತವನ್ನು ಕೇಳಿ ಕೇಳಿ, ಕೀರ್ತನೆಗಳನ್ನು ಕೇಳಿ ದೇಶವೆಲ್ಲಾ ನಾರಿಯರ ದೇಶವಾಗಿ ಪರಿಣಮಿಸಿದೆ. ಇದಕ್ಕಿಂತ ಬೇರೆ ಅಧೋಗತಿ ಯಾವುದಿದೆ? ಕವಿಯ ಕಲ್ಪನೆ ಕೂಡ ಈ ಚಿತ್ರವನ್ನು ಕಲ್ಪಿಸಲಾರದು. ತಮಟೆ ಕಹಳೆಯನ್ನು ಕೂಗಿಸಬೇಕು. ತಮಟೆಗಳನ್ನು ರಣರಂಗದಲ್ಲಿ ಬಾರಿಸಿದಂತೆ ಬಾರಿಸಬೇಕು. **'ಮಹಾವೀರ', 'ಮಹಾವೀರ'** ಎಂಬ ಗರ್ಜನೆ ನಮ್ಮ ಬಾಯಿಯಿಂದ ಮೊರೆಯುತ್ತಿರಬೇಕು. **'ಹರ, ಹರ, ಓಂ, ಓಂ!'** ಎಂಬ ನಿನಾದ ದಶದಿಕ್ಕುಗಳೂ ಪ್ರತಿಧ್ವನಿತವಾಗುವಂತೆ ಮಾಡಬೇಕು. ಮಾನವನ ಮೃದು ಹೃದಯವನ್ನು ಮಿಡಿಯುವಂತಹ ಸಂಗೀತ ಇಂದು ನಮಗೆ ಬೇಕಾಗಿಲ್ಲ. ಗೆಜ್ಜೆ ಧ್ವನಿಗಳ ನಾಟ್ಯ ಸಂಗೀತವನ್ನು ನಿಲ್ಲಿಸಿ. ಧ್ರುಪದ್ ಸಂಗೀತಕ್ಕೆ ಕಿವಿಗೊಡುವಂತೆ ಮಾಡಬೇಕು. ಗಂಭೀರವಾದ ವೇದಘೋಷದ ಗರ್ಜನೆಯಿಂದ ದೇಶವನ್ನೆಲ್ಲ ತುಂಬಬೇಕು. ಪ್ರತಿಯೊಂದರಲ್ಲಿಯೂ ಪುರುಷಸಿಂಹನ ಕೆಚ್ಚೆದೆ ವ್ಯಕ್ತವಾಗುವಂತೆ ಮಾಡಬೇಕು.''

— **ಸ್ವಾಮಿ ವಿವೇಕಾನಂದ** *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೮, ಪು.೨೨೯)*



# BADARIKASHRAMA

## BADARIKASHRAMA VIDYASHALA

Badarikashrama is 125 km west of Bangalore. The ashrama is famous for its center for meditation, education and service to humanity. Badarikashrama includes Sri Ramakrishna Paramahamsa, Sri Sarada Devi and Sri Lakshmi Narayana statues in the shrine. Amidst the seven acre ornamental garden stands a 13 ft bronze statue of Swami Vivekananda. The ashrama provides an opportunity for meditation and service. Clean and well maintained guest house is available for short and long term stay. We welcome all who are interested in doing sadhana and seva.



Badarikashrama Vidyashala adjacent to the ashrama grounds has an excellent infrastructure with cc cameras, large playgrounds, fully equipped computer lab and science lab, library, spacious classroom with fresh air and well maintained wash rooms. There are currently 30 experienced teachers and 650 students. The school started in 2008-09 and holds classes from LKG to 9th standard. It is an English medium school. The school provides bus service to 105 villages, reaching the less privileged rural children. The school is a model for human values, discipline, morality and love towards children. Many students from the Vidyashala participated and won prizes in academic and sports competitions at the state and district level.



The school got a reputable name for its discipline, high academic standard and ethical development of the children. Swami Omkarananda, founder president of Badarikashrama and Badarikashrama Vidyashala has committed his life to serve humanity by providing an atmosphere of learning based on Swami Vivekananda's message of "Man making education." He is eagerly waiting for dedicated, service oriented members of society to join in this mission of serving God through humanity.



**We are currently looking for experienced teachers for the academic year 2018-19 who studied BA B.Ed / Bsc B.Ed / BA Bped / M.ed and who are fluent in spoken English. There are residential facilities for teachers.**











Madihalli PO. Turuvekere Tq. Tumkur Dt. 572227 Karnataka Ph: 08139 298910/11 Mobile: 9880194991 (Srinivas)
Email: badarik1986@gmail.com website: www.badarikashrama.org

# ರಾಮಕೃಷ್ಣ ಮಠ-ಮಿಷನ್ನಿನ ಇತ್ತೀಚಿನ ಚಟುವಟಿಕೆಗಳು

ಹೊಸ ಶಾಖಾ ಕೇಂದ್ರಗಳು: ೧. **ಶ್ಯಾಮಪುಕುರ:** ಇಲ್ಲಿಯವರೆಗೆ ಬಲರಾಮ ಮಂದಿರ ರಾಮಕೃಷ್ಣ ಮಠದ ಉಪಶಾಖೆಯಾಗಿದ್ದ ಈ ಕೇಂದ್ರವು ಈಗ ಪೂರ್ಣಪ್ರಮಾಣದ ಶಾಖಾಕೇಂದ್ರವಾಗಿದೆ. ೨. **ಕಥಾಮೃತ ಭವನ:** ಇಲ್ಲಿಯವರೆಗೆ ಬೇಲೂರು ಮಠದ ನೇರ ಉಸ್ತುವಾರಿಯಲ್ಲಿದ್ದ ಈ ಕೇಂದ್ರವು ಇನ್ನು ಮುಂದೆ ಶ್ಯಾಮಪುಕುರ ಆಶ್ರಮದ ಉಪಶಾಖೆಯಾಗಿ ಬದಲಾಗಿದೆ.

ಭಾರತದ ರಾಷ್ಟ್ರಪತಿಗಳಾದ ಶ್ರೀ **ರಾಮನಾಥ ಕೋವಿಂದ** ಅವರು ನವಂಬರ್ ೨೦ ರಂದು ಬೇಲೂರು ಮಠಕ್ಕೆ ಭೇಟಿಯಿತ್ತರು. ಅವ ರೊಂದಿಗೆ ಪಶ್ಚಿಮ ಬಂಗಾಳದ ಗವರ್ನರ್ ಶ್ರೀ ಕೇಸರಿನಾಥ ತ್ರಿಪಾಠಿ ಯವರೂ ಇದ್ದರು.



ರಾಷ್ಟ್ರಪತಿಗಳ ಭೇಟಿ

**ಸೋದರಿ ನಿವೇದಿತಾ ಅವರ ೧೫೦ನೇ ಜನ್ಮ ಶತಮಾನೊತ್ಸವ:** **ಲಂಡನ್ ರಾಮಕೃಷ್ಣ ವೇದಾಂತ ಸೆಂಟರ್:** ನವೆಂಬರ್ ೧೨ರಂದು ಲಂಡನ್ನಿನ ವಿಂಬಲ್ಡನ್‌ನಲ್ಲಿರುವ ಸೋದರಿ ನಿವೇದಿತಾಳ ಮನೆಯಲ್ಲಿ **ಇಂಗ್ಲೀಷ್ ಹೆರಿಟೇಜ್** ಸಂಸ್ಥೆಯು ಸ್ಥಾಪಿಸಿದ **ನೀಲಿ ಸ್ಮಾರಕಫಲಕ (ಬ್ಲೂ ಪ್ಲೇಕ್)** ವನ್ನು ಪಶ್ಚಿಮ ಬಂಗಾಳ ಮುಖ್ಯಮಂತ್ರಿ ಮಮತಾ ಬ್ಯಾನರ್ಜಿಯವರು ಅನಾವರಣಗೊಳಿಸಿದರು. ಈ ಸಂದರ್ಭದಲ್ಲಿ ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಾದ ಶ್ರೀಮತ್ ಸ್ವಾಮಿ ಸುಹಿತಾನಂದಜಿ, ಬ್ರಿಟನ್ನಿನ ಬಾರ್ನ್ ಎಂಡ್‌ಲ್ಲಿರುವ ರಾಮಕೃಷ್ಣ ವೇದಾಂತ ಸೆಂಟರ್‌ನ ಅಧ್ಯಕ್ಷರಾದ ಸ್ವಾಮಿ ದಯಾತ್ಮನಂದಜಿ,



ಲಂಡನ್‌ನಲ್ಲಿ ನಿವೇದಿತಾ ನೀಲಿ ಸ್ಮಾರಕಫಲಕ

ಲಂಡನ್ನಿನ ಮೇಯರ್ ಸಾದಿಕ್ ಖಾನ್ ಉಪಸ್ಥಿತರಿದ್ದರು. ಅನೇಕ ಮಂದಿ ಭಕ್ತರು ಕೂಡ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

**ಮಾಸ್ಕೋ ರಾಮಕೃಷ್ಣ ಸೊಸೈಟಿ - ವೇದಾಂತ ಸೆಂಟರ್:** ಮಾಸ್ಕೋ ಕೇಂದ್ರವು ರಷ್ಯನ್ ರಾಯಭಾರಿ ಕಛೇರಿಯ ಸಹಭಾಗಿತ್ವ ದೊಂದಿಗೆ ರಷ್ಯನ್ ಫೆಡರೇಶನ್‌ನಲ್ಲಿ ಸೋದರಿ ನಿವೇದಿತಾಳ ೧೫೦ನೇ ಜನ್ಮಶತಮಾನೋತ್ಸವವನ್ನು ಆಚರಿಸಿತು.




ಮಾಸ್ಕೋದಲ್ಲಿ ನಿವೇದಿತಾ ೧೫೦ನೇ ಜನ್ಮಶತಮಾನೋತ್ಸವ

ಸೋದರಿ ನಿವೇದಿತಾ ಅವರ ೧೫೦ನೇ ಜನ್ಮ ಶತಮಾನೋತ್ಸವ ವನ್ನು ಈ ಕೆಳಗಿನ ಶಾಖಾ ಕೇಂದ್ರಗಳು ಆಚರಿಸಿದವು: **ಅದ್ವೈತ ಆಶ್ರಮ** ಕೊಲ್ಕತ್ತಾ ; ರಾಮಕೃಷ್ಣ ಮಿಷನ್, **ಚಂಡೀಘಡ**; ರಾಮಕೃಷ್ಣ ಮಠ, **ಚಂಡೀಪುರ**; ಶಾರದಾ ವಿದ್ಯಾಲಯ, **ಚೆನ್ನೈ**; **ಕೊಯಮ ತ್ತೂರು** ಮಿಷನ್ ವಿದ್ಯಾಲಯ; ರಾಮಕೃಷ್ಣ ಮಿಷನ್ ಆಶ್ರಮ, **ಇಂದೋರ್**, ರಾಮಕೃಷ್ಣ ಮಿಷನ್ ಹಾಸ್ಪಿಟಲ್, **ಇಟಾನಗರ**; ರಾಮಕೃಷ್ಣ ಮಠ, **ಜೈಪುರ**; ರಾಮಕೃಷ್ಣ ಮಠ, **ಜಲಪ್ಯಾಗುಡಿ** (ಕಾಂಕುರಗಾಛಿ ಆಶ್ರಮದ ಸಹಯೋಗದೊಂದಿಗೆ); ರಾಮಕೃಷ್ಣ ಮಿಷನ್, **ಝೂರ್‌ಗ್ರಾಮ**; ರಾಮಕೃಷ್ಣ ಮಿಷನ್ ಆಶ್ರಮ, **ಕಡಪ**; ರಾಮಕೃಷ್ಣ ಮಠ, **ಕಾಂಕುರಗಾಛಿ**; ರಾಮಕೃಷ್ಣ ಮಿಷನ್, **ಮಧುರೈ**; ರಾಮಕೃಷ್ಣ ಮಠ, **ಮಾನಸದ್ವೀಪ**; ರಾಮಕೃಷ್ಣ ಆಶ್ರಮ, **ನಾಗಪುರ**, ರಾಮಕೃಷ್ಣ ಮಿಷನ್, **ಪೋರ್ಟ್‌ಬ್ಲೇರ್** (ಅಂಡಮಾನ್); ರಾಮ ಕೃಷ್ಣ ಮಿಷನ್, **ಪುರುಲಿಯಾ**; ರಾಮಕೃಷ್ಣ ಮಠ, **ಸೇಲಂ**; ರಾಮ ಕೃಷ್ಣ ಮಿಷನ್ **ಸಾರಗಾಛಿ**; **ಸ್ವಾಮೀಜಿಯವರ ಮನೆ**; ರಾಮಕೃಷ್ಣ ಮಿಷನ್ **ವಡೋದರ**; ರಾಮಕೃಷ್ಣ ಮಿಷನ್ ಆಶ್ರಮ, **ವಿಜಯ ವಾಡ**; ರಾಮಕೃಷ್ಣ ಮಿಷನ್ ಸೇವಾಶ್ರಮ, **ವೃಂದಾವನ**.

**ವಿದೇಶಗಳಲ್ಲಿ : ಚಿಕಾಗೋ, ಸಿಂಗಾಪುರ** ಆಶ್ರಮಗಳು.

**ಶಾಖಾಕೇಂದ್ರಗಳಲ್ಲಿ ನಡೆದ ಕಾರ್ಯಕ್ರಮಗಳು**

**ಪುರುಲಿಯಾ ವಿದ್ಯಾಪೀಠದಲ್ಲಿ** ವಜ್ರಮಹೋತ್ಸವದ ಸಲುವಾಗಿ ವರ್ಷಪೂರ್ತಿ ನಡೆದ ಕಾರ್ಯಕ್ರಮಗಳ ಅಂಗವಾಗಿ ಅಕ್ಟೋಬರ್ ೧೭ರಂದು ಹಲವು ಪ್ರವಚನ, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಇದರಲ್ಲಿ ಸುಮಾರು ೧೦೦ ಮಂದಿ ಸಾಧುಗಳು ಭಾಗ ವಹಿಸಿದ್ದರು. ಇದಲ್ಲದೆ, ನವೆಂಬರ್ ೧೫ರಿಂದ ೧೯ರ ವರೆಗೆ ಯುವ




**ಹರಿಪಾಡ್ ರಾಮಕೃಷ್ಣ ಮಠದಲ್ಲಿ ನೈತಿಕ ಶಿಕ್ಷಣ ಕಾರ್ಯಕ್ರಮ**




**ವಿಜಯವಾಡ ರಾಮಕೃಷ್ಣ ಮಿಷನ್‌ನಲ್ಲಿ ಯುವ ಸಮ್ಮೇಳನ**

ಸಮ್ಮೇಳನ, ಅಧ್ಯಾಪಕರ ಸಮ್ಮೇಳನ, ಪಾಲಕರ ಸಮ್ಮೇಳನ ಹಾಗೂ ಹಳೆಯ ವಿದ್ಯಾರ್ಥಿಗಳ ಸಭೆ ನಡೆದವು. ಈ ಎಲ್ಲ ಕಾರ್ಯಕ್ರಮಗಳಲ್ಲಿ ಸುಮಾರು ೨೦೦ ಮಂದಿ ಭಾಗವಹಿಸಿದ್ದರು.

ನವೆಂಬರ್ ೧೨ರಂದು **ಕೂಚ್ ಬಿಹಾರ್ ಮಠ**ದಲ್ಲಿನ ಆಸ್ಪತ್ರೆ ಕಟ್ಟಡದ ಮೊದಲನೇ ಮಹಡಿಯ ಉದ್ಘಾಟನೆ ನೆರವೇರಿತು.

### ನೈತಿಕ ಶಿಕ್ಷಣ ಹಾಗೂ ಯುವ ಸಮ್ಮೇಳನ ಕಾರ್ಯಕ್ರಮಗಳು

ನವೆಂಬರ್ ೧೭ ಹಾಗೂ ೨೦ **ಹರಿಪಾಡ್ ರಾಮಕೃಷ್ಣ** ಮಠವು ಮೂರು ಶಾಲೆಗಳಲ್ಲಿ **ನೈತಿಕ ಶಿಕ್ಷಣ ಕಾರ್ಯಕ್ರಮ**ಗಳನ್ನು ಏರ್ಪಡಿಸಿತು. ಇದರಲ್ಲಿ ಸುಮಾರು ೪೨೮ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ನವೆಂಬರ್ ೩ರಂದು **ವಡೋದರಾ ರಾಮಕೃಷ್ಣ ಮಠ**ದಲ್ಲಿ ನಡೆದ **ನೈತಿಕ ಶಿಕ್ಷಣ ಕಾರ್ಯಕ್ರಮ**ದಲ್ಲಿ ೨೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ನವೆಂಬರ್ ೨೬, ೨೭ರಂದು **ವಿಜಯವಾಡ ರಾಮಕೃಷ್ಣ ಮಿಷನ್** ನಲ್ಲಿ ನಡೆದ ಯುವ ಸಮ್ಮೇಳನದಲ್ಲಿ 'ವ್ಯಕ್ತಿತ್ವ ನಿರ್ಮಾಣ' ಪುಸ್ತಕದ ಕುರಿತು ನಡೆದ ಎರಡು ವಿಚಾರ ಸಂಕಿರಣಗಳಲ್ಲಿ ೨೫೦ ಮಂದಿ ಅಧ್ಯಾಪಕರು ಹಾಗೂ ೩೫೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು.

### ಯೋಗ ಶಿಬಿರ

**ಗ್ವಾಲಿಯರ್ ರಾಮಕೃಷ್ಣ ಮಿಷನ್ ಆಶ್ರಮ**ವು ನವಂಬರ್ ೨೬ರಂದು **ರಾಮಕೃಷ್ಣ ವಿದ್ಯಾಮಂದಿರ**ದ ಆವರಣದಲ್ಲಿ **'ಯೋಗ ಕಾರ್ಯಾಗಾರ'**ವನ್ನು ನಡೆಸಿತು. ೩೨ ಶಾಲೆಗಳಿಂದ ಬಂದ ಯೋಗ ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ಆಸಕ್ತ ಯೋಗಪಟುಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಪ್ರಾತಃಕಾಲ ೬.೩೦ರಿಂದ ೮.೩೦ರ ವರೆಗೆ ಉದ್ಘಾಟನೆ, ಸಂಕ್ಷಿಪ್ತ ಭಾಷಣಗಳ ಬಳಿಕ ಶಿಬಿರಾರ್ಥಿಗಳಿಗೆ ಉಚಿತ ಸಮವಸ್ತ್ರ ನೀಡಲಾಯಿತು. ಬಳಿಕ ಸೂರ್ಯ ನಮಸ್ಕಾರ ಮೊದಲಾದ ಯೋಗಾಸನಗಳ ಪ್ರದರ್ಶನ ನಡೆಯಿತು.

### ಸ್ವಚ್ಛಭಾರತ ಅಭಿಯಾನ

**ಕೊಯಮತ್ತೂರು ವಿದ್ಯಾಲಯವು** ನವೆಂಬರ್ ೧೧ರಿಂದ ೧೮ರ ವರೆಗೆ ನಡೆಸಿದ ನಾಲ್ಕು ಸ್ವಚ್ಛತಾ ಕಾರ್ಯಕ್ರಮಗಳಲ್ಲಿ , ವಿದ್ಯಾಲಯದ ವಿದ್ಯಾರ್ಥಿಗಳು ಶಾಲೆ, ಸರ್ಕಾರಿ ಕಛೇರಿಗಳೂ ಸೇರಿದಂತೆ ಕೆಲವು ಸಾರ್ವಜನಿಕ ಸ್ಥಳಗಳನ್ನು ಸ್ವಚ್ಛಗೊಳಿಸಿದರು.

**ಮಂಗಳೂರು ರಾಮಕೃಷ್ಣ ಮಠ** ನಡೆಸುತ್ತಿರುವ **'ಸ್ವಚ್ಛ ಮಂಗಳೂರು'** ಕಾರ್ಯಕ್ರಮದ ನಾಲ್ಕನೇ ಹಂತದ ಕಾರ್ಯಕ್ರಮಗಳ ಉದ್ಘಾಟನೆಯನ್ನು ಕೇಂದ್ರ ಸರ್ಕಾರ ಕುಡಿಯುವ ನೀರು ಹಾಗೂ ನೈರ್ಮಲ್ಯ ಸಚಿವರಾದ ಶ್ರೀರಮೇಶ್ ಜಿಗಜಿಣಗಿಯವರು ನೆರವೇರಿಸಿದರು. ಇದರ ಅಂಗವಾಗಿ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು: ೧) ನಾಲ್ಕು ಭಾನುವಾರಗಳಂದು ಮಂಗಳೂರಿನಲ್ಲಿ ನಾಲ್ಕು ಕಾರ್ಯಕ್ರಮಗಳು. ೨) ೩೦೦ ಮಂದಿ ಸ್ವಯಂಸೇವಕರಿಂದ ಸುಮಾರು ೩೦೦೦ ಮನೆಗಳಿಗೆ ಭೇಟಿಯಿತ್ತು, ಸ್ವಚ್ಛತೆಯ ಅರಿವನ್ನು ಮೂಡಿಸುವ ಕಾರ್ಯಕ್ರಮ ೩) ದಕ್ಷಿಣ ಕನ್ನಡ ಜಿಲ್ಲೆಯ ೮೦ ಹಳ್ಳಿಗಳಲ್ಲಿ ಸ್ವಚ್ಛತಾ ಕಾರ್ಯಕ್ರಮ. ೪) ೧೦೧ ಶಾಲೆಗಳಲ್ಲಿ ನಡೆದ ಸ್ವಚ್ಛತೆಯ ಅರಿವು ನೀಡುವ ಕಾರ್ಯಕ್ರಮದಲ್ಲಿ ೧೦,೨೫೮ ವಿದ್ಯಾರ್ಥಿಗಳು ಭಾಗವಹಿಸಿದರು.

ಇದಲ್ಲದೆ **ಕಾಮಾರಪುಕುರ** ಹಾಗೂ **ಕೊಯಿಲಾಂಡಿ** ಆಶ್ರಮಗಳು 'ಸ್ವಚ್ಛಭಾರತ' ಕಾರ್ಯಕ್ರಮಗಳನ್ನು ನಡೆಸಿದವು.






**ಗ್ವಾಲಿಯರ್ ರಾಮಕೃಷ್ಣ ಮಿಷನ್ ನಲ್ಲಿ ಯೋಗ ಶಿಬಿರ**

Managing Editor : Swami Atmajnananda Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

VIVEKA PRABHA (KANNADA MONTHLY)
January 2018, Vol.19, No.01, No.of pages : 108

Registered With Registrar of News Papers Of India under 72356/2000.postal Regn.No.KA/SK/MYS/480/ 2015-17. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2015-17



Printed at mayur graphics,Bangalore